ತ. ವೆಂ. ಸ್ಮಾರಕ ಗ್ರಂಥಮಾಲೆ

# ಮುರಿದ ಮದುವೆ

[illegible]. ವೆಂಕಟಯ್ಯ

ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ,
ಮೈಸೂರು.

# ಮೊದಲನೆಯ ಮುದ್ರಣದ ಮುನ್ನುಡಿ

ದೇವಾಂಶ ಸಂಭೂತರ, ರಾಜಮಹಾರಾಜರ ಜೀವನ ವೃತ್ತಾಂತವನ್ನು ಒಳಗೊಂಡುದೇ ಸಾಹಿತ್ಯವೆಂಬ ನಂಬಿಕೆ ಇತ್ತು, ಒಂದು ಕಾಲದಲ್ಲಿ. ಇಂದು ಆ ಭಾವನೆ ಬದಲಾಯಿಸಿದೆ. ಸಾಮಾನ್ಯರಿಗೆ ಎಟುಕದಂತೆ ಸಿಂಹಾಸನವೇರಿ ಕುಳಿತಿದ್ದ ಸಾಹಿತ್ಯದೇವಿ ಇಂದು ಜನತಾ ಜನಾರ್ದನನ ಸೇವೆಗೆಂದು ಕಂಕಣ ಕಟ್ಟಿದ್ದಾಳೆ. ಸಾಮಾನ್ಯ ಮಾನವನಿಗೂ ಒಂದು ಚೈತನ್ಯವಿದೆ, ಆತ್ಮವಿದೆ, ರಾಗವಿರಾಗಗಳಿವೆ, ಮಹಾಪುರುಷನಂತೆ ಬೀದಿಯ ಭಿಕಾರಿಯೂ ಸಂತೋಷದಿಂದ ನಲಿಯುತ್ತಾನೆ, ಸಂಕಟದಿಂದ ಮರುಗುತ್ತಾನೆ. ಆತನ ಬಾಳಿನ ಏರುತಗ್ಗುಗಳೂ ಸಾಹಿತ್ಯಕ್ಕೆ ವಸ್ತುವಾಗಬಲ್ಲವು. ಈ ಭಾವನೆಯಿಂದ ಉದಿಸುತ್ತಿರುವ ಸಾಹಿತ್ಯ ಶ್ರೇಣಿಗೆ ಸೇರಬೇಕಾದುದು "ಮುರಿದ ಮದುವೆ" ಕಾಲೇಜು ಮೆಟ್ಟಿಲನ್ನು ಹತ್ತಿದ ಯುವಕನೊಬ್ಬನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟರೆ, ಅವಳು ತನ್ನಿಂದ ದೂರವಾಗಿ ಮನೆಗೆಲಸಕ್ಕೆ ಎರವಾಗುವಳೆಂಬ ಸ್ವಾರ್ಥಿ ಹೊನ್ನಪ್ಪ, ತಾನು ತನ್ನ ತಂಗಿಗೆ ಕೊಟ್ಟ ವಾಗ್ದಾನವನ್ನು ಮುರಿದು ಅವಳನ್ನು ಬೇರೊಬ್ಬ ವರನಿಗೆ ಮದುವೆ ಮಾಡಿಕೊಟ್ಟು, ಆ ಮೂಲಕ ಎಳೆಯ ಬಾಳುಗಳೆರಡು ಅಗಾಧವಾದ ಸಂಕಟಕ್ಕೆ ಒಳಗಾದುವು. ಈ ಕಾದಂಬರಿಯ ಕಥೆ ಇಷ್ಟೆ. ಈ ಕಥೆಯ ಮೂಲಕ ಸಮಾಜದ ಕೆಳಮಟ್ಟದಲ್ಲಿರುವ ಅನಾಗರಿಕ ಸಂಸಾರದ ನೈಜಚಿತ್ರವೊಂದನ್ನು ಬರೆಯ ಹೊರಟಿದ್ದಾರೆ ಶ್ರೀಮಾನ್ ವೆಂಕಟಯ್ಯನವರು. ಇದು ಅವರ ಪ್ರಥಮ ಕೃತಿಯೆಂಬುದನ್ನು ನೆನೆದಾಗ ಇದರಲ್ಲಿ ಕಾಣಬರಬಹುದಾದ ಅರಕೆಗಳೆಲ್ಲವೂ ಕ್ಷಮಾರ್ಹವಾದುವು. ಶ್ರೀಮಾನ್ ವೆಂಕಟಪ್ಪನವರ ಉತ್ಸಾಹ ಅತ್ಯಂತ ಪ್ರೋತ್ಸಾಹಾರ್ಹವಾದುದು. ತಕ್ಕ ಪ್ರೋತ್ಸಾಹ ದೊರೆತಲ್ಲಿ ಅವರ ಕಲಾಶಕ್ತಿ ಬೆಳೆದು ಅವರು ದೊಡ್ಡ ಕಾದಂಬರಿಕಾರರಾಗಬಲ್ಲರು. ಹಾಗಾಗಲೆಂದು ನಾನು ಹಾರೈಸುತ್ತೇನೆ.

**ತ. ಸು. ಶಾಮರಾಯ**

# ಅರಿಕೆ

ನಾನು ಸಾಹಿತ್ಯ ಸಾಗರಕ್ಕೆ ನನ್ನದು ಒಂದು ಬೊಗಸೆ ಜ್ಞಾನ ಜೀವನವನ್ನು ತುಂಬಲು ಹೊರಟವನಲ್ಲ. ಅದು ನನ್ನ ಅಳವನ್ನು ಮೀರಿದುದೆಂದು ನನಗೆ ಗೊತ್ತಿದೆ ನಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಕಣ್ಣಾರ ಕಂಡ ಹಳ್ಳಿಯ ಕೆಲವು ವ್ಯಕ್ತಿಗಳ ಜೀವನ ಚಿತ್ರವನ್ನು ಬರೆದಿಟ್ಟಿದ್ದೆ. ಅದೊಂದು ಕಿರುದೆರೆಯಾಗಲೆಂದು ಮನ ಬಯಸುತ್ತಿದ್ದರೂ, ಭಯದಿಂದ ತಡಿಯಲ್ಲೇ ನಿಂತಿದ್ದೆ. ನನ್ನ ವಿದ್ಯಾ ಗುರುಗಳಾದ ಶ್ರೀ ಟಿ. ಎಸ್ ವೆಂಕಣ್ಣಯ್ಯನವರ ತಮ್ಮಂದಿರೂ ನನ್ನ ತಮ್ಮನ ಗುರುಗಳೂ ಆದ ಶ್ರೀ ತ ಸು. ಶಾಮರಾಯರು ಎಂ ಎ ರವರು ನನ್ನ ಭಯವನ್ನು ನಿವಾರಿಸಿ., ನನ್ನ ಕಾಣಿಕೆಯನ್ನು ಕನ್ನಡ ದೇವಿಗೆ ಅರ್ಪಿಸಲು ನೆರವಾಗಿದ್ದಾರೆ. ಈ 'ಮುರಿದ ಮದುವೆ' ಯ ಕರಡು ಪ್ರತಿಯನ್ನು ಸಂತೋಷದಿಂದ ಓದಿ, ತಿದ್ದಿ ಮುನ್ನಡಿ ಬರೆದು ತಮ್ಮ ಗ್ರಂಥಮಾಲೆಗೆ ಸೇರಿಸಿ ಉಪಕರಿಸಿದ್ದಾರೆ. ಈ ಉಪಕಾರಕ್ಕೆ ನಾನು ಚಿರ ಋಣಿ

ಧನಿಕರು ದಾನಿಗಳಾಗುವುದು ಅತಿ ವಿರಳವಷ್ಟೆ ! ಅಚ್ಚುಹಾಕಿಸಲು ಹಣಕ್ಕಾಗಿ ನಾನು ಅಲೆಯುತ್ತಿದ್ದಾಗ ನನ್ನ ಮಿತ್ರರಾದ ಶ್ರೀ ಎಸ್. ಸಿಂಗಯ್ಯನವರು ಉದಾರವಾಗಿ ಧನ ಸಹಾಯಮಾಡಿದ್ದಾರೆ. ಇವರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸುವುದು ನನ್ನ ಪವಿತ್ರ ಕರ್ತವ್ಯ

ಅಮೂಲ್ಯವಾದ ಸಲಹೆಗಳನ್ನಿತ್ತ ನನ್ನ ಹಿರಿಯ ಮಿತ್ರರೆಲ್ಲರಿಗೂ ಅತಿ ಶೀಘ್ರದಲ್ಲಿಯೇ ಈ ಪುಟ್ಟ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ಮೈಸೂರು ಪ್ರಿಂಟಿಂಗ್ ಪ್ರೆಸ್ ಮಾಲೀಕರು ಶ್ರೀ ಜಿ ಎಚ್. ರಾಮರಾಯರಿಗೂ ನನ್ನ ಅನಂತ ವಂದನೆಗಳು.

ಹೆಮ್ಮನಹಳ್ಳಿ
೧೦—೫—೫೧

**ಜಿ. ವೆಂಕಟಯ್ಯ**

# ಎರಡನೆಯ ಮುದ್ರಣದ ಮುನ್ನುಡಿ

ಶ್ರೀಮಾನ್ ಜಿ ವೆಂಕಟಯ್ಯನವರ ಕಿರುಗಾದಂಬರಿ "ಮುರಿದ ಮದುವೆ"ಯನ್ನು ಮುದ್ರಿಸಿ ಒಂದು ವರುಷ ತುಂಬುವುದರೊಳಗಾಗಿ ಪ್ರತಿಗಳೆಲ್ಲವೂ ಮುಗಿದುಹೋದವು ದ್ವಿತೀಯ ಮುದ್ರಣಕ್ಕಾಗಿ ಮಾಲೆಯ ಹಲವು ಪ್ರೇಮಬಂಧುಗಳು ಒತ್ತಾಯ ಪಡಿಸುತ್ತಿದ್ದರೂ ನಮ್ಮ ಆರ್ಥಿಕ ದುಸ್ಥಿತಿಯಿಂದ ಅದನ್ನು ಹಲವು ಕಾಲ ಮುಂದಕ್ಕೆ ದಬ್ಬಬೇಕಾಯಿತು ಈ ಮಧ್ಯೆ, ಶ್ರೀ ವೆಂಕಟಯ್ಯನವರು ತಮ್ಮ ಕಾದಂಬರಿಯನ್ನು ಹಿಗ್ಗಲಿಸಿ ಪರಿಷ್ಕರಿಸಿದ್ದಾರೆ. ಕಥೆಯು ಒಂದಕ್ಕೆ ಎರಡರಷ್ಟು ಬೆಳೆದುಹೋಗಿದೆ ಆದರೂ ಮೂಲದ ಬಿಕ್ಕಟ್ಟಿಗೆ ಹೆಚ್ಚು ಅಪೋಹ ಬಂದಿಲ್ಲವೆಂದು ಹೇಳಬಹುದು ಕನ್ನಡ ಓದುಗರು ಎಂದಿನಂತೆ ನಮ್ಮನ್ನು ಪ್ರೋತ್ಸಾಹಿಸಿ ನಮ್ಮ ಕಾರ್ಯವನ್ನು ಸಾರ್ಥಕಪಡಿಸುವರೆಂದು ನಂಬಿದ್ದೇವೆ.

ಕಾದಂಬರಿಯನ್ನು ಕುರಿತು ವಿಸ್ತೃತವಾದ ಒಂದು ಲೇಖನವನ್ನು ಬರೆದು, ಈ ಪುಟ್ಟ ಪುಸ್ತಕಕ್ಕೆ ಮುನ್ನುಡಿ ರೂಪವಾಗಿ ಸೇರಿಸಬೇಕೆಂಬ ನಮ್ಮ ಆಕಾಂಕ್ಷೆಯನ್ನು ಅನಿವಾರ್ಯವಾಗಿ ಮುಂದುವರಿಸಬೇಕಾಗಿದೆ ಈ ಪುಸ್ತಕಕ್ಕೆ ಮೂರನೆಯ ಮುದ್ರಣವನ್ನು ಕಾಣುವ ಭಾಗ್ಯ ದೊರೆತರೆ ಆಗ ಇದನ್ನು ಇನ್ನೂ ಮುದ್ದಾಗಿ, ಅಚ್ಚುಕಟ್ಟಾಗಿ, ಆ ಮುನ್ನುಡಿಯೊಡನೆ ಪ್ರಕಟಿಸಬೇಕೆಂಬುದು ನಮ್ಮ ಹೆಬ್ಬಯಕೆ

ಈ ಗ್ರಂಥವನ್ನು ನಮ್ಮ ಮಾಲೆಯಲ್ಲಿ ಸೇರಿಸಲು ಮುಂದೆ ಬಂದ ಶ್ರೀ ಜಿ ವೆಂಕಟಯ್ಯನವರಿಗೂ ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಸೀತಾರಾಘವ ಪ್ರೆಸ್ಸಿನವರಿಗೂ ನಾವು ಕೃತಜ್ಞರಾಗಿದ್ದೇವೆ.

೧೦—೧೦—೫೩ **ತ. ಸು. ಶಾಮರಾಯ**

ಒರಸಿಕೊಳ್ಳುತ್ತಾ ಸಾಧ್ಯವಾದಷ್ಟು ವೇಗವಾಗಿ ನಡೆದುಹೋಗುತ್ತಿದ್ದಳು. ಹಾದಿಯ ಪಕ್ಕದ ಪೊದೆಗಳಲ್ಲಿ ಕಾಡು ಇಲಿಗಳು ಓಡಾಡುವಾಗ ತರಗೆಲೆಯ ಶಬ್ದವಾದರೆ ತಟಕ್ಕನೆ ಆಕೆಯ ಮುಖದಲ್ಲಿ ಬೆವರುಹೆಚ್ಚಾಗಿ ಮೈನವಿರೇಳುತ್ತಿತ್ತು ತಲೆಯಮೇಲಿದ್ದ ಕುಕ್ಕೆಯನ್ನು ಕೆಳಗಿರಿಸಿ, ಒಂದು ಮರದ ನೆರಳಿನಲ್ಲಿ ಕುಳಿತುಕೊಂಡು, ತಾನು ತೌರುಮನೆಯಲ್ಲಿ ಅನುಭವಿಸಿದ ಸವಿನೆನಪುಗಳನ್ನೆಲ್ಲಾ ಒಂದೊಂದಾಗಿ ಆಕೆ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುತ್ತಾ ಹೋದಳು

ರಂಗಯ್ಯ ತಾಯಿಯನ್ನು ಹಿಂಬಾಲಿಸುತ್ತ ಸ್ವಲ್ಪ ದೂರ ಹಿಂದೆ ಬರುತ್ತಿದ್ದ ಆತ ಸುಮಾರು ಇಪ್ಪತ್ತು ವಯಸ್ಸಿನ್ನತರುಣ, ಮಟ್ಟಸವಾದ ಎತ್ತರ, ಆ ಎತ್ತರಕ್ಕೆ ತಕ್ಕಂತೆ ಮೈಕಟ್ಟು, ತಾಯಿಯಂತೆಯೇ ನಸುಬಿಳುಪು ಮಿಶ್ರವಾದ ಬಣ್ಣ; ನೀಳವಾದ ಮೂಗು, ಅಗಲವಾದ ಹಣೆ, ತೀಕ್ಷ್ಣ ದೃಷ್ಟಿಯುಳ್ಳ ಕಣ್ಣುಗಳು ಬೆವರುತ್ತಿದ್ದ ಮುಖವನ್ನು ಆಗಾಗ ಕರವಸ್ತ್ರದಿಂದ ಒರಸಿಕೊಳ್ಳುತ್ತಿದ್ದ ರಸ್ತೆಯ ಎರಡು ಪಕ್ಕಗಳ ಸಾಲು ಮರಗಳಿಂದಿಳಿದ ಅಳಿಲುಗಳು ಇವನ ಮುಂದೆ ಮುಂಗಾಲುಗಳನ್ನು ಎತ್ತಿಕೊಂಡು, ಹಿಂಗಾಲುಗಳ ಮೇಲೆ ಎದ್ದು ನಿಂತು, ಏನನ್ನೋ ಬಾಯಿಗೆ ಹಾಕಿಕೊಳ್ಳುವ ದೃಶ್ಯ ಆಗಾಗ ದೃಷ್ಟಿಗೆ ಗೋಚರಿಸುತ್ತಿತ್ತು ಆತ ಸಮೀಪಿಸಿದಂತೆ ಅವು ಕಿಚ್‌ಕಿಚ್ ಎಂದು ಅರಚುತ್ತಾ ಮರವನ್ನೇರುತ್ತಿದ್ದವು. ಬಹುದೂರದ ಕಣಿವೆಯಲ್ಲಿ ಗೀಜಗನ ಗುಂಪಿನ ಗುಜುಗುಟ್ಟುವ ಶಬ್ದ ನಡುಹಗಲ ಮೌನವನ್ನು ಕದಡುತ್ತಿತ್ತು. ಪಕ್ಕದ ಬೆಟ್ಟ ಒಂದರಲ್ಲಿ ಮರ ಕಡಿಯುವ ಶಬ್ದವು ಅಲೆಅಲೆಯಾಗಿ ಕೇಳುತ್ತಿತ್ತು. ಪಕ್ಕದ ಮರಗಳಲ್ಲಿ ಜೀರುಂಡೆ ಹುಳುಗಳ ಜಿರ್‍ರೆಂಬ ಶಬ್ದವು ಎಡೆಬಿಡದೆ ಮೊರೆಯುತ್ತಿತ್ತು. ಪ್ರಕೃತಿಯ ಶಿವ ಸೌಂದರ್ಯವನ್ನು ಸುತ್ತಲೂ ನೋಡಿದ ಕಣ್ಣು ದೃಷ್ಟಿಯನ್ನೆಲ್ಲಾ ಬಿಟ್ಟು ನೋಡಿದ ಮನಸ್ಸನ್ನು ಸೂರೆ ಮಾಡಿ ಬೆರಗುಗೊಳಿಸಿತು ಆ ಸುಂದರ ದೃಶ್ಯ. ಇದ್ದಕ್ಕಿದ್ದಹಾಗೆ ಸಮಸ್ಯೆಯೊಂದು ಇವನ ಅಂತರಾಳದಲ್ಲಿ ಎದ್ದುನಿಂತಿತು. ಅಂತರಾತ್ಮವು ಯೋಚಿಸಲಾರಂಭಿಸಿತು— "ದೈವಸೃಷ್ಟಿಯು ಏನು ವಿಚಿತ್ರವಾಗಿದೆ. ಈ ಬನದ ಸಿರಿ ಏನು ! ಮರಗಿಡಗಳು ತಳೆದಿರುವ ಬಣ್ಣವೇನು ! ಏನು

ವಿಚಿತ್ರವಾದ ಸೊಬಗು. ಋುಷಿಗಳ ಬೀಡಿನಂತಿದೆ. ಸುತ್ತಲೂ ವನ ಲತೆಗಳಿಂದ ವಿಚಿತ್ರವಾಗಿ ಬಿಗಿದಿರುವ ಬೆಟ್ಟಗುಡ್ಡಗಳ ಚಿತ್ರವನ್ನು ಕೊರೆದ ಶಿಲ್ಪಿಯ ಚಾತುರ್ಯ ವರ್ಣನೆಗೆ ನಿಲುಕದಾಗಿದೆಯಲ್ಲ! ಶಾಂತಿ ಎಲ್ಲೆಲ್ಲೂ ಎರಚಾಡುತ್ತಿದೆ. ಮೂಲಬಿಂಬವಾದ ಸಚ್ಚಿದಾನಂದನ ಪ್ರತಿ ಬಿಂಬವೇ ಈ ಸುಂದರ ಪ್ರಕೃತಿ." ತಾಯಿಯು ಕುಳಿತಿದ್ದ ಸ್ಥಳವು ಸಮೀಪಿ ಸಿತು. ಬಂದವನೇ ಕೇಳಿದ "ಅಮ್ಮ ಒಬ್ಬಳೆ ಬರಲು ಹೆದರಿದೆಯ? ಹಗಲಲ್ಲಿ ಏನು ಭಯ? "

"ಏನಪ್ಪ ಈ ಗೊಂಡಾರಣ್ಯದಲ್ಲಿ ನನ್ನೊಬ್ಬಳನ್ನೇ ಬಿಟ್ಟು ಹಿಂದೆ ನಿಂತೆಯಲ್ಲ! ನರಪ್ರಾಣಿಗಳ ಸುಳಿವೇ ಇಲ್ಲ ಬಿಕೋ ಬಿಕೋ ಅಂತಾದೆ ಈ ಅರಣ್ಯ."

"ಇದೇನಮ್ಮ, ನೀನು ಕಾಡುಸೀಮೆಯಲ್ಲಿ ಹುಟ್ಟಿ ಬೆಳೆದವಳು, ಹೀಗೆ ಅಂಜುತ್ತೀಯೆ ? ಈ ಬೆಟ್ಟಗುಡ್ಡಗಳ ನೋಟ ಎಷ್ಟು ಚೆನ್ನಾಗಿದೆ!"

"ನಾನು ಚಿಕ್ಕವಳಾಗಿದ್ದಾಗ ಜನರ ಜೊತೇಲಿ ದನ ಮೇಯಿ ಸುವುದಕ್ಕೆ ಕಾಡಿಗೆ ಹೋಗುತ್ತಿದ್ದೆ. ಹುಡುಗರಾಗಿದ್ದಾಗ ಯಾವುದೂ ಮನಸ್ಸಿಗೆ ಅಷ್ಟೊಂದು ತಾಕುವುದಿಲ್ಲ. ಈಗ ಒಂಟಿಯಾಗಿ ಕಾಡುಹಾದಿ ಯಲ್ಲಿ ಬರಬಹುದೆ?"

"ಕಾಡು ಎಷ್ಟು ಸೊಗಸಾಗಿದೆಯಮ್ಮ ಕಣ್ಣಿಗೊಂದು ಹಬ್ಬ ಎಷ್ಟು ಶಾಂತವಾಗಿದೆ ಏನು ಹಸರು ಎರಚಾಡುತ್ತದೆ ದೂರದಿಂದ ಯಾವುದೊ ಕಾಡು ಹೂವಿನ ಕಂಪು ಗಾಳಿಯಲ್ಲಿ ತೇಲಿಬರುತ್ತಾ ಇದೆ. ಈ ಹೊಂಗೆ ಮರಗಳು ಹೂವನ್ನು ಚೆಲ್ಲಿ ಪ್ರಯಾಣಿಕರಿಗೆ ಕುಳಿತು ಕೊಳ್ಳಲು ಹಾಸಿಗೆ ಹಾಸಿವೆ. ಎಷ್ಟೊಂದು ದುಂಬಿಗಳು ಹೂವಿನಿಂದ ಹೂವಿಗೆ ಹಾರುತ್ತಾ ಮಧುವನ್ನು ಹೀರುತ್ತಿವೆ. ನಮ್ಮ ಪಟ್ಟಣಗಳಲ್ಲಿ ಯಾವ ಸೊಬಗಿದೆಯಮ್ಮ? ಬೆಟ್ಟದ ತುದಿಗಳು ಮುಗಿಲನ್ನು ಮುತ್ತಿಡು ತ್ತಿವೆ. ನೋಡು ಆ ಹೆಮ್ಮರಗಳು ಭೀಮಾಕಾರವಾಗಿವೆ! ರಾಕ್ಷಸರ ತೋಳುಗಳಂತೆ ದಪ್ಪದಪ್ಪ ರೆಂಬೆಗಳು ಹೇಗೆ ಆಕಾಶದ ಕಡೆ ನುಗ್ಗಿವೆ!"

"ಈಗೇನು ನೋಡೀಯಪ್ಪ! ಕಾಡೆಲ್ಲಾ ಚಿಗುರಿ ಹೂ ಬಿಟ್ಟಾಗ ನೋಡ್ಬೇಕು ಅದರ ಚೆಲುವ. ಹಸುರು ಪಚ್ಚೆ ಹೊಮ್ಮುತ್ತಿರುತ್ತೆ.

ಎಲ್ಲೆಲ್ಲೂ ಹೂವಿನ ವಾಸನೆ ಎರಚಾಡ್ತಾ ಇರುತ್ತೆ. ಆ ಕಾಲದಲ್ಲಿ ಮನೆಗೆ ಬರುವುದಕ್ಕೆ ಮನಸ್ಸಾಗೊಲ್ಲ”

“ಈ ಕಡೆ ವಾಸಮಾಡುವುದಕ್ಕೇ ಒಂದು ಸೊಗಸು ಕಾಣಮ್ಮ. ಮನಸ್ಸು ಎಂಥ ಕಷ್ಟದಿಂದ ಭಾರವಾಗಿದ್ದರೂ ಈ ಪ್ರಕೃತಿಯ ಸೊಬಗನ್ನು ನೋಡಿದಕೂಡಲೇ ಹಗುರವಾಗುತ್ತದೆ. ನೋಡು, ಆ ಹಳ್ಳ ಬೆಟ್ಟವನ್ನು ತಬ್ಬಿ ಹೇಗೆ ಜುಳಜುಳನೆ ಹರಿಯುತ್ತಿದೆ.”

“ಗಿಡಸೀಮೆ ಬಲುಚಂದ ಅಂತ ಕಂಡರೆ ನೀನು ಆಗಾಗ್ಗೆ ಬರಬಹುದಲ್ಲಾ ನಿಮ್ಮ ಹೆತ್ತಮ್ಮನ ಊರಲ್ವೆ ಇದು”

“ಕೆಲಸವಿಲ್ಲದೆ ಹಗಲೆಲ್ಲಾ ಇಲ್ಲಿಗೇಕಮ್ಮ ಬರಬೇಕು ?”

“ನಾನು ಬರುವಹಾಗೆ ಮಾಡ್ತೀನೆ. ಆಗ ನೀನೇ ಬರ್ತೀಯೆ ಹೇಳ್ದ್ಬೆ ಕೇಳ್ದ್ಬೆ”

“ನಿನ್ನ ಕೈಯಲ್ಲೇನಮ್ಮ ಇರುವುದು ಇದೀಗ ಬಲು ಆಶ್ಚರ್ಯವಾಗಿದೆ” ಎಂದ ರಂಗಯ್ಯ ನಸುನಗುತ್ತಾ.

“ನಿನಗೇ ಗೊತ್ತಾಗ್ತದೆ ಮುಂದೆ. ಬರೀ ಮಾತಿನಿಂದ ಏನು ಪ್ರಯೋಜನ, ತೆಪ್ಪನೆ ಬಾರಯ್ಯ” ಎಂದಳು ತಾಯಿ.

“ಸರಿ,ನಡಿಯಮ್ಮ, ಬೇಗ, ಬಿಸಿಲುಏರುತ್ತಿದೆ”ಎಂದು ಹೊರಟ ಮಗ.

ಸಿದ್ದಮ್ಮನ ಮನಸ್ಸಿನಲ್ಲಿದ್ದ ಅಭಿಪ್ರಾಯ ರಂಗಯ್ಯನಿಗೆ ಅರಿವಾಗಲಿಲ್ಲ. ಆಕೆಯ ಮಾತುಗಳು ಒಂದು ಸಮಸ್ಯೆಯಂತೆ ಕಾಣಿಸಿದುವು. ಮತ್ತೆಮತ್ತೆ ಮೆಲುಕುಹಾಕಿದ 'ಇದೇನಪ್ಪ, ನಮ್ಮಮ್ಮ ಹೀಗೆ ಹೇಳುತ್ತಾಳೆ. ನನಗೇನು ಈ ಗಿಡ ಸೀಮೆಯಲ್ಲಿ ಕೆಲಸ, ಹಗಲೆಲ್ಲಾ ಬರುವುದಕ್ಕೆ ?' ಎನ್ನುತ್ತಿತ್ತು ಅವನ ಅಂತರಂಗ. ಆದರೂ ಉತ್ತರ ಯಾವುದೂ ಹೊಳೆಯಲಿಲ್ಲ. ತಾಯಿಯ ಮನಸ್ಸಿನಲ್ಲಿ ಹುದಗಿರುವ ಯಾವುದೊ ಗಹನ ವಿಚಾರ, ದೂರದೃಷ್ಟಿಯಿಂದ ಯೋಚಿಸುತ್ತಿರುವುದು ಮಗನಿಗೆ ಹೇಗೆ ಅರಿವಾಗಬೇಕು? ಮನಸ್ಸು ತಾಯಿಯನ್ನು ಕೇಳುವಂತೆ ಒತ್ತಾಯಪಡಿಸಿತು. ರಂಗಯ್ಯ “ನಾನು ಪದೇ ಪದೇ ಈ ಕಡೆ ಬರುವಂತೆ ಮಾಡುತ್ತೀನೆಂದು ಹೇಳಿದೆಯಲ್ಲ. ಏನಮ್ಮ ಅದರರ್ಥ?” ಎಂದ. ತಾಯಿಯ ಮನಸ್ಸು ಮಗನ ಸುಖದ ಕಡೆ ತಿರುಗಿದ್ದುದರಿಂದ ತಕ್ಷಣ ಉತ್ತರಕೊಡದೆ ಶಾಂತ

ವಾಗಿತ್ತು. ತಾಯಿಯ ಮೌನವು ರಂಗಯ್ಯನ ಕುತೂಹಲವನ್ನು ಇಮ್ಮಡಿಮಾಡಿತು. ಒತ್ತಿ ಕೇಳಿದ. ರಾಮನಗರವನ್ನು ತಲುಪಿದ ಮೇಲೆ ಆ ವಿಚಾರವನ್ನು ತಿಳಿಸುವುದಾಗಿ ಸಿದ್ದಮ್ಮ ಹೇಳಿದಳು. ರಂಗಯ್ಯನ ಮನಸ್ಸು ಅಲ್ಲೋಲಕಲ್ಲೋಲವಾಯಿತು. ಅಂತಹ ಗುಟ್ಟಾದ ಸಮಸ್ಯೆ ಏನಿರಬಹುದು? ಈಗ ಹೇಳಿದರೆ ಏನು ಕೊಳ್ಳೆ ಹೋಗುತ್ತಿತ್ತು. ಸರಿ, ಏನು ಅಂಥ ದೊಡ್ಡ ವಿಚಾರ ಎಂದುಕೊಂಡು ತನಗೆ ತಾನೇ ಸಮಾಧಾನ ಮಾಡಿಕೊಂಡ

೨

ತಾಯಿಯೂ ಮಗನೂ ಭಿನ್ನ ಭಿನ್ನ ಯೋಚನೆಯ ತರಂಗಗಳಲ್ಲಿ ಸಿಕ್ಕಿ ನಡೆಯುತ್ತಿರಲು, ರಾಮನಗರದ ಎಲ್ಲೆಯು ಬಹುಜಾಗ್ರತೆ ಸಿಕ್ಕಿದಂತೆ ಕಂಡಿತು. ತೌರೂರಿನ ಎಲ್ಲೆ ಕಟ್ಟನ್ನು ನೋಡಿದಾಕ್ಷಣವೇ ಸಿದ್ದಮ್ಮನ ಎದೆಯು ಉಬ್ಬಿಹೋಯಿತು ಸಂತೋಷವು ಉಕ್ಕಿ ಉಕ್ಕಿ ಬಂದು ಕಣ್ಣುಗಳಲ್ಲಿ ಒಂದೆರಡು ಹನಿಗಳನ್ನು ಉರುಳಿಸದೆ ಬಿಡಲಿಲ್ಲ ತಾನು ಚಿಕ್ಕಂದಿನಲ್ಲಿ ಆಟಪಾಟವಾಡುತ್ತಿದ್ದ ಸ್ಥಳವನ್ನೂ ಮರಗಳನ್ನೂ ಬಹು ದೂರದಿಂದಲೇ ದಿಟ್ಟಿಸಿ ನೋಡುತ್ತಾ, ಮಗನಿಗೆ ಬೆರಳಿನಿಂದ ತೋರಿಸಿ ಗುರುತಿಸಿದಳು. ರಂಗಯ್ಯ ತಾಯಿಯ ಆನಂದದಲ್ಲಿ ತಾನೂ ಬೆರೆತು ಹೋಗಿದ್ದ. ಕಾಡಿನ ರಮ್ಯ ದೃಶ್ಯವನ್ನು ಕಂಡರೆ ಹಿಗ್ಗುತ್ತಿದ್ದ ಅವನ ಮನಸ್ಸು, ನಾಲ್ಕೈದು ದಿನ ರಾಮನಗರದಲ್ಲಿರಲು ಹಾತೊರೆಯುತ್ತಿತ್ತು ತಾನು ತಾಯಿಯು ತೋರಿದ ಮರಗಿಡಗಳನ್ನು ಕಣ್ಣು ತುಂಬ ನೋಡಿ ನೋಡಿ ಆನಂದಿಸುತಿದ್ದ ಹೆಂಗಸರಿಗೆ ತೌರೂರ ಎಲ್ಲೆಯು ಸಮೀಪಿಸಿದಂತೆಲ್ಲಾ ಅವರಲ್ಲಿ ತುಂಬಿರುವ ಹೃದಯದ ಭಾರವೆಲ್ಲಾ ಹಗುರವಾಗುತ್ತದೆ, ಊರು ಸಮೀಪಿಸಿದರಂತೂ ಮನಸ್ಸು ತೌರುಮನೆಗೆ ಹಾರಿ ಹೋಗುತ್ತದೆ, ಸಂತೋಷ ಸಾಗರಲ್ಲಿ ಮುಳುಗುತ್ತದೆ ಯಾವ ಹೆಣ್ಣಿಗೇ ಆಗಲಿ, ತಾನು ಚಿಕ್ಕಂದಿನಿಂದ ಓಡಿ ಆಡಿ ನಕ್ಕುನಲಿದಾಡಿದ ತೌರೂರನ್ನು ದೃಷ್ಟಿಸುವುದು, ತನ್ನ ಸುತ್ತಲಿರುವ ಪ್ರದೇಶವನ್ನು ಮಿತಿಮೀರಿದ ಯಾವುದೋ ಒಂದು ಆನಂದದಿಂದ ನೋಡುವುದು, ಕ್ಷಣ ಕ್ಷಣಕ್ಕೂ ಮನಸ್ಸು

ತೌರುಮನೆಯನ್ನು ಹೊಕ್ಕು ಬರುವುದು—ಇದು ಕೇವಲ ಸಹಜ ಹೀಗಾಗಿ ಮನಸ್ಸಿಗೆ ಶಾಂತಿ ಇರಲಾರದು ಊರು ಸಮೀಪಿಸಿದ ಹಾಗೆಲ್ಲಾ ಸಿದ್ದಮ್ಮನ ದೃಷ್ಟಿ ತೌರು ಮನೆಯಲ್ಲಿ ಮನೆಗೊಂಡಿತು ದೇಹ ಬೊಂಬೆಯಂತೆ ಕಾಲೆಳೆದುಕೊಂಡು ದಾರಿಯಲ್ಲಿ ತನ್ನಷ್ಟಕ್ಕೆ ತಾನೆ ಹೋಗುತ್ತಿತ್ತು.

ಅತ್ತಿಗೆ ತಿಮ್ಮಕ್ಕನನ್ನು ಕಂಡರೆ ಸಿದ್ದಮ್ಮನಿಗೆ ಪಂಚಪ್ರಾಣ ತಿಮ್ಮಕ್ಕ ಸೊಸೆಯಾಗಿ ಬಂದಾಗ ಆಕೆಯನ್ನು ಪ್ರೀತಿಯಿಂದ ಕಾಣುತ್ತಿದ್ದಳು ಸಿದ್ದಮ್ಮ ಆಕೆಯ ಮನಸ್ಸು ಅತ್ತಿಗೆಯನ್ನು ಎಷ್ಟು ಹೊತ್ತಿಗೆ ಕಾಣಲಿ ಎಂದು ಹಾತೊರೆಯುತ್ತಿತ್ತು ಮನೆ ಬಾಗಿಲಿಗೆ ಬಂದು ನಿಂತಳು ಸಿದ್ದಮ್ಮ ಮನೆಯ ಒಳಗೆ ಕುಳಿತಿದ್ದ ಹೊನ್ನಯ್ಯ ತಂಗಿಯನ್ನು ನೋಡಿ ಬಂದು, ನಗುತ್ತಾ "ಏನು ತಾಯಿ, ಈ ಉರಿಬಿಸಿಲಿನಲ್ಲೇ ಬಂದೆಯ? ಎಷ್ಟುವರ್ಷಕ್ಕೊಂದು ಸಾರಿ ಬರುತ್ತೀಯಮ್ಮ? ಓ! ರಂಗಯ್ಯನೂ ಬಂದಿದ್ದಾನೆ! ಬಾ, ತಾಯಿ, ಒಳಗೆ" ಎಂದು ಮನೆಯ ಒಳಗೆ ಕರೆದುಕೊಂಡು ಹೋದ. ಎಷ್ಟೋ ತಿಂಗಳಿಗೊಮ್ಮೆ ಬಂದ ತಂಗಿಯನ್ನು ನೋಡಿ ಹೊನ್ನಯ್ಯನಿಗೆ ಆನಂದವಾಯಿತು. "ಸಣ್ಣ ಸಣ್ಣ ಮಕ್ಕಳು, ಸುಖವಾಗಿದ್ದಿಯೇನಮ್ಮ? ಯಾಕಮ್ಮ ಅಪ್ಪನ ಮನೇನೆ ತೊರೆದುಬಿಟ್ಟೆ' ಎಂದು ಮುಂತಾಗಿ ಕೇಳಿದ ರಂಗಯ್ಯ ಹೊರಗಡೆ ಜಗುಲಿಯ ಮೇಲೆ ಕುಳಿತ "ಅವ್ವ ಅತ್ತಿಗೆ ಎಲ್ಲಣ್ಣ"? ಎಂದಳು ಸಿದ್ದಮ್ಮ ನಿಮ್ಮ ಅತ್ತಿಗೆ ತೋಟಕ್ಕೆ ಹೋಗಿದ್ದಾಳೆ ಈಗ ಕರಸುತ್ತೇನೆ. ಅಮ್ಮ ಯಾವುದೋ ಊರಿಗೆ ಹೋಗಿದ್ದಾಳೆ' ಎಂದ "ಮನುಷ್ಯನಿಗೆ ಸಂಸಾರ ಅಂದ ಮೇಲೆ ಯಾವುದಾದರೂ ತಾಪತ್ರಯ ಇದ್ದೇ ಇದಯಲ್ಲ. ಅದೂ ಅಲ್ಲದೆ ಬಹಳ ದೂರಾನಪ್ಪಾ ಒಂದು ಸಾರಿ ಇಲ್ಲಿಗೆ ಬಂದು ಹೋಗಬೇಕೆಂದರೆ ಸಾಕಾಗಿ ಹೋಗ್ತದೆ. ಆದಿರಲಿ, ಅತ್ತಿಗೆನ ನೋಡ್ತಿನಿ ತಡಿಯಪ್ಪ'ಎಂದು ಮೇಲೆದ್ದಳು. 'ಇಲ್ಲಿಗೇ ಕರೆಸುತ್ತೇನೆ ಕುಳಿತುಕೊಳ್ಳಮ್ಮ, ದಣಿದು ಬಂದಿದ್ದೀ.'

'ನಾನೇ ತೋಟಕ್ಕೆ ಹೋಗುತೇನೆ' ಎಂದು ಸಿದ್ದಮ್ಮ ಹೇಳಿ ತೋಟದ ಕಡೆ ಹೊರಟಳು ಊರ ಹೆಬ್ಬಾಗಲಿಗೆ ಒಂದು ನೂರು ಗಜ ದೂರದಲ್ಲೇ ಇತ್ತು ತೋಟ. ಸ್ವಲ್ಪ ದೂರದಿಂದಲೇ ಆಕೆ ತನ್ನ ಅತ್ತಿಗೆ

ಯನ್ನು ಕೂಗಿದಳು. ಸಿದ್ದಮ್ಮನ ಧ್ವನಿ ಕಿವಿಗೆ ಬಿದ್ದೊಡನೆ ತಿಮ್ಮಕ್ಕ ಸರಸರನೆ ಬಂದು ಸಿದ್ದಮ್ಮನ ಮುಖವನ್ನೇ ದಿಟ್ಟಿಸಿ ನೋಡುತ್ತಾ 'ಏನು ಅತ್ತಿಗೆ, ಬಹಳ ವರ್ಷಕ್ಕೊಂದುಸಾರಿ ಮುಖ ತೋರಿಸ್ತೀಯೆ. ನಮ್ಮನ್ನು ಮರತೇ ಬಿಟ್ಟಿಯಲ್ಲ!' ಎಂದು ಹೇಳಿದಳು. ಹುಡುಗರ ದೊಡ್ಡವರ ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಾ, ಸಿದ್ದಮ್ಮನ ಉಡಿಗೆ ತೊಡಿಗೆಗಳನ್ನು ನೋಡುತ್ತಾ ಮನೆಗೆ ಬಂದಳು.

'ಅಮ್ಮ ಇನ್ನೂ ಬರಲೇ ಇಲ್ಲ' ಎಂದು ಪುನಃ ಅಣ್ಣನನ್ನು ಕೇಳಿದಳು ಸಿದ್ದಮ್ಮ.

'ಈಗ ಬರುವಹಾಗೆ ಕಾಣಲಿಲ್ಲ. ಪಕ್ಕದ ಊರಿಗೆ ಔಷಧಿ ಕೊಡಲಿಕ್ಕೆ ಹೋಗಿದ್ದಾಳೆ' ಎಂದ ಹೊನ್ನಯ್ಯ.

'ಅಂತು ಚೆನ್ನಾಗಿದ್ದಾಳೆಯೆ?'

"ಆಕೇಗೇನವ್ವ, ಊಟದಲ್ಲೇನಾದರೂ ಕಮ್ಮಿಯೆ? ಬಟ್ಟೆ ಬರಿಗೆ ತೊಂದರೆಯೆ? ಕೆಲಸತಾನೆ ಏನಿದೆ? ನಿನಗೆ ಗೊತ್ತಿಲ್ಲವೆ?"

ಜಗಲಿಯ ಮೇಲೆ ಕುಳಿತಿದ್ದ ರಂಗಯ್ಯನನ್ನು ಒಳಗಡೆ ಕರೆಯುವಂತೆ ಮಗಳು ಲಿಂಗಿಗೆ ಹೊನ್ನಯ್ಯ ಹೇಳಿದ. "ಬಾ ಮಾವಯ್ಯ, ಕರೆಯುತ್ತಾರೆ" ಎಂದಳು ಲಿಂಗಿ ರಂಗಯ್ಯ ಮೌನವಾಗಿ ಲಿಂಗಿಯನ್ನು ಹಿಂಬಾಲಿಸಿ ಬಂದು ಕುಳಿತ

ಲಿಂಗಿಗೆ ಸುಮಾರು ಹನ್ನೊಂದು ವರ್ಷಗಳು ದಾಟಿದ್ದವು ಬಳ್ಳಿಯಂತೆ ಬಳುಕುತ್ತಿದ್ದ ದೇಹ, ನಸುಗೆಂಪು ಮಿಶ್ರವಾದ ಬಿಳಿಯ ಮೈ ಬಣ್ಣ, ತಿದ್ದಿ ಮಾಡಿದಂತಿದ್ದ ಕಣ್ಣು, ಸಂಪಿಗೆಯ ಮೊಗ್ಗಿನಂತಿದ್ದ ಮೂಗು ಚಿಕ್ಕದಾದ ಅವಳ ಮುಖಕ್ಕೆ ಒಂದು ಅಪೂರ್ವ ಕಳೆಯನ್ನು ಕೊಟ್ಟಿತ್ತು.

ಲಿಂಗಿ ರಂಗಯ್ಯನ ಪಕ್ಕದಲ್ಲಿ ಮೌನವಾಗಿ ಕುಳಿತಳು.

"ಏನಪ್ಪ, ಚೆನ್ನಾಗಿ ಓದುತ್ತಾ ಇದ್ದೀಯ?" ಎಂದ ಹೊನ್ನಯ್ಯ ರಂಗಯ್ಯನಿಗೆ

"ತಕ್ಕಮಟ್ಟಿಗೆ ಓದುತ್ತಿದ್ದೇನೆ"

"ಈ ಕಡೆ ತಿರುಗಿನೋಡಬಾರದೆ? ನಮ್ಮನ್ನೆಲ್ಲಾ ಮರತೇ ಬಿಟ್ಟೆ ಅಂತ ಕಾಣ್ತದೆ".

" ಎಲ್ಲಾದರೂ ಉಂಟೆ ಮಾವಯ್ಯ, ಮರೆಯುವುದೆಂದರೆ ಏನು? ಬಿಡುವಿರಲಿಲ್ಲ".

" ದೊಡ್ಡ ಚಾಕರಿ ಸಿಕ್ಕಿದರೆ ನಮ್ಮ ಕಡೆ ಸ್ವಲ್ಪ ನಿಗ ಇಡಪ್ಪ. ನಾವೆಲ್ಲ ಗಿಡಸೀಮೆಯುವರು. ಒಂದು ನಾಲ್ಕಾರಿನಷ್ಟು ದರಖಾಸ್ತಿನಲ್ಲಿ ಜಮೀನು, ಒಂದಷ್ಟು ಫಾರೆಸ್ಟಿನ ಮರಕೊಡಿಸಿದರೆ ಸಾಕಪ್ಪ''

" ಅಂತ ದೊಡ್ಡ ಮಾತು ಏತಕ್ಕೆ? ದೇವರಿದ್ದಾನೆ. ಅಂಥ ಕಾಲ ಬರಲಿ "

ಸಂಜೆ ಊಟ ಮುಗಿಯಿತು ಸಿದ್ದಮ್ಮ, ತಿಮ್ಮಕ್ಕ ರಾತ್ರಿ ಒಂದೇ ಕಡೆ ಮಲಗಿಕೊಂಡರು ಸಿದ್ದಮ್ಮನ ಮನಸ್ಸು ತೌರುಮನೆಯಲ್ಲಿ ಸಂತೋಷದಿಂದ ಗರಿಗೆದರಿ ಹಾರಾಡುತ್ತಿತ್ತು " ಅತ್ತಿಗೆ, ನಮ್ಮಣ್ಣ ಈಗಲಾದರೂ ನಿಮ್ಮನ್ನೆಲ್ಲಾ ಪ್ರೀತಿಯಿಂದ ಕಾಣುತಾನೆಯೋ? ಖರ್ಚು ವೆಚ್ಚದಲ್ಲಿ ಹೇಗೆ?" ಎಂದು ಕೇಳಿದಳು ಸಿದ್ದಮ್ಮ

"ನಾನು ಏನು ಹೇಳಲಿ? ಹಿಂದಿದ್ದ ಹೊಡಬಾಳೇ ಈಗಲೂ. ಈಗ್ಗೆ ಮೂರು ದಿನದಲ್ಲಿ ಒಬ್ಬ ಬಿಕ್ಷುಕ ಬಂದಿದ್ದ ನಮ್ಮ ಲಿಂಗಿಗೆ 'ಸ್ವಲ್ಪ ರಾಗಿ ಹಾಕವ್ವ ಹೋಗಲಿ ಪಾಪ' ಎಂದೆ. ಅವಳು ಒಂದು ಬೊಗಸೆ ರಾಗಿ ಹಾಕಿದ್ದನ್ನು ನೋಡಿ ನಿಮ್ಮ ಅಣ್ಣನವರ ಕಣ್ಣುಗಳು ಕೆಂಪಗಾದವು. ನನ್ನ ಮೇಲೆ ಇದ್ದಕ್ಕಿದ್ದ ಹಾಗೆ ಕುಂಟು ನೆವ ತೆಗೆದು ಸಿಕ್ಕಾಬಟ್ಟೆ ಅಂದರು ಒಂದು ದಿನ ಅರ್ಧರಾತ್ರಿಯಲ್ಲೇ ರಾಗಿ ಬೀಸಿಸಿ ಬತ್ತ ಕುಟ್ಟಿಸಿದರು, ಆಳುಗಳು ಕೆಲಸಕ್ಕೆ ಬರ್ತಾರೆ, ಅವರಿಗೆಲ್ಲಾ ಊಟ ಹಾಕಬೇಕು ಅಂತ ನೆಪ ಹೂಡಿ ಊಟ ಹಾಕಿಸಲೇ ಇಲ್ಲ ಈ ತರಹ ಹಿಂಸೆಯಾದರೆ ಈ ವಯಸ್ಸಿನಾಗೆ ಏನು ಮಾಡಲಿ? ಈ ಮಕ್ಕಳನ್ನು ನೋಡಿಕೊಂಡು ಸಹಿಸಿಕೊಂಡಿದೀನಿ ಹೀನ ಸುಳಿ ಬೋಳಿಸಿದರೆ ಹೋದೀತೆ, ಬಿಡು ಅತ್ತಿಗೆ. ನನ್ನ ಹಣೇಲಿ ಏನೇನು ಬರಿದಿದಿಯೊ ಹಂಗೆ ಆಗ್ತದೆ ನನಗೂ ಈ ಹಾಳು ಜೀವ ಹೋದರೆ ಸಾಕನಿಸಿದೆ "

" ಏನು ಮಾಡುವುದು ಆತನಾಗಿ ತಿಳಿಯದೇ ಇದ್ದುದು; ನಾಲ್ಕು ಮಕ್ಕಳಾದವು; ನಾಲ್ಕು ಜನರ ಹತ್ತಿರ ಕುಳಿತು ಎದ್ದವನೆ ಇನ್ನಾವಾಗ ದೊಡ್ಡ ಗುಣ ಕಲಿಯೋದು?". ಎಂದು ಮುಂತಾಗಿ ಮಾತನಾಡುತಾ

ಆಡುತ್ತಾ ಇಬ್ಬರೂ ನಿದ್ರೆ ಹೋದರು.

ತೋಟದ ಕಡೆ ಸುತ್ತು ಹಾಕಿಕೊಂಡು ಹಾಗೆಯೇ ಎಳೆಕರುಗಳಿಗೆ ಹಸುರು ಹುಲ್ಲು ಕಿತ್ತುಕೊಂಡು ಬರೋಣವೆಂದು ಸಿದ್ದಮ್ಮನನ್ನು ಕರೆದು ಕೊಂಡು ತಿಮ್ಮಕ್ಕ ಮುಂಜಾನೆ ಹೊರಟಳು ಲಿಂಗಿಯೂ ಅವರನ್ನು ಹಿಂಬಾಲಿಸಿದಳು ಹುಲುಸಾಗಿ ಬಿದ್ದಿದ್ದ ಹುಲ್ಲು ಮೆದೆಯನ್ನು ನೋಡಿ ಸಿದ್ದಮ್ಮ "ಏನು ಅತ್ತಿಗೆ ಈ ವರ್ಷದ ಬೆಳೆ ಬಹಳ ಚೆನ್ನಾಗಿದೆ." ಎಂದು ಮಾತಿಗೆ ಮೊದಲು ಮಾಡಿದಳು.

"ಬೆಳೆಯದೆ ಏನು ! ಇದಕ್ಕೆಲ್ಲಾ ನನ್ನ ಎದೆ ರಕ್ತ ಬಸಿದಿದೀನಿ; ಭೂಮಿತಾಯಿ ಅದಕ್ಕೆ ತಕ್ಕಂತೆ ಫಲ ಕೊಟ್ಟಿದಾಳೆ. ಹೊತ್ತಿಗೆ ಸರಿ ಯಾಗಿ ಅನ್ನ ನೀರು ಕಾಣದೆ, ಉಳುವಾಗ ಕಳೆ ಕೀಳುವಾಗ ಸ್ವಲ್ಪ ಕಷ್ಟ ಪಟ್ಟಿದ್ದೇನೆಂದು ತಿಳಿದಿದ್ದೀಯಾ ? ನಿಮ್ಮ ಅಣ್ಣಾನವರು ನನ್ನನ್ನೂ ಮಕ್ಕಳನ್ನೂ ಆಳುಗಳ ಜೊತೆಗೆ ಹಾಕಿಕೊಂಡು ಅರೆದಿದ್ದಾರೆ ಇಷ್ಟು ಮಾಡಿದರೂ ಏನು ಸುಖ ನನಗೆ ? ದೇವರು ಕೊಟ್ಟಿರುವಾಗ ಒಳ್ಳೆ ಊಟ ಮಾಡುವ ಹಾಗಿಲ್ಲ ಅವರಿಗೆ ದುಡ್ಡಿನ ಪಿಶಾಚಿ ಹಿಡಿದುಬಿಟ್ಟಿದೆ. ಹೋಗಲಿ ಬಿಡು ಇದೆಲ್ಲಾ ನನ್ನ ಹಣೆಬರಹ" ಸಿದ್ದಮ್ಮ ಕಣ್ಣು ರೆಪ್ಪೆ ಹೊಡೆಯದೆ ತೆರೆದ ಬಾಯಿಂದ ಕೇಳುತ್ತಿದ್ದು "ನಾನು ತಾನೆ ಈ ಮನೆಯಲ್ಲಿ ಸುಖಪಟ್ಟಿದ್ದೇನೆಂದು ತಿಳಿದುಕೊಂಡಿದ್ದೀಯಾ ಅತ್ತಿಗೆ? ನಿನ್ನ ಮದುವೆಗೆ ಮೊದಲು ನಮ್ಮ ಅಣ್ಣ ನನ್ನನ್ನು ಕೆಲಸವಿಲ್ಲದಾಗಲೂ ಉಸಿರಾಡಿಕೊಳ್ಳುವುದಕ್ಕೆ ಬಿಡುತ್ತಿರಲಿಲ್ಲ ಕೆಲಸವಿಲ್ಲದಾಗ ಕಂಬವನ್ನಾ ದರೂ ಸುತ್ತಿಸುತ್ತಿದ್ದ" ಎಂದಳು ಲಿಂಗಿ ಮೂಕಳಂತೆ ಇವರ ಮಾತು ಕೇಳುತ್ತಾ ಎಳೆ ಹುಲ್ಲನ್ನು ಕಿತ್ತು ಮಕ್ಕರಿಗೆ ಹಾಕುತ್ತಿದ್ದಳು

"ಆ ಸುದ್ದಿ ಬಿಡಿ, ಹೇಗಾದರೂ ಆಗಲಿ. ರಂಗಪ್ಪ ಎತಕ್ಕೆ ಕಂಗೆಟ್ಟು ಹೋಗಿದ್ದಾರೆ ? (ಸ್ವಲ್ಪ ನಗುತ್ತಾ) ಯಾವ ಸಂಸಾರದ ಹೊರೆ ಹೊರಿಸಿ ದ್ದೀರಿ, ಇವರ ಮೇಲೆ."

"ಮೈಸೂರಿನಲ್ಲಿ ಓದುತ್ತಿದ್ದಾನೆ. ಊಟ ಉಪಚಾರಕ್ಕೆ ಅಲ್ಲಿ ಅನುಕೂಲ ಕಡಿಮೆಯಂತೆ ಇದರ ಮೇಲೆ ಹಗಲು ರಾತ್ರೆ ಎನ್ನದೆ ಓದಬೇಕಂತೆ ಶರೀರ ಕೆಡದೆ ಏನು ?"

ಓದಿದ ಮಾತ್ರಕ್ಕೇ ಶರೀರ ಬಾಡಿಹೋಗುತ್ತದೆಯೆ ಎನ್ನುವ ಬಾವ ವನ್ನು ತಿಮ್ಮಕ್ಕ ಮುಖದಿಂದಲೇ ಸೂಚಿಸುತ್ತಾ ಕೇಳಿದಳು "ಅವರು ಎಷ್ಟನೆ ಕಳಾಸು ಓದುತಾರೆ?''

"ಕಾಲೇಜಿನಲ್ಲಿ ಓದುತಾನೆ ಅಷ್ಟು ಗೊತ್ತು''

ಕೆನ್ನೆಯ ಮೇಲೆ ಬೆರಳಿಟ್ಟುಕೊಂಡು ಆಶ್ಚರ್ಯದಿಂದ ''ಕಾಲೇಜು ಅಂದರೆ ದೊಡ್ಡ ಮರಾನೆ?''

"ಹೌದು, ದೊಡ್ಡ ದೊಡ್ಡ ಪುಸ್ತಕ ಓದುವ ಮರ"

ಸರಿ, ಅಷ್ಟೊಂದು ಹೇಗೆ ಅತ್ತಿಗೆ ಓದಿ ಮುಗಿಸೋದು?

"ಹೇಗೆ ಅಂದರೆ ಎಲ್ಲಾ ಓದುವಂಗೆ ಓದಬೇಕವ್ವ"

"ಅದಿರಲಿ ಅತ್ತಿಗೇ, ಈ ವರ್ಷ ರಂಗಪ್ಪನವರಿಗೆ ಮದುವೆಮಾಡಿ ಬಿಡಿ. ಪ್ರಾಯ ಬರ್ತಾ ಇದೆ. ಸಣ್ಣ ವಯಸ್ಸಿನಲ್ಲಿ ಮದುವೆ ಮಾಡಿ ದರೆ ಒಂದು ಚೆಂದ. ಮುಂದಿನ ವರ್ಷ ಯಾರು ಬದುಕುತಾರೊ ಯಾರಿಲ್ಲವೋ"

ಮರೆತಿದ್ದ ಸಿದ್ದಮ್ಮನ ಪ್ರಶ್ನೆ ಅತ್ತಿಗೆಯ ಮಾತಿನಿಂದ ಎಚ್ಚರ ವಾಯಿತು

"ಮಾಡಿದರೆ ಒಳ್ಳೆಯದು. ಹೆಣ್ಣು ತಾನೆ ಹುಡುಕಬೇಕಾಗಿರು ವುದು"

ತಿಮ್ಮಕ್ಕ ತನ್ನ ಮನಸ್ಸಿನಲ್ಲಿ ಅಡಗಿಕೊಂಡಿದ್ದ ಆಶೆಯನ್ನು ಬಚ್ಚಿಟ್ಟುಕೊಂಡು ಹೇಳಿದಳು "ಹೆಣ್ಣಿಗೇನು ದರಿದ್ರ? ಈ ಗಂಡಿಗೆ ಕಾಲಿಗೆ ಹೂ ಹಾಕಿ ಹೆಣ್ಣು ಕೊಡ್ತಾರೆ ಲೋಕದ ಮೇಲೆ ಒಂದು ಗಂಡಿಗೆ ಒಂದು ಹೆಣ್ಣು ಹುಟ್ಟಿಸವನೆ ದೇವರು''

ಸಿದ್ದಮ್ಮ ನಗುಮುಖದಿಂದ "ಅಲ್ಲಿ ಇಲ್ಲಿ ಏಕೆ ಹುಡುಕುವುದು? ನಮ್ಮ ಲಿಂಗಿಯೇ ಇದ್ದಾಳಲ್ಲ! ತಿಂದರೆ ಎಂಜಲಲ್ಲ ಹೊದ್ದಿದರೆ ಮೈಲಿಗೆ ಇಲ್ಲ ನೀನು, ಅಣ್ಣ ಮತ್ತು ಅವ್ವ ಮಾತನಾಡಿಕೊಂಡು ಹೇಳಿಬಿಡಿ ಈ ಬೇಸಿಗೆಯಲ್ಲೇ ಮದುವೆ ಮಾಡಿಬಿಡ್ತೇನೆ'' ಎಂದಳು ಈ ಮಾತುಗಳನ್ನು ಕೇಳಿದ ತಿಮ್ಮಕ್ಕನ ಮುಖ ಆನಂದದಿಂದ ಅರಳಿ ಹೋಯಿತು. ಅತ್ತಿಗೆ ತನ್ನ ದಾರಿಗೇ ಬರುತ್ತಿದ್ದಾಳೆಂದು ಅರಿತಳು.

ಆದರೆ ತನ್ನ ಯಜಮಾನನ ಚಿತ್ರ ಕಣ್ಣ ಮುಂದೆ ಬಂದು ನಿಂತಿತು. 'ನನ್ನದು ಏನು ನಡೀತದೆ?' ಎಂದುಕೊಂಡಳು ಮನಸ್ಸಿನಲ್ಲೇ

"ನನ್ನ ಮನಸ್ಸಿನಲ್ಲೂ ಅದೇ ಇತ್ತು ಅತ್ತಿಗೆ, ನಿಮ್ಮ ಬಾಯಲ್ಲೇ ಆ ಮಾತು ಬಂತು. ನಿಮ್ಮ ಅಣ್ಣನವರು ಈಗಲೇ ಇವಳಿಗೆ ಮದುವೆ ಏರ್ಪಾಡು ಮಾಡ್ತಾ ಇದ್ದಾರೆ. ನೋಡಿ. ಹುಡುಗೀನ ರಾಂಪುರದ ನಂಜಪ್ಪನವರು ತಮ್ಮ ಮಗನಿಗೆ ಕೊಡಿ ಎಂದು ಶನಿವಾರದ ಸಂತೆಯಲ್ಲಿ ಬಹಳ ಪೀಡಿಸಿದರಂತೆ ಆ ಹುಡುಗ ಮೂರನೆ ಪುಸ್ತಕ ಓದಿ ಪೂರ್ತಿ ಮಾಡಿದ್ದಾನಂತೆ ಅವರ ಮನೆಯಲ್ಲಿ ರಾಸು ಇವೆಯಂತೆ ಇಪ್ಪತ್ತೈದು ಖಂಡುಗ ರಾಗಿ ಬೆಳೀತಾರಂತೆ ಹೆಂಚಿನ ಮನೆ ಎರಡು ಕಟ್ಟಿಸಿದ್ದಾರಂತೆ ಇದನ್ನೆಲ್ಲಾ ಕೇಳಿ ನಿಮ್ಮ ಅಣ್ಣನವರ ಮನಸ್ಸು ಆ ಕಡೆಗೆ ಇರುವ ಹಾಗೆ ಕಾಣ್ತದೆ ನಿಮ್ಮ ಮಗನಿಗೆ ನಮ್ಮ ಹುಡುಗಿಯನ್ನು ಮದುವೆಮಾಡಿ ಕಣ್ತುಂಬಾ ನೋಡಬೇಕೆಂದು ನನ್ನಾಸೆ ಇದೆ ಅತ್ತಿಗೆ. ಈ ನಮ್ಮ ಅತ್ತೆಯವರಂತೂ ಈ ಕಾಡುಹಳ್ಳಿಯವರಿಗೆ ಮದುವೆ ಮಾಡಬೇಕು, ಮಾಡಬೇಕು ಅಂತ ಅವಸರ ಪಡ್ತಾರೆ ನಾನು ಏನೇಳಲಿ ಒಂದು ದಿನ ಈ ವಿಚಾರ ಬಂದಾಗ ನಾನು ಮಧ್ಯೆ ಬಾಯಿ ಹಾಕಿ 'ಚಿಕ್ಕಹುಡುಗಿಗೆ ಈಗಾಗಲೇ ಮದುವೆ ಅಂದರೇನು? ಸ್ವಲ್ಪ ಬುದ್ಧಿ ಬರಲಿ ಯಾರಾದರೂ ಹೆಚ್ಚಿಗೆ ಓದಿರುವವರು ಬಂದರೆ ಮದುವೆ ಮಾಡಿಬಿಡುವ' ಅಂದೆ 'ನರಿಯ ಕೂಗು ಗಗನಕೇರೀತೆ' ಅಂತ ನನ್ನ ಮಾತು ಅವರ ಕಿವಿಯಮೇಲೆ ಎಲ್ಲಿ ಬೀಳ್ತದೆ? ನೀವು ಹೆಣ್ಣಿಗೋಸ್ಕರವೇ ಬಂದೆ ಅಂತ ಹೇಳಿ ಏನಾದರೂ ಮಾಡಿ ಒಪ್ಪು ವೀಳ್ಯ ಕೊಟ್ಟುಬಿಡಿ. ನಾನು ನನ್ನ ಕೈಲಾದ ಸಂಚು ಮಾಡ್ತೀನಿ. ದಮ್ಮಯ್ಯ ಅತ್ತಿಗೆ, ಈ ವಿಚಾರಾನಾ ನಾನು ಹೇಳಿದೆ ಅಂತ ಯಾರ ಜೊತೆಯಲ್ಲೂ ಉಸಿರಬೇಡಿ. ನೋಡಿಯೇ ಇದ್ದೀರಿ ನಿಮ್ಮ ಅಣ್ಣನವರ ರಾಕ್ಷಸ ಸ್ವಭಾವಾನ" ಎಂದು ಪಿಸುಮಾತಿನಲ್ಲೇ ಸಿದ್ದಮ್ಮನನ್ನು ಹುರಿದುಂಬಿಸಿದಳು. ಸಿದ್ದಮ್ಮನ ಮನಸ್ಸು ಅತ್ತಿಗೆಯ ಉತ್ತೇಜನದ ಮಾತುಗಳಿಂದ ಬಲವಾಯ್ತು. "ನಿನಗೇ ಆ ಮನಸ್ಸು ಇರುವಾಗ ಇನ್ನೇನು ಬಿಡು. ಹೆತ್ತ ತಾಯಿ ತಾನೆ ಮುಖ್ಯ. ಅಣ್ಣನನ್ನು ಹೇಗಾದರೂ

ಓದಿದ ಮಾತ್ರಕ್ಕೇ ಶರೀರ ಬಾಡಿಹೋಗುತ್ತದೆಯೆ ಎನ್ನುವ ಬಾವ ವನ್ನು ತಿಮ್ಮಕ್ಕ ಮುಖದಿಂದಲೇ ಸೂಚಿಸುತ್ತಾ ಕೇಳಿದಳು "ಅವರು ಎಷ್ಟನೆ ಕಳಾಸು ಓದುತಾರೆ?"

"ಕಾಲೇಜಿನಲ್ಲಿ ಓದುತಾನೆ ಅಷ್ಟು ಗೊತ್ತು"

ಕೆನ್ನೆಯ ಮೇಲೆ ಬೆರಳಿಟ್ಟುಕೊಂಡು ಆಶ್ಚರ್ಯದಿಂದ "ಕಾಲೇಜು ಅಂದರೆ ದೊಡ್ಡ ಮರಾನ?"

"ಹೌದು, ದೊಡ್ಡ ದೊಡ್ಡ ಪುಸ್ತಕ ಓದುವ ಮರ"

ಸರಿ, ಅಷ್ಟೊಂದು ಹೇಗೆ ಅತ್ತಿಗೆ ಓದಿ ಮುಗಿಸೋದು?

"ಹೇಗೆ ಅಂದರೆ ಎಲ್ಲಾ ಓದುವಂಗೆ ಓದಬೇಕವ್ವ"

"ಅದಿರಲಿ ಅತ್ತಿಗೇ, ಈ ವರ್ಷ ರಂಗಪ್ಪನವರಿಗೆ ಮದುವೆಮಾಡಿ ಬಿಡಿ. ಪ್ರಾಯ ಬರ್‍ತಾ ಇದೆ ಸಣ್ಣ ವಯಸ್ಸಿನಲ್ಲಿ ಮದುವೆ ಮಾಡಿ ದರೆ ಒಂದು ಚೆಂದ. ಮುಂದಿನ ವರ್ಷ ಯಾರು ಬದುಕುತಾರೊ ಯಾರಿಲ್ಲವೋ"

ಮರೆತಿದ್ದ ಸಿದ್ದಮ್ಮನ ಪ್ರಶ್ನೆ ಅತ್ತಿಗೆಯ ಮಾತಿನಿಂದ ಎಚ್ಚರ ವಾಯಿತು

"ಮಾಡಿದರೆ ಒಳ್ಳೆಯದು. ಹೆಣ್ಣು ತಾನೆ ಹುಡುಕಬೇಕಾಗಿರು ವುದು"

ತಿಮ್ಮಕ್ಕ ತನ್ನ ಮನಸ್ಸಿನಲ್ಲಿ ಅಡಗಿಕೊಂಡಿದ್ದ ಆಶೆಯನ್ನು ಬಚ್ಚಿಟ್ಟುಕೊಂಡು ಹೇಳಿದಳು "ಹೆಣ್ಣಿಗೇನು ದರಿದ್ರ? ಈ ಗಂಡಿಗೆ ಕಾಲಿಗೆ ಹೂ ಹಾಕಿ ಹೆಣ್ಣು ಕೊಡ್ತಾರೆ ಲೋಕದ ಮೇಲೆ ಒಂದು ಗಂಡಿಗೆ ಒಂದು ಹೆಣ್ಣು ಹುಟ್ಟಿಸವನೆ ದೇವರು"

ಸಿದ್ದಮ್ಮ ನಗುಮುಖದಿಂದ "ಅಲ್ಲಿ ಇಲ್ಲಿ ಏಕೆ ಹುಡುಕುವುದು? ನಮ್ಮ ಲಿಂಗಿಯೇ ಇದ್ದಾಳಲ್ಲ! ತಿಂದರೆ ಎಂಜಲಲ್ಲ ಹೊದ್ದಿದರೆ ಮೈಲಿಗೆ ಇಲ್ಲ ನೀನು, ಅಣ್ಣ ಮತ್ತು ಅವ್ವ ಮಾತನಾಡಿಕೊಂಡು ಹೇಳಬಿಡಿ ಈ ಬೇಸಿಗೆಯಲ್ಲೇ ಮದುವೆ ಮಾಡಿಬಿಡ್ತೇನೆ" ಎಂದಳು ಈ ಮಾತುಗಳನ್ನು ಕೇಳಿದ ತಿಮ್ಮಕ್ಕನ ಮುಖ ಆನಂದದಿಂದ ಅರಳಿ ಹೋಯಿತು. ಅತ್ತಿಗೆ ತನ್ನ ದಾರಿಗೇ ಬರುತ್ತಿದ್ದಾಳೆಂದು ಅರಿತಳು.

ಆದರೆ ತನ್ನ ಯಜಮಾನನ ಚಿತ್ರ ಕಣ್ಣ ಮುಂದೆ ಬಂದು ನಿಂತಿತು. ‘ ನನ್ನದು ಏನು ನಡೀತದೆ?’ ಎಂದುಕೊಂಡಳು ಮನಸ್ಸಿನಲ್ಲೇ

“ನನ್ನ ಮನಸ್ಸಿನಲ್ಲೂ ಅದೇ ಇತ್ತು ಅತ್ತಿಗೆ, ನಿಮ್ಮ ಬಾಯಲ್ಲೇ ಆ ಮಾತು ಬಂತು. ನಿಮ್ಮ ಅಣ್ಣನವರು ಈಗಲೇ ಇವಳಿಗೆ ಮದುವೆ ಏರ್ಪಾಡು ಮಾಡ್ತಾ ಇದ್ದಾರೆ. ನೋಡಿ. ಹುಡುಗೀನ ರಾಂಪುರದ ನಂಜಪ್ಪನವರು ತಮ್ಮ ಮಗನಿಗೆ ಕೊಡಿ ಎಂದು ಶನಿವಾರದ ಸಂತೆಯಲ್ಲಿ ಬಹಳ ಪೀಡಿಸಿದರಂತೆ ಆ ಹುಡುಗ ಮೂರನೆ ಪುಸ್ತಕ ಓದಿ ಪೂರ್ತಿ ಮಾಡಿದ್ದಾನಂತೆ ಅವರ ಮನೆಯಲ್ಲಿ ರಾಸು ಇವೆಯಂತೆ ಇಪ್ಪತ್ತೈದು ಖಂಡುಗ ರಾಗಿ ಬೆಳೀತಾರಂತೆ ಹೆಂಚಿನ ಮನೆ ಎರಡು ಕಟ್ಟಿಸಿದ್ದಾರಂತೆ ಇದನ್ನೆಲ್ಲಾ ಕೇಳಿ ನಿಮ್ಮ ಅಣ್ಣನವರ ಮನಸ್ಸು ಆ ಕಡೆಗೆ ಇರುವ ಹಾಗೆ ಕಾಣ್ತದೆ ನಿಮ್ಮ ಮಗನಿಗೆ ನಮ್ಮ ಹುಡುಗಿಯನ್ನು ಮದುವೆಮಾಡಿ ಕಣ್ತುಂಬಾ ನೋಡಬೇಕಂದು ನನ್ನಾಸೆ ಇದೆ ಅತ್ತಿಗೆ. ಈ ನಮ್ಮ ಅತ್ತೆಯವರಂತೂ ಈ ಕಾಡುಹಳ್ಳಿಯವರಿಗೆ ಮದುವೆ ಮಾಡಬೇಕು, ಮಾಡಬೇಕು ಅಂತ ಅವಸರ ಪಡ್ತಾರೆ ನಾನು ಏನೇಳಲಿ ಒಂದು ದಿನ ಈ ವಿಚಾರ ಬಂದಾಗ ನಾನು ಮಧ್ಯೆ ಬಾಯಿ ಹಾಕಿ ‘ಚಿಕ್ಕಹುಡುಗಿಗೆ ಈಗಾಗಲೇ ಮದುವೆ ಅಂದರೇನು? ಸ್ವಲ್ಪ ಬುದ್ಧಿ ಬರಲಿ ಯಾರಾದರೂ ಹೆಚ್ಚಿಗೆ ಓದಿರುವವರು ಬಂದರೆ ಮದುವೆ ಮಾಡಿಬಿಡುವ’ ಅಂದೆ. ‘ನರಿಯ ಕೂಗು ಗಗನಕೇರೀತೆ’ ಅಂತ ನನ್ನ ಮಾತು ಅವರ ಕಿವಿಯಮೇಲೆ ಎಲ್ಲಿ ಬೀಳ್ತದೆ? ನೀವು ಹೆಣ್ಣಿಗೋಸ್ಕರವೇ ಬಂದೆ ಅಂತ ಹೇಳಿ ಏನಾದರೂ ಮಾಡಿ ಒಪ್ಪ ವೀಳ್ಯ ಕೊಟ್ಟುಬಿಡಿ. ನಾನು ನನ್ನ ಕೈಲಾದ ಸಂಚು ಮಾಡ್ತೀನಿ. ದಮ್ಮಯ್ಯ ಅತ್ತಿಗೆ, ಈ ವಿಚಾರಾನಾ ನಾನು ಹೇಳಿದೆ ಅಂತ ಯಾರ ಜೊತೆಯಲ್ಲೂ ಉಸಿರಬೇಡಿ. ನೋಡಿಯೇ ಇದ್ದೀರಿ ನಿಮ್ಮ ಅಣ್ಣನವರ ರಾಕ್ಷಸ ಸ್ವಭಾವಾನ” ಎಂದು ಪಿಸುಮಾತಿನಲ್ಲೇ ಸಿದ್ದಮ್ಮನನ್ನು ಹುರಿದುಂಬಿಸಿದಳು. ಸಿದ್ದಮ್ಮನ ಮನಸ್ಸು ಅತ್ತಿಗೆಯ ಉತ್ತೇಜನದ ಮಾತುಗಳಿಂದ ಬಲವಾಯ್ತು. “ನಿನಗೇ ಆ ಮನಸ್ಸು ಇರುವಾಗ ಇನ್ನೇನು ಬಿಡು. ಹೆತ್ತ ತಾಯಿ ತಾನೆ ಮುಖ್ಯ. ಅಣ್ಣನನ್ನು ಹೇಗಾದರೂ

ಮಾಡಿ ಒಪ್ಪಿಸುತ್ತೇನೆ" ಎಂದು ತಿಮ್ಮಕ್ಕನಿಗೆ ಭರವಸೆಕೊಟ್ಟಳು ಸಿದ್ದಮ್ಮ. ಮಧ್ಯಾಹ್ನದ ಅಡಿಗೆಗೆ ಹೊತ್ತಾದ್ದರಿಂದ ಮೂವರೂ ತೋಟದಿಂದ ಮನೆಗೆ ಬಂದರು

ಪಕ್ಕದ ಹಳ್ಳಿಗೆ ಮಕ್ಕಳ ಅಸ್ವಸ್ಥತೆಗೆ ವಿಭೂತಿ ಮಂತ್ರಿಸಲು ಹೋಗಿದ್ದ ಹೊನ್ನಮ್ಮ ಮಧ್ಯಾಹ್ನದ ಹೊತ್ತಿಗೆ ಬಂದಳು. ಮಗಳನ್ನು ನೋಡಿ ಸಂತೋಷಪಟ್ಟು 'ಏನವ್ವ ಬಹಳ ಅಪರೂಪವಾಗಿ ಬಿಟ್ಟೆ. ತೌರುಮನೆ ಕಡೆ ತಿರುಗಿ ನೋಡಬಾರದೆ? ಮಕ್ಕಳು ಮರಿ ಎಲ್ಲಾ ಚೆನ್ನಾಗಿದ್ದಾರೆಯೆ ? ನಂಟು ರತ್ನ ಅಂತ ಏತಕ್ಕೆ ಇರೋದು? ಆರು ತಿಂಗಳಿಗೊಂದು ಸಾರಿಯಾದರೂ ಬರಬಾರದೆ!"

"ಎಲ್ಲಾ ಚೆನ್ನಾಗಿದ್ದಾರವ್ವ ಕೆಲ್ಸ ಕಾರ್ಯ ಇದ್ದೆ ಇರ್ತಾದೆ. ಬರಬೇಕೆಂದರೆ ಬಿಡುವೇ ಇಲ್ಲ"

ಹೊನ್ನಮ್ಮ ರಂಗಯ್ಯನ ಕಡೆ ತಿರುಗಿ "ಏನಪ್ಪ! ಆರು ತಿಂಗಳಿಗೊಮ್ಮೆ ನೀನಾದರೂ ಹೆತ್ತಮ್ಮನ ಮನೆಗೆ ಬರಬಾರದೆ ? ಓದಿದೋರೇ ನೆಂಟರ ಮನೆ ಮರೆತರೆ ಹೇಗಪ್ಪ ?"

ರಂಗಯ್ಯ ನಸು ನಗುತ್ತಾ "ಆಗಲಮ್ಮ, ಇನ್ನುಮೇಲೆ ಬರೋಣ. ಇದುವರೆಗೂ ಬಿಡುವಿರಲಿಲ್ಲ" ಎಂದ

"ಹೊರಬಾರದ ಹೊರೆ ಬಿದ್ದಿತ್ತೆ, ನಿನ್ನಮೇಲೆ" ಎಂದು ನಕ್ಕಳು ಹೊನ್ನಮ್ಮ

ಹೊನ್ನಮ್ಮನ ದೇಹ ಹೊಂಬಣ್ಣವಾಗಿ ಇರಲಿಲ್ಲ ಅಚ್ಚಕಪ್ಪು ಅಂದರೂ ಒಪ್ಪತಕ್ಕದ್ದೇ ಮಟ್ಟಸ ಎತ್ತರದ ತೆಳುವಾದ ದೇಹ ಆಕೆಯದು. ವಯಸ್ಸು ಅರವತ್ತನ್ನು ದಾಟಿತ್ತು. ಆಳದಿಂದ ಹೊರಟ ಎರಡು ಕಣ್ಣುಗಳ ಬಿಳಿಯ ಹೊಳಪು ಮಿಂಚಿನಂತೆ ಹೊಳೆಯುತ್ತಿತ್ತು. ಆಕೆಯ ಕರಿಯ ಬಣ್ಣದ ಮುಂಗೈಗಳಿಗೆ ಹಾಕಿದ್ದ ದಪ್ಪ ದಪ್ಪ ಕಡಗಗಳು ಮತ್ತು ಬೆಳ್ಳಿಯ ಬಳೆಗಳು ಕರಿಯ ಕಂಬಕ್ಕೆ ಸುಣ್ಣದ ಪಟ್ಟೆಗಳನ್ನು ಬಳಿದಂತೆ ಕಾಣುತ್ತಿದ್ದುವು ರಾಮನಗರದ ಸುತ್ತುಮುತ್ತಲಿನ ಗ್ರಾಮಗಳವರೂ, ಈಕೆಯ ಬಂಧುಬಳಗದವರೂ ಹೊನ್ನಮ್ಮನ ಗೈರುಹಾಜರಿಯಲ್ಲಿ 'ಕರಿ ಹೊನ್ನಮ್ಮ, ಕರಿ ಹೊನ್ನಮ್ಮ' ಎಂದೇ ಕರೆಯುತ್ತಿದ್ದರು ಹೀಗೆ

ಅವಳ ಮೈ ಬಣ್ಣವೇ ಕಟ್ಟಿ ಹೆಸರು ತಂದದ್ದು ಆಕೆಗೂ ತಿಳಿಯದೇ ಇರಲಿಲ್ಲ. ವಯಸ್ಸಿಗನುಗುಣವಾಗಿ ಸಾಕಾದಷ್ಟು ಲೋಕಾನುಭವವಿತ್ತು. ಯಾರಾದರೂ ಹುಡುಗರು ಆಪ್ಪಿ ತಪ್ಪಿ 'ಕರಿಹೊನ್ನಮ್ಮ' ಅಂತ ಕರೆದಾಗ, ಹುಸಿನಗೆಯನ್ನು ಚೆಲ್ಲುತ್ತಾ 'ಇನ್ನೇನಂತ ಕರಿಯುತ್ತೀರೋ? ನನ್ನ ಮೈ ಬಣ್ಣನೇ ಹಾಗೆ—ನಿಮ್ಮದೇನು ತಪ್ಪು' ಎಂದು ತನಗೆ ತಾನೇ ಸಮಾಧಾನ ಹೊಂದುತ್ತಿದ್ದಳು

ಹೊನ್ನಮ್ಮನು ಹಳ್ಳಿಯಲ್ಲೇ ಹುಟ್ಟಿ ಬೆಳೆದ ಜೀವಿಯಾದರೂ ಚತುರೋಪಾಯಗಳನ್ನು ಬಲ್ಲವಳು. ಆಕೆ ಕೆಲವು ಕಟ್ಟುಕಥೆಗಳನ್ನೂ ಭಾರತ, ರಾಮಾಯಣದಿಂದ ಸ್ವಾರಸ್ಯವಾದ ಪ್ರಸಂಗಗಳನ್ನೂ ಹಳ್ಳಿಗರ ಮನಮುಟ್ಟುವಂತೆ ಹೇಳುವುದರಲ್ಲಿ ನಿಪುಣೆಯಾಗಿದ್ದಳು. ಕೆಲವು ನಾಟಿ ಔಷಧಿಗಳನ್ನು ಮಕ್ಕಳ ಮತ್ತು ಹೆಂಗಸರ ಸಣ್ಣ ಪುಟ್ಟ ಖಾಯಿಲೆಗಳಿಗೆ ಕೊಟ್ಟು ಬಹು ಕಾಲದಿಂದಲೂ ದೊಡ್ಡ ವೈದ್ಯಶಿರೋಪಾಧ್ಯಿಯಲ್ಲಿ ವರ್ತಿಸುತ್ತಿದ್ದಳು. ಆ ಸುತ್ತ ಮುತ್ತಿನ ಹಳ್ಳಿಗಳಿಗೆಲ್ಲಾ ಕರಿ ಹೊನ್ನಮ್ಮನ ವೈದ್ಯ ಬಿಟ್ಟರೆ ಬೇರೆ ಗತಿಯೇ ಇರಲಿಲ್ಲ. ಸರಿ, 'ಹಾಳೂರಿಗೆ ಉಳಿದವನೆ ಗೌಡ' ಅಲ್ಲವೆ ? ಮಕ್ಕಳಿಗಾಗಲಿ, ಹೆಂಗಸರಿಗಾಗಲಿ ಅನಾರೋಗ್ಯವಾದಾಗ ಜನರು ಓಡಿಬಂದು "ನಿನ್ನ ದಮ್ಮಯ್ಯ, ನನ್ನ ಮಗನಿಗೆವಿಭೂತಿ ಮಂತ್ರಿಸಿ, ಔಷಧಿಕೊಟ್ಟು ಖಾಯಿಲೆ ಗುಣಮಾಡು ಒಂದು ಕೊರನಾಡುಸೀರೆ ತೆಗೆದುಕೊಡುತ್ತೇನೆ ಒಂದು ಒಳ್ಳೆ ಕಂಬಳಿ ತೆಗೆದುಕೊಡುತ್ತೇನೆ" ಎನ್ನುತ್ತಿದ್ದರು. ಬಿಸಿಬೂದಿ ಮಂತ್ರಿಸುವುದು, ತನಗೆ ತಿಳಿದ ಗಿಡಮೂಲಿಕೆಯ ಔಷಧಿ ಕೊಡುವುದು— ಹೀಗೆ ಹೊನ್ನಮ್ಮನ ವೈದ್ಯ ಆ ಪ್ರಾಂತದಲ್ಲಿ ಹರಡಿಹೋಗಿತ್ತು. ಯಾರಾದರೂ ಬಂದು "ನನ್ನ ಮಗುವಿಗೆ ಹೊಟ್ಟೆ ಉಬ್ಬರಿಸಿಕೊಂಡಿದೆ. ನೀನು ನೋಡಬೇಕಮ್ಮ" ಎನ್ನುವುದೇ ತಡ. "ನೋಡಿ ದೊಡ್ಡಿಯ ಸಿದ್ದಪ್ಪನ ಮಗನಿಗೆ ಹೀಗೆ ತೊಂದರೆಯಾಗಿತ್ತು. ನಾನು ಹೋಗಿ ವಿಭೂತಿ ಮಂತ್ರಿಸಿ ಔಷಧ ಕೊಟ್ಟೆ. ಕ್ಷಣಮಾತ್ರದಲ್ಲಿ ಮಗು ಲವಲವಿಕೆಯಾಗಿ ತಿರುಗಾಡಿತು. ಒಂದು ಒಳ್ಳೆಯ ಸೀರೆಯನ್ನು ತರಿಸಿಕೊಟ್ಟ" ಎಂದು ಬಂದವರು ಬೆಪ್ಪಾಗುವಂತೆ ಪಲ್ಲವಿ ನುಡಿಯುತ್ತಿದ್ದಳು.

ತಿಮ್ಮಕ್ಕನೂ ಸಿದ್ದಮ್ಮನೂ ಒಳಸಂಚಿನ ಬಲೆಯನ್ನು ನೆಯ್ದು ಹೊನ್ನಯ್ಯನ ಮನಸ್ಸಿಗೆ ಅಡ್ಡಬೇಲಿಹಾಕಲು ಹವಣಿಸುತ್ತಿದ್ದರು. ಹೊನ್ನಮ್ಮನನ್ನು ತಮ್ಮ ಕಡೆ ಸೆಳೆಯಲು ಯಾವ ರೀತಿ ಪ್ರಾರಂಭಿಸ ಬೇಕೆಂದು ಕೆಲವು ಮಾತುಗಳನ್ನು ಹುಡುಕಿ ಜೋಡಿಸುತ್ತಿದ್ದರು. ಸಿದ್ದಮ್ಮ "ನಮ್ಮ ಅವ್ವ ತನ್ನ ಮೊಮ್ಮಗನಿಗೆ ಲಿಂಗಿನ ಕೊಡಬಾರದು ಅನ್ನುತ್ತಾಳೆಯೆ? ಛೀ, ಛೀ ಎಲ್ಲಾದರೂ ಉಂಟೆ ?" ಎಂದು ಹೊನ್ನ ಮ್ಮನ ವಿಷಯದಲ್ಲಿ ಮನಸ್ಸಿಗೆ ಸಮಾಧಾನ ಹೊಂದುತ್ತಿದ್ದರೂ, ತನ್ನ ಅಣ್ಣನ ವರ್ತನೆ, ನಡವಳಿಕೆಗಳು ತನ್ನ ಅನುಭವಕ್ಕೆ ಸಿಕ್ಕಿದ್ದಷ್ಟನ್ನು ನೆನೆದಾಗ ಮಾತ್ರ ಮನಸ್ಸು ಇಳಿಮುಖವಾಗುತ್ತಿತ್ತು 'ಹುಂ, ಇಲ್ಲ ಅನ್ನಿಸಿಕೊಂಡು ಹೋದರೂ ಚಿಂತೆ ಇಲ್ಲ ಕೇಳಿಯೇ ಬಿಡಬೇಕು' ಎಂದು ತುಸ ಧೈರ್ಯವನ್ನು ಮನಸ್ಸಿಗೆ ತಂದುಕೊಳ್ಳುತ್ತಿದ್ದಳು. ಇದೇ ಸಮಯಕ್ಕೆ ಹೊನ್ನಮ್ಮ ಊಟ ಮುಗಿಸಿ ಬಂದು ಅವರ ಪಕ್ಕದಲ್ಲಿ ಕುಳಿತಳು. ಎಲೆ ಅಡಿಕೆಯನ್ನು ಮಗಳಿಗೂ ಸೊಸೆಗೂ ಕೊಟ್ಟು "ತಾಯಿ, ರಂಗಯ್ಯ ಎಲ್ಲಿ ಹೋದನೊ ಕಾಣೆ! ಓಹೊ! ಅವನ ಸ್ನೇಹಿತ ಬಸವಯ್ಯನ ಮನೆ ಹಿಡಿದವನೆ ಕಾಣೆ. ಅವರಿಬ್ಬರಿಗೂ ಚಿಕ್ಕಂದಿನಿಂದ ಎಳ್ಳು ಅಕ್ಕಿ ಬೆರೆತಂತಿದೆ ಇನ್ನು ಬಿಡು, ಅವರಿಬ್ಬರೂ ಎಲ್ಲಿ ಹೋದರೂ ಜೊತೆಯಲ್ಲೇ ಹೋಗ್ತಾರೆ ತಕ್ಕೊ, ಈಗಲೇ ಸುರುಮಾಡಿಸಿದ್ದಾನೆ ಬಸವಯ್ಯ, ಅಕ್ಕಿ ಉಬ್ಬಿಸುವುದಕ್ಕೆ ಇನ್ನು ರಂಗಯ್ಯ ಇರುವವರೆಗೆ ಬಸವಯ್ಯ ತಿರುಗುತ್ತಾನೆ ಆ ಸಾಮಾನು ಬೇಕು, ಈ ಸಾಮಾನು ಬೇಕು ಅಂತ ಆಗಬೇಕಲ್ಲ! ನಮ್ಮ ರಂಗಯ್ಯನಿಗೆ, ಒಂದು ಘಳಿಗೆಯಲ್ಲಿ ಕಣ್ಣಿಗೆ ಬೇಕಾದ ಅಡಿಗೆ ಮಾಡಿಸುತ್ತಾನೆ ತಾಯಿ, ಬಸವಯ್ಯನ ಹೆಂಡತಿಗೆ ನಮ್ಮ ರಂಗಯ್ಯನನ್ನು ಕಂಡರೆ ಪ್ರಾಣ. ಅದೇನು ಅಕ್ಕರೆ ಇದೆಯೋ ಗಂಡ ಹೆಂಡಿರಲ್ಲಿ ನಾ ಕಾಣೆ" ಎಂದಳು. ಮೊಮ್ಮಗಳು ಲಿಂಗಿಯನ್ನು ಕರೆದು "ಬಸವಯ್ಯನ ಮನೆಯಲ್ಲಿ ಮಾವಯ್ಯ ಇದ್ದಾನೆ ಕರೆದುಕೊಂಡು ಬಾ. ಅವನು ಇಂಗ್ಲೀಷ್ ಕಲಿತಿದ್ದಾನೆ; ಓದಿಸುವ ಅದನ್ನು ಕೇಳೋಕೆ ಒಂದು ಸೊಗಸು. ಕೆಂಪುಮುಖದವನಾಡೋದು ಎಡ್, ಬಡ್, ಎಡ್ಡಾಂ ಎನ್ನುತ್ತಾರೆ. ಜೋಕೆ, ನದರಿನಲ್ಲಿ ಕರೆ.

ಚುಲಕ ಪಲಕನೆ ಮಾತಾಡಬೇಡ ಅತ್ತೆ ಮಗ ಅಂತ ಸರಸವಾಗಿ ಮಾತಾಡೀಯೆ" ಎಂದು ಎಚ್ಚರಿಸಿ ಹೇಳಿದಳು ಹೇಳಿದುದೇ ತಡ, ಹನ್ನೊಂದು ವರ್ಷದ ಲಿಂಗಿ ಬಸವಯ್ಯನ ಮನೆಗೆ ಏದುತ್ತಾ ಓಡಿಬಂದಳು. "ಮಾವಯ್ಯ ಅಮ್ಮ ಈಗಲೇ ಬರಹೇಳಿದಳು" ಎಂದು ಹೇಳಿ ರಂಗಯ್ಯನನ್ನು ಒರಗಿ ನಿಂತಳು

ಬಸವಯ್ಯ ಲಿಂಗಿಯನ್ನು ಬಿಟ್ಟಕಣ್ಣುಗಳಿಂದ ನೋಡಿದ. ಅವನ ಅಂತರಾಳದಲ್ಲಿ ವಿಚಾರ ತರಂಗಗಳೆದ್ದುವು. ಮುಖದ ಮೇಲೆ ನಗೆ ಸುಳಿದಾಡುತ್ತಿದ್ದಹಾಗೆಯೇ ಹೇಳಿದ. "ಈಗ ಜೋಡಿ ಸರಿಯಾಗಿದೆ ರಂಗಯ್ಯನವರೆ! ಯಾರ ಮಾತನ್ನೂ ಕೇಳಬೇಡಿ ತೆಪ್ಪನೆ ಈ ಬೇಸಿಗೆಯಲ್ಲಿ ಮಾಡಿಕೊಳ್ಳಿ" ರಂಗಯ್ಯನಿಗೆ ಸ್ನೇಹಿತನ ಮಾತುಗಳು ಆಶ್ಚರ್ಯವಾಗಿ ಕಂಡವು ಇದ್ದಕ್ಕಿದ್ದಹಾಗೆ ಏನೇನೊ ಹೇಳುತ್ತಾರಲ್ಲ ಎಂದು "ಏನು ನೀವು ಹೇಳುವುದು ?" ಎಂದ.

"ನಾನೇನು ಹೇಳುವುದು, ಜೋಡಿ ಸರಿಯಾಗಿದೆ ಅಂದೆ, ಅಷ್ಟೆ"

"ಓ ನಮ್ಮ ಲಿಂಗಿಯನ್ನು ನೋಡಿ ತಾನೆ ?" ಎಂದು ನಗುತಾ ಹೇಳಿದ ರಂಗಯ್ಯ

"ನಿಮ್ಮ ಲಿಂಗಿಯಲ್ಲದೆ ಇನ್ನಾರ ಲಿಂಗಿ ?"

"ಅಂಥ ಕಾಲ ಬರಲಿ ಬಸವಯ್ಯನವರೆ"

"ಕಾಲ ಬರುತ್ತಾ ಇದೆ, ಹೋಗುತ್ತಾ ಇದೆ, ಈ ಬೇಸಿಗೆಯಲ್ಲಿ ಸದ್ದುಮಾಡದೆ ಲಗ್ನ ಮಾಡಿಕೊಳ್ಳಿ ಇಂಥ ಹೆಣ್ಣು ನಿಮಗೆಲ್ಲಿ ಸಿಕ್ಕುತ್ತದೆ ?"

"ಹಾಗಾದರೆ ಇದೇ ಬೇರೆ ಜಾತಿ ಹೆಣ್ಣು ಅನ್ನಿ" ಎಂದು ಲಿಂಗಿಯ ಮುಖವನ್ನು ರಂಗಯ್ಯ ಎವೆ ಇಕ್ಕದೆ ನೋಡುತ್ತಾ ಹೇಳಿದ

"ಪದ್ಮಿನಿ, ಶಂಖಿನಿ, ಚಿತ್ತಿನಿ, ಹಸ್ತಿನಿ, ಜಾತಿ ಅಂತ ಇವೆಯಲ್ಲ. ಅದರಲ್ಲಿ ಉತ್ತಮ ಜಾತಿ ಹೆಣ್ಣು ಇದು"

"ನೀವೂ ಸರಿ ಬಸವಯ್ಯನವರೆ. ಹಳ್ಳಿಗಾಡು ನಮ್ಮ ಸೀಮೆ ಅಂತೀರಿ. ಏನೇನೊ ತಿಳಿದುಕೊಂಡಿದ್ದೀರಿ"

"ಏನೋ ಸ್ವಲ್ಪ ಸ್ವಲ್ಪ, ತಿಳಿದವರ ಹತ್ತಿರ ಕುಳಿತು ಎದ್ದಿದ್ದೇನೆ ಅಷ್ಟೆ."

ಬಸವಯ್ಯ ಲಿಂಗಿಯ ಕಡೆ ತಿರುಗಿ, "ನೋಡು, ನಿಮ್ಮಪ್ಪನಮಾತು ಕೇಳಿದೆಯೋ, ಕೆಟ್ಟಿ. ಇಂಥ ಗಂಡ ನಿನಗೆ ಈ ಲೋಕದಲ್ಲೇ ಸಿಕ್ಕು ವುದಿಲ್ಲ. ಯಾರ ಮಾತನ್ನೂ ಕೇಳಬೇಡ ಸದ್ದು ಮಾಡದೆ ನಿಮ್ಮ ಮಾವನನ್ನು ಮದುವೆ ಮಾಡಿಕೊ" ಎಂದು ಗೇಲಿ ಮಾಡಿದ.

ಲಿಂಗಿಯ ಮುಖ ಕೆಂಪಗಾಯಿತು. ಎಳೆಯ ಮನಸ್ಸಿನ ಮೇಲೆ ಬಸವಯ್ಯನ ಹಾಸ್ಯದ ಮಾತುಗಳು ಬಳ್ಳಿಯ ಮೇಲೆ ಸುಳಿಗಾಳಿ ಬೀಸಿ ದಂತಾಯಿತು "ಹೋಗಣ್ಣ. ನೀನು ಯಾವಾಗಲೂ ಕೀಟಲೆ ಮಾಡುತ್ತೀ. ಆದಕ್ಕೆ ನಾನು ನಿಮ್ಮ ಮನೆ ಕಡೆ ತಿರುಗಿ ನೋಡೋಲ್ಲ" ಎಂದಳು ಲಿಂಗಿ.

"ತಿರುಗಿನೋಡಬೇಡಮ್ಮ "ಆಗಾಗ್ಗೆ ಬಾ ಬೆಲ್ಲ ಬೇವಿನ ಕಾಯಿ ತಿಂದು ಹೋಗು" ಎಂದು ಅಣಕಿಸಿ ಹೇಳಿದ

"ನನಗೆ ಬೆಲ್ಲನೂ ಬೇಡ ಬೇವಿನ ಕಾಯಿಯೂ ಬೇಡ—ಬಾ ಮಾವಯ್ಯ ಹೊತ್ತಾಯ್ತು'' ಎಂದು ಸಿಡುಕಿದಳು ಆ ಹುಡುಗಿ.

"ಈಗಾಗಲೇ ತೆಗೆದೆಯಲ್ಲಮ್ಮ ವರಸೆಯ ಇನ್ನು ಮದುವೆ ಯಾದ ಮೇಲೆ ನಿಮ್ಮ ಮನೆಗೆ ಬಂದರೆ ನಮ್ಮೂರಿನವರು ಅಂತ ಅನ್ನ ಗಿನ್ನ ಹಾಕುತ್ತೀಯೋ, ಇಲ್ಲ ಬಂದ ದಾರಿ ಹಿಡಿಯಿರಿ ಅಂತಿಯೋ?''

"ಹಾಕದೆ ಏನು ಆದರಲ್ಲೂ ಹೆಣ್ಣು ಮಕ್ಕಳಿಗೆ ತೌರೂರಿನವರ ಮೇಲೆ ಅಭಿಮಾನ ಹೆಚ್ಚು. ನಡಿಯಿರಿ ಹೋಗೋಣ'' ಎಂದ ರಂಗಯ್ಯ

"ಮದುವೆಯಾದ ತಕ್ಷಣವೇ ಬಂದು ಸಟ್ಟಾಗಿ ಕುಳಿತುಬಿಡು ತ್ತೀನಮ್ಮ'' ಎಂದು ಹೇಳುತ್ತಾ ಬಸವಯ್ಯನೂ ಹೊರಡಲು ನಿಂತ. ಇಬ್ಬರೂ ಲಿಂಗಿಯೊಡನೆ ಬೀದಿಯನ್ನು ದಾಟಿ ಮನೆ ಸೇರಿದರು.

ಲಿಂಗಿ ರಂಗಯ್ಯನ ಕೈಹಿಡಿದುಕೊಂಡು ಬಾಗಿಲಿಗೆ ಬಂದದ್ದನ್ನು ಹೊನ್ನಮ್ಮ ನೋಡಿ, ಉಕ್ಕಿಬಂದ ಸಂತೋಷದಿಂದ "ನೋಡೆ ತಾಯಿ, ಮದುವೆಯ ಹೆಣ್ಣು ಗಂಡು ಬಂದ ಹಾಗೆ ಬರ್‍ತಿದ್ದಾರೆ. ಈ ವೈಶಾ ಖದ ತಿಂಗಳಲ್ಲೇ ರಂಗಯ್ಯನಿಗೆ ನಮ್ಮ ಲಿಂಗಮ್ಮನನ್ನು ಕೊಟ್ಟು ಮದುವೆ ಮಾಡೇಬಿಡೋಣ. ಈ ವರ್ಷ ಕೈ ತುಂಬ ಬೆಳೆಯೂ ಆಗಿದೆ. ತಾಯಿ, ನಿಮ್ಮ ಮನೆಯಲ್ಲಿ ಚಿನ್ನದ ಸಣ್ಣ ಗುಂಡು, ಗುಬ್ಬಿ ಇದ್ದೇ ಇದೆ.

ಒಂದು ಜೊತೆ ಬಿಳಿ ಹರಳಿನ ಓಲೆ, ಮೇಗಲ ಮನೆ ಶೆಟ್ಟರ ಸೊಸೆ ಗೌರಮ್ಮನ ಕಿವಿಯಲ್ಲಿವೆಯಲ್ಲ, ಅಂಥವು ಮಾಡಿಸಿಬಿಟ್ಟರೆ ತೀರಿ ಹೋಯ್ತು. ಹ್ಯಾಗೂ ಒಂದು ಮೂವತ್ತು ರೂಪಾಯಿಗೆ ರೇಷ್ಮೆ ಸೀರೆ ತಂದೆ ತರ್ತೀರಿ. ಅದ್ದೂರಿಯಲ್ಲೆ ಮಾಡುವ ಮದುವೇನ. ನಿಮ್ಮಣ್ಣನಿಗೆ ತಾನೆ ಏನು ಕಡಿಮೆ ? ದುಡ್ಡಿಲ್ಲವೆ, ದಿನಸಿಯಿಲ್ಲವೆ ? ಚಿಕ್ಕವಯಸ್ಸಿನಲ್ಲಿ ಹೆಣ್ಣು ಮಕ್ಕಳಿಗೆ ಮದುವೆ ಮಾಡ್ಬೇಕು. ನಮ್ಮ ಲಿಂಗವ್ವನಿಗೆ ಪ್ರಾಯ ಬಂದಾಗನೋಡೋಕೆ ಎರಡು ಕಣ್ಣು ಸಾಲುವುದಿಲ್ಲ ಕಣೆ. ಹ್ಯಾಗೂ ನನ್ನ ಮೊಮ್ಮಗ ಓದವನೆ. ಭಾರಿ ನೌಕರಿ ಸಿಕ್ಕದಿದ್ದರೂ ಅವರಿಬ್ಬರ ಅಂಬಲಿ ಗಂಜಿಗೆ ಮೋಸವಾಗುವುದಿಲ್ಲ. ಚಾಕರಿಗೆ ಹೋದಾಗ ನಮ್ಮ ಲಿಂಗವ್ವನಿಗೇನು ಕೆಲಸ? ಹುದ್ದೆದಾರರ ಹೆಂಗಸರ ಹಾಗೆ ಅಚ್ಚುಕಟ್ಟಾಗಿ ಅಡಿಗೆ ಮಾಡಿಕೊಂಡು ಮನೆಯಲ್ಲಿ ಕುಳಿತಿರುವುದು ತಾನೆ? ' ಶೆಟ್ಟಿಯಿಂದ ಪಟ್ಟಣ ಕಂಡೆ ' ಅಂತ ನಾವೆಲ್ಲಾ ಮೈಸೂರು ಅರಮನೆ, ಬೆಂಗಳೂರು ಧರ್ಮರಾಯನ ಕರಗ, ಸುಲ್ತಾನರು ಆಳಿದ ಶ್ರೀರಂಗಪಟ್ಟಣ ನೋಡಿಕೊಬಹುದು. ಏನು ತಾಯಿ ಸುಮ್ಮನೆ ಇದ್ದೀಯೆ! ನಮ್ಮ ತಿಮ್ಮಕ್ಕ ತಾನೆ ಹೆತ್ತವಳು. ಏಕೊ ಬಾಯಿ ಮುಚ್ಚಿಕೊಂಡವಳಲ್ಲ" ಎಂದಳು ಹೊನ್ನಮ್ಮ.

"ಏನರತ್ತೆ, ನಿಮ್ಮಂಥ ದೊಡ್ಡವರು ಹುಂ ಎಂದರೆ ಆಯ್ತು. ನನಗಿಷ್ಟವಿಲ್ಲವೆ? ಯಾಕೆ? ಈ ಗಿಡಸೀಮೆಯವರಿಗೆ ಮದುವೆ ಮಾಡಿ ಕೊಟ್ಟರೆ ಕೋಳಿ ಕೂಗುವುದಕ್ಕಿಂತ ಮೊದಲೇ ತಲೆಯ ಮೇಲೆ ಕಸದ ಮಕ್ಕರಿ, ಸೊಂಟದ ಮೇಲೆ ತುಂಬಿದ ಕೊಡ, ಮಧ್ಯಾಹ್ನದವರೆಗೂ ಈ ಬದಗ ಬಡಿಯಬೇಕು. ದಿನವೂ ರಾಗಿ ಕಲ್ಲು ಕತ್ತಿಗೆ ಕಟ್ಟಿಬಿಡ್ತಾರೆ. ರಂಗಪ್ಪನಿಗೆ ಕೊಡ್ದೆ ಈ ಗಿಡ ಸೀಮೆಯವರಿಗೆ ಕೊಡಿ ; ಅವಳು ಗಂಡನ ಮನೇಲಿ ಮೂರು ದಿನ ಬಾಳ್ತಾಳೆಯೆ ನೋಡುವ" ಎಂದಳು ತಿಮ್ಮಕ್ಕ.

ಸಿದ್ದಮ್ಮನಿಗೆ ಅತ್ತೆ ಸೊಸೆಯರಿಬ್ಬರ ಸಂಭಾಷಣೆಯಿಂದ ಹರ್ಷವಾಯಿತು. ಸುಲಭವಾಗಿ ಕಾರ್ಯ ಸಾಧಿಸುವಾಗ ಸಂತೋಷವಾಗದೆ! ಕನ್ಯಾನ್ವೇಷಣೆಗಾಗಲಿ, ವರಾನ್ವೇಷಣೆಗಾಗಲಿ ಹೋದಾಗ ಮನೆಯ ಹೆಂಗಸರು ಒಪ್ಪಿದರೆ ತೀರಿತು. ಬಸವಯ್ಯ ಏನೋ ಕೇವಲ ಸ್ನೇಹ

ಸಹಜವಾಗಿ ತಾನು ಮಾತಾಡಿದ ಪ್ರಸಂಗ ಫಲದಾಯಕವಾಗಿ ತೀರ್ಮಾನ ವಾಗುವ ಸ್ಥಿತಿಗೆ ಬಂದದ್ದನ್ನು ಜಗುಲಿಯ ಮೇಲೆ ಕುಳಿತು ತನ್ನ ಕಿವಿ ಯಾರ ಕೇಳಿದ ಹಸನ್ಮುಖಿಯಾಗಿ ರಂಗಯ್ಯನ ಕಡೆ ತಿರುಗಿ "ನನಗೆ ಹೇಳಬಾರದೆ, ಹೆಣ್ಣು ನೋಡಲು ಬಂದಿದ್ದೇವಿ ಅಂತ?" ಎಂದ ರಂಗಯ್ಯ ಪೆಚ್ಚಾಗಿ "ಅದಕ್ಕೇನು ಬಂದಿಲ್ಲ ಏನೋ ಹೆಂಗಸರ ಮಾತು ಆ ಕಡೆ ಈ ಕಡೆ ಹರಿದು, ನಮ್ಮ ಲಿಂಗಿಯ ಕತ್ತಿಗೆ ನನ್ನಿಂದ ತಾಲಿ ಬಿಗಿ ಯಿಸಬೇಕೆಂದು ತೀರ್ಮಾನ ಮಾಡಿರುವಹಾಗೆ ಕಾಣುತ್ತೆ" ಎಂದ

"ಇವರನ್ನೇನೋ ಯಾವಕಡೆಗಾದರೂ ತರಬಹುದು ಇವರಪ್ಪ ಇದ್ದಾನಲ್ಲಾ ಪ್ರಚಂಡ, ಅವನಿಗೆ ಯಾರೂ ಬೇಕಿಲ್ಲ. ಗಂಟು ಒಂದಿದ್ದರೆ ಸಾಕು ನಂಟೂ ಬೇಡ, ನ್ಯಾಯವೂ ಬೇಡ"

ಹೊನ್ನಯ್ಯನನ್ನು ಪಕ್ಕದ ಹಳ್ಳಿಯಾದ ಚಂದ್ರಗಿರಿಯ ಗ್ರಾಮಸ್ಥರು ಒಂದು ಸಂಸಾರದ ಜಗಳದಲ್ಲಿ ನ್ಯಾಯವನ್ನು ತೀರ್ಮಾನಿಸಲು ಕರೆಸಿ ದ್ದರು. ಅಲ್ಲಿಗೆ ಹೋಗಿದ್ದವನು ಈ ಮೂವರು ಹೆಂಗಸರೂ ಮಾತಾಡು ತ್ತಿದ್ದ ಸಮಯಕ್ಕೆ ಸರಿಯಾಗಿ ಬಂದ ಜಗುಲಿಯ ಮೇಲೆ ಕುಳಿತಿದ್ದ ರಂಗಯ್ಯ,ಬಸವಯ್ಯರನ್ನು ಕುರಿತು "ಊಟವಾಯಿತೆ?" ಎಂದ ಆಯಿತು ಎಂದು ಉತ್ತರ ಬಂತು. ಮನೆಯ ಒಳ ಹಜಾರಕ್ಕೆ ಹೋದ ಅಲ್ಲಿ ಕುಳಿ ತಿದ್ದ ಸಿದ್ದಮ್ಮನನ್ನು ಕುರಿತು "ಏನು ತಾಯಿ,ಇಲ್ಲಿ ಒಂದು ಸಣ್ಣ ಪಂಚಾ ಯಿತಿ ಸೇರಿದ್ದೀರಿ ಊಟವಾಯಿತೆ?" ಎಂದ ಸಿದ್ದಮ್ಮ ಜಾರಿದ್ದ ತನ್ನ ಸೆರಗನ್ನು ಮೈತುಂಬಾ ಹೊದೆದುಕೊಳ್ಳುತ್ತಾ "ಊಟವಾಯಿತಣ್ಣ ಹೌದು, ನಾವು ಇಲ್ಲೊಂದು ಸಣ್ಣ ಪಂಚಾಯ್ತಿ ಮಾಡ್ತಾ ತೀರ್ಮಾನ ಕೊಡಲು ನಿನಗಾಗಿ ಕಾದಿದ್ದೇವಿ ಅದೇ ಸಮಯಕ್ಕೆ ಬಂದಲ್ಲ" ಎಂದಳು

ಸಿದ್ದಮ್ಮನ ಜೀವ ಪಿಲಿಪಿಲಿಗುಟ್ಟುತ್ತಿತ್ತು 'ಇವನ ಮನಸ್ಸು ಮಹು ಇದ್ದಹಾಗೆ. ಏನು ಹೇಳ್ತಾನೊ ? ದೇವರೇ ಒಳ್ಳೆ ಮನಸ್ಸು ಕೊಡಪ್ಪ' ಎಂದು ಒಳಗೇ ಬೇಡಿದಳು.

"ಅದೇನಮ್ಮ ಪಂಚಾಯತಿ ? ಈಗತಾನೆ ಚಂದ್ರಗಿರಿಯಲ್ಲಿ ಪಂಚಾ ಯಿತಿ ನಡಸಿ ನನಗೂ ಸಾಕಾಗಿ ಹೋಯಿತಮ್ಮ ನಾನು ಕಲಿತ ಬುದ್ಧಿ

ಯನ್ನೆಲ್ಲಾ ವೆಚ್ಚಮಾಡಿದೆ ಆ ಮೊಡ್ಡಸಿದ್ದ ನಿನಗೆ ಗೊತ್ತಲ್ಲ ಅವ ನಿಗೂ ಅವನ ಹೆಂಡತಿಗೂ ಬಹಳ ಮಾರಾಮಾರಿಯಾಗಿ, ಬಹಳ ದಿನ ಗಳಿಂದ ಪಟೇಲರೂ,ಶಾನುಭೋಗರೂ, ದಳ್ವಾಳಿ ನಂಜಯ್ಯ, ಸಾಹುಕಾರ ಶಿದ್ದಲಿಂಗಶೆಟ್ಟಿ,ಮರದಮನೆ ಮಂಚಮ್ಮ ಮತ್ತು ತುಪಾಕಿ ಹನುಮಂತಪ್ಪ ಇವರೆಲ್ಲರೂ ಗಂಡಹೆಂಡಿರನ್ನು ಒಂದುಗೂಡಿಸಲು ಬಹಳ ಪ್ರಯತ್ನ ಪಟ್ಟರು ಸಾಧ್ಯವಾಗಲಿಲ್ಲ ಕೊನೆಗೆ ನನ್ನನ್ನು ಕರೆಸಿದರು ನಾನೂ ಕೂಡ ಬಹಳ ಹೊತ್ತು ಮಾತಿನ ಮಳೆ ಸುರಿಸಿ, 'ಗಾಳಿಗಂಟು ನೀರು ಮೊಟ್ಟೆ' ಮಾಡಿ, ಗಂಡ ಹೆಂಡಿರು ಅನುಮತಿಯಿಂದಿರುವಂತೆ ಒಪ್ಪಿಸಿದೆ. ಕೊನೆಗೆ ಗಂಡನಿಗೆ ಐದು ರೂಪಾಯಿ ಹೆಂಡತಿಗೆ ಐದು ರೂಪಾಯಿ ತಪ್ಪು ಹಾಕಿದೆ ಅಂತು ನನ್ನ ಮಾತಿಗೆ ಎಲ್ಲರೂ ಬೆಲೆ ಕೊಟ್ಟರು ಐದು ರೂಪಾಯಿಯನ್ನು ನಮ್ಮೂರ ದೇವಸ್ಥಾನಕ್ಕೆ ಕೊಡಬೇಕೆಂದು ಕಿತ್ತು ಕೊಂಡೆ. ಈಗ ಸ್ವಲ್ಪ ಹೊಟ್ಟೆಗೆ ಹಾಕಿಕೊಂಡು ಆ ಮೇಲೆ ನಿಮ್ಮ ಪಂಚಾಯಿತಿ ವಿಚಾರಿಸೋಣ" ಎಂದು ಹೇಳಿ ಕೈಕಾಲು ತೊಳೆದು ಊಟಕ್ಕೆ ಕುಳಿತ

ಹೊನ್ನಯ್ಯ ಊಟ ಮುಗಿಸಿ ಬಂದ ಮೇಲೆ ಮೂವರು ಹೆಂಗಸರೂ ಚಂದ್ರಗಿರಿಯಲ್ಲಿ ನಡೆದ ಗಂಡಹೆಂಡಿರ ವ್ಯಾಜ್ಯವನ್ನು ವಿವರಿಸಿ ಹೇಳುವಂತೆ ಆತನನ್ನು ಒತ್ತಾಯಮಾಡಿದರು ಸಂಸಾರದ ವ್ಯಾಜ್ಯಗಳನ್ನು ಆತನ ಬಾಯಿಂದ ಕೇಳಲು ಇವರಿಗೆ ಬಹಳ ಆಸಕ್ತಿ ತಾನು ತೀರ್ಮಾನಿಸಿದ ವ್ಯಾಜ್ಯ ಪ್ರಾರಂಭವಾದುದನ್ನು ಹೆಮ್ಮೆಯಿಂದಹೇಳತೊಡಗಿದ ಹೊನ್ನಯ್ಯ. 'ಕೇಳಿ; ಮೊಡ್ಡಸಿದ್ದ ಪೀಚೆಆಳು, ಕುರೂಪಿ. ಲಗ್ನವಾದ ಹತ್ತು ವರ್ಷದ ಅನಂತರ ಆತನ ಹೆಂಡತಿ ಒಂದು ಹೆಣ್ಣುಮಗುವನ್ನು ಬಿಟ್ಟು ಸತ್ತುಹೋದಳು ಆ ಮಗುವಿಗೆ ಮೂರು ವರ್ಷ ವಯಸ್ಸು. ಪುನಃ ಊರಿನ ತುಂಡಾಳುಗಳು ಸೇರಿ ಆತನ ಅಕ್ಕನ ಮಗಳನ್ನು ಮದುವೆ ಮಾಡಿಕೊಳ್ಳುವಂತೆ ಆತನನ್ನು ಪುಸಲಾಯಿಸಿದರು. ಮೊಡ್ಡಸಿದ್ದ ಹೇಗೋ ಒಪ್ಪಿದ. ಎಲ್ಲರೂ ತಲೆ ಒಂದಕ್ಕೆ ಎರಡು ರೂಪಾಯಿ, ಸ್ವಲ್ಪ ದವಸ ಧಾನ್ಯ ಹಾಕಿ, ಗುಡ್ಡೆ ಮಾರಮ್ಮನ ಪಾಳು ಗುಡಿಯಲ್ಲಿ ಒಂದುಗಳಿಗೆ ಯಲ್ಲೇ ಮದುವೆ ಆಯಿತು ಎನ್ನಿಸಿಬಿಟ್ಟರು. ಆ ಹುಡಿಗಿಗೆ ತಂದೆ ಇರ

ರಿಲ್ಲ. ತಾಯಿ ಬಹಳ ಬಡವಳು. ಈತನಿಗೂ ಯಾರೂ ದಿಕ್ಕಿರಲಿಲ್ಲ. ಹುಡಿಗಿಗೆ ಸುಮಾರು ಇಪ್ಪತ್ತು ವರ್ಷಗಳ ಮೇಲಾಗಿತ್ತು ವಯಸ್ಸು. ಹುಡುಗಿ ಮೊಡ್ಡಿಯ ಎರಡರಷ್ಟು ಎತ್ತರವಾಗಿಯೂ ಗಾತ್ರವಾಗಿಯೂ ಇದ್ದಳು. ಅವಳು ನೀರಿಗೆ ಬಾವಿಯ ಹತ್ತಿರ ಹೋದಾಗಲೆಲ್ಲಾ ಊರಿನ ಹೆಂಗಸರು 'ಆ ಮುಕ್ಕನ ಏನಂತ ಮದುವೆಮಾಡಿಕೊಂಡೆ ನೋಡಿ ನೋಡಿ ಯಾಕೆ! ಯಾರಮನೆಯಲ್ಲಾದರೂ ಕೂಲಿಮಾಡಿಕೊಂಡು, ನಿಮ್ಮ ಮನೆಯಲ್ಲಿ ಎದೆಮೇಲಿನ ಬೆಣ್ಣೆ ಕರಗದಂತೆ ಇರಬಹುದಾಗಿತ್ತು. ಹಾಗೆ ಹೀಗೆ' ಎಂದು ಅವಳ ಮನಸ್ಸನ್ನು ಕೆಡಿಸಿದರು ಈ ಕಾರಣ ದಿಂದ ಗಂಡ ಒಂದೆಂದರೆ ಅವಳು ಎರಡೆನ್ನುವುದಕ್ಕೆ ಶುರುಮಾಡಿದಳು ಮೊಡ್ಡಿಯು ಪೀಚಲ ಆಳಾದರೂ ಮಾತಿನಲ್ಲಿ ಶೂರ ಆದರೆ ಹೆಂಡತಿಯು ದೇಹದ ಗಾತ್ರವನ್ನು ನೋಡುತ್ತಲೇ ಮನಸ್ಸು ಜಗ್ಗುತ್ತಿತ್ತು. ಒಂದು ದಿನ ಅವಳು ನೀರಿಗೆ ಹೋಗಿ ಬಹಳ ಹೊತ್ತಾಗಿ ಬಂದದ್ದರಿಂದ ಇವನಿಗೆ ತುಂಬಾ ಕೋಪ ಬಂದು, ಒಂದು ಉದ್ದವಾದ ದೊಣ್ಣೆಯನ್ನು ತೆಗೆದು ಕೊಂಡು "ಏನುಮಾಡುತ್ತಿದ್ದೆ ಇಷ್ಟು ಹೊತ್ತು ? ಎಲ್ಲಿ ಪೋಲಿ ಪೋಲಿ ಯಾಗಿ ಅಲೆಯುತ್ತಿದ್ದೆ ?" ಎಂದು ಅವಳಿಗೆ ಹೊಡೆಯಲು ಧೈರ್ಯವಿಲ್ಲದೆ ಗೂಂಟದ ಮೇಲಿದ್ದ ನೀರು ತುಂಬಿದ ಗಡಿಗೆಗೆ ಹೊಡೆದ. ಗಡಿಗೆ ನುಚ್ಚು ನೂರಾಗಿ ಮನೆಯೆಲ್ಲಾ ನೀರಾಯಿತು. ಅವಳೂ ರೇಗಿಕೊಂಡು "ಅದೇನು ಮಾಡುತ್ತೀಯೆ? ನೋಡಿಯೇ ಬಿಡುತ್ತೇನೆ" ಎಂದು ಸೆರಗನ್ನು ನಡುವಿಗೆ ಸುತ್ತಿಕೊಂಡು ಅವನ ಕವಚವನ್ನು ಹಿಡಿದುಕೊಂಡು ಮೂಲೆಗೆ ಎರಡು ಮೂರು ಸಾರಿ ತಳ್ಳಿದಳು. ಮೊಡ್ಡಿ ಮುಂದುವರಿಸಿದರೆ ಇನ್ನೂ ಹೆಚ್ಚಿಗೆ ಅವಮಾನವಾಗುತ್ತದೆಂದು ಪೆಚ್ಚಾಗಿ ಸುಮ್ಮನಾದ. ಹೀಗಾಗಿ ಇಬ್ಬರೂ ಒಂದೇ ಕೋಣೆಯಲ್ಲಿ ಬೇರೆ ಬೇರೆ ಒಲೆಯಮೇಲೆ ಅಡಿಗೆ ಮಾಡಿಕೊಂಡು ಕಾಲಹಾಕುತ್ತಿದ್ದರು. ನಾನು ಹೋಗಿ ಇಬ್ಬರಿಗೂ ಬೆದರಿಸಿ, ಅವನು ಸಾಕುತ್ತಿದ್ದ ಕುರಿಮರಿಯನ್ನು ಮಾರಿಸಿ ಐದು ರೂಪಾಯಿ ತಪ್ಪು ಹಾಕಿದೆ. ಅವಳು ಸಾಕುತ್ತಿದ್ದ ಕೋಳಿಗಳನೆಲ್ಲಾ ಮಾರಿಸಿ ಅವಳಿಗೂ ಐದು ರೂಪಾಯಿ ತಪ್ಪುಹಾಕಿದೆ 'ಊರಿನವರೆಲ್ಲಾ ನಿಮ್ಮಂತೆ ಕಲಿತು ಕೊಂಡಾರು, ಜೋಕೆ. ಇನ್ನುಮೇಲೇನಾದರೂ ಈ ತರಹ ದೂರು

ಬಂದರೆ, ಬೆಂಕಿ ನೀರು ಸಿಕ್ಕದಂತೆ ಕಟ್ಟುಮಾಡಿಸುತ್ತೇನೆಂ'ದು" ನಡುಗಿಸಿ ಬಂದೆ" ಎಂದ. ಇವನ ಮಾತನ್ನು ಕೇಳಿ ಮೂವರೂ ಬೆಪ್ಪಾದರು.

"ಏನಮ್ಮಾ ನಿಮ್ಮ ಪಂಚಾಯತಿ?" ಎಂದ ಹೊನ್ನಯ್ಯ. ಯಾವುದೋ ತಮಾಷೆಗೆ ತಂಗಿ ಹೇಳುತ್ತಾಳೆ. ಅಂತಹ ವಿಷಯ ಏನಿದೆ? ಎಂದು ಭಾವಿಸಿದ್ದ ಆತ. ಬಾಯಿಬಿಡುವಾಗ ಸಿದ್ದಮ್ಮನ ತುಟಿಗಳು ಒಂದೆರಡು ಸಾರಿ ಬಿಗಿದು ಬಂದವು ಇಂತಹ ಮುಖ್ಯವಾದ ವಿಷಯ ವನ್ನು ನೇರವಾಗಿ ಹೇಗೆ ಹೇಳಲಿ ಎಂದು ಆಕೆ ಮನಸ್ಸಿನಲ್ಲಿ ತಳಮಳ ಗೊಂಡಳು.

"ಅದೇನು ಹೇಳಮ್ಮ. ಅಣ್ಣನ ಸಂಗಡವೇ ಮುಚ್ಚುಮರೆ? ನಿನ್ನ ಕಷ್ಟಕ್ಕೆ ನಾನು ಎದೆ ಕೊಡದೇ ಮತ್ತಾರು?" ಎಂದು ಹೊನ್ನಯ್ಯ ವಿಷಯವನ್ನು ಸಿದ್ದಮ್ಮನಿಂದ ಹೊರಗೆಡಹಬೇಕೆಂದು ಒತ್ತಾಯಮಾಡಿದ. ಸಿದ್ದಮ್ಮನು ಧೈರ್ಯತಂದುಕೊಂಡಳು 'ಋಣವಿದ್ದರೆ ಆಗುತ್ತದೆ, ಇಲ್ಲ ದಿದ್ದರೆ ಇಲ್ಲ' ಎಂದು ಕೊಂಡಳು ಮನಸ್ಸಿನಲ್ಲಿ.

"ಇನ್ನೇನು ಇಲ್ಲಣ್ಣಾ ನಮ್ಮ ರಂಗಯ್ಯನಿಗೆ ಈ ಬೇಸಿಗೇಲಿ ಮದುವೆ ಮಾಡ್ಬೇಕೂಂತಾ ಮನಸ್ಸು ಮಾಡಿವಿನಿ" ಎಂದಳು. ಒಡನೆ ಹೊನ್ನಯ್ಯ– "ಬಹಳ ಸಂತೋಷ, ಅದಕ್ಕೇನವ್ವ ಮಾಡು, ನಾನೂ ನಿಮ್ಮ ಅತ್ತಿಗೆ ಮತ್ತು ಮಕ್ಕಳೂ ಬಂದು ಕೈಮೇಲೆ ಧಾರೆನೀರುಬಿಟ್ಟು ಬರುತ್ತೇವೆ. ಇಲ್ಲಿ ಯಾವ ಕೆಲಸ ನಿಂತುಹೋದರೂ ಚಿಂತೆ ಇಲ್ಲ. ಆದರೆ ನೋಡವ್ವ, ನಿನ್ನ ಮಗ ಚೆನ್ನಾಗಿ ಓದಿದ್ದಾನೆ ಮಾವನಿಗೂ ಅತ್ತೆಗೂ ಮೋಟಾರು ಖರ್ಚುಕೊಟ್ಟು ಕರೆದುಕೊಂಡು ಹೋಗಲಿ"

'ತನ್ನ ಮಗಳನ್ನೇ ಮದುವೆಮಾಡಿಕೊಳ್ಳಿ' ಎಂದು ಹೇಳಬಹು ದೆಂದು ನಂಬಿದ್ದ ಈ ಮೂರು ಮಂದಿಯೂ ಪೆಚ್ಚುಮೋರೆ ಹಾಕಿ ಕೊಂಡರು ಬೆವರಿದ ಮುಖಗಳನ್ನು ಸೆರಗಿನಿಂದ ಒರಸಿಕೊಂಡರು. ಸಿದ್ದಮ್ಮನ ಮನಸ್ಸು ಕಳವಳಕ್ಕೀಡಾಯಿತು,'ಹೆಣ್ಣು ಎಲ್ಲಿ ನೋಡಿದ್ದೀರಿ? ಏನು? ಎತ್ತ? ಎಂದು ಕೇಳದೆ, ಖರ್ಚುಕೊಡಿ ಬರುತ್ತೇನೆ' ಅನ್ನುತಾನಲ್ಲಾ! ಇಂತವನು ಮಗಳನ್ನು ಕೊಟ್ಟು ಬಡ ತಂಗಿಯ ಸಂಸಾರ ಸುಖವಾಗಿರಲಿ ಎಂದು ಬಯಸುವುದು ನಿಜವೇ?' ಎಂದು. ಇದೇ ಅರಿವಿನ ಅಲೆಗಳು

ತಿಮ್ಮಕ್ಕ ಹೊನ್ನಮ್ಮರ ಮನಸ್ಸಿನಲ್ಲಿಯೂ ಏಳದೆ ಇರಲಿಲ್ಲ. ಸಿದ್ದಮ್ಮ ಹಳಿಗಣ್ಣಾಗಿ "ನಮ್ಮ ಲಿಂಗೀನೇ ತಂದ್ಕೋಬೇಕೆಂದು ನನ್ನ ಆಸೆ. ನನಗೂ ವಯಸ್ಸಾಗ್ತಾ ಬಂತು ತೌರು ಕೊನೆಗಾಣುವಂತಿದೆ. ನಿನ್ನ ಮಗಳನ್ನ ರಂಗಯ್ಯನಿಗೆ ಮದುವೆಮಾಡಿದ್ರೆ ನಂಟು ಬೆಳೀತಾ ಹೋಗ್ತದೆ ನೀನು ಮನಸ್ಸು ಮಾಡಣ್ಣಾ" ಎಂದಳು ಹೊನ್ನಮ್ಮ ಮಧ್ಯೆ ಬಾಯಿಹಾಕಿ "ಮಾತು ಕೊಟ್ಟುಬಿಡಯ್ಯ ನಿನ್ನ ಮಗಳು ಸುಖವಾಗಿ ಬಾಳ್ತಾಳೆ ಹಸುಹೊಡದಿರುವ ಮನೆಗೆ ಕರು ಹೊಡೆಯೋಕ್ಕೇನು ?" ಎಂದಳು. ಹೊನ್ನಯ್ಯ ತನ್ನ ತಾಯಿ, ಹೆಂಡತಿ ಮತ್ತು ತಂಗಿಯರು ನಡಸುತ್ತಿದ್ದ ಮಾತನ್ನು ಸಂಪೂರ್ಣವಾಗಿ ಮನಗಂಡ. 'ಒಳ್ಳೇ ಬುಡಕ್ಕೆ ತಂದರು' ಎಂದುಕೊಂಡು, ಯೋಚಿಸುವವನಂತೆ ನಟಿಸುತ್ತ "ಹೆತ್ತವಳು ತೆಪ್ಪನೆ ಇದ್ದಾಳಲ್ಲಾ" ಎಂದ ತಿಮ್ಮಕ್ಕ ನಸುಗೋಪವನ್ನು ಸೂಸುತ್ತಿರುವ ಮುಖ ಭಂಗಿಯಿಂದ "ತೆಪ್ಪನಿರ್ದೆ ಏನುಮಾಡ್ಲಿ ? ಅಲ್ಲಿಗೇ ಕೊಡಬೇಕು ಇಲ್ದಿದ್ದರೆ ಮುಂದೇನಾದದೂ ನೋಡ್ಕೊಳ್ಳಿ" ಎಂದು ಸಿಡುಕಿನಿಂದ ಹೇಳಿದಳು ಹೊನ್ನಯ್ಯ ಸ್ವಲ್ಪ ಯೋಚಿಸಿದ ಅವನ ಮನಸ್ಸಿನ ಮೇಲೆ ಮುಂದಿನ ಕಷ್ಟ ಸುಖಗಳನ್ನು ಚಿತ್ರಿಸಿಕೊಂಡ "ನಾನು ಒಬ್ಬಂಟಿಗ. ನನ್ನ ಮಗಳನ್ನು ರಂಗಯ್ಯನಿಗೆ ಮದುವೆ ಮಾಡಿದರೆ, ಅವರ ಊರಿಗೆ ಹೋಗಿಬರಲು ಸ್ವಲ್ಪ ಖರ್ಚಾಗುತ್ತೆ? ರಂಗಯ್ಯ ನೌಕರಿಗೆ ಸೇರಿಕೊಂಡರೆ, ನನ್ನ ಮಗಳು ಅವನ ಹಿಂದೆ ಸೀಮೆ ಸೀಮೆ ಸುತ್ತಬೇಕು. ಮಗಳು ಅಳಿಯನೆಂಬ ಪ್ರೇಮಕ್ಕೆ ಕಟ್ಟುಬಿದ್ದು, ಅವರನ್ನು ಹುಡುಕಿಕೊಂಡು ನಾನೂ ಕೂಡ ಸಿಕ್ಕಿದ ಕೆರೆ ನೀರನ್ನೆಲ್ಲಾ ಕುಡಿಯಬೇಕಾಗುತ್ತ ಇದಕ್ಕೆ ಅವಕಾಶ ಕೊಡಬಾರದು ಆದರೆ ಸಧ್ಯಕ್ಕೆ ಸಿದ್ದಮ್ಮನ ಮನಸ್ಸನ್ನೇಕ ನೋಯಿಸಲಿ? ಆಗಲಿ, ಮಾಡಿಕೊಳ್ಳಿ ಎಂದರಾಯಿತು, ಎಂದು ತಂಗಿಯ ಕಡೆ ತಿರುಗಿ "ತಾಯಿ ಇದಾವ ದೊಡ್ಡ ವಿಷಯವೆಂದು ಯೋಚಿಸುತ್ತಿ ? ಧರ್ಮದೇವತೆ ದಾರಿ ಕೊಟ್ಟರೆ ಮಾಡಿಕೊ" ಎಂದ

ಅಷ್ಟರಲ್ಲಿ ಬಸವಯ್ಯನೂ "ಹೊನ್ನಯ್ಯನವರೇ ಸಂತೋಷದ ಸಮಾಚಾರ ಇದು ನಿಮ್ಮ ಬಾಯಿಂದ ಒಂದುಮಾತು ಬಂದರೆ ತೀರಿತು. ಈಗಲೇ ಜೋಯಿಸರ ಹತ್ತಿರಕ್ಕೆ ಕಳುಹಿಸಿಬಿಡೋಣ" ಎಂದ ಹೊನ್ನಯ್ಯ

ಒಳ್ಳೆ ಸಂಕಟಕ್ಕೆ ಸಿಕ್ಕಿದ ಹಾಗಾಯಿತಲ್ಲ ಎಂದುಕೊಳ್ಳುತ್ತಾ "ಆಗಲಿ, ಪಕ್ಕದ ಹಳ್ಳಿ ಜೋಯಿಸರಲ್ಲಿ ಹೋಗಿ ಜಾತಕ ನೋಡಿಸಿ, ಲಗ್ನಕ್ಕೆ ಏರ್ಪಾಡು ಮಾಡಮ್ಮ" ಎಂದ ಈ ಮಾತುಗಳನ್ನು ಕೇಳುತ್ತಲೇ ಸಿದ್ದಮ್ಮ ತಿಮ್ಮಕ್ಕರ ಕೆನ್ನೆಯಮೇಲೆ ಆನಂದಬಾಷ್ಪಗಳು ಮಣಿಸರದಂತೆ ಉರುಳಿಹೋದುವು ಹೊನ್ನಮ್ಮ "ತಾಯಿ ಶಾಸ್ತ್ರಕ್ಕೆ ಬೇಕಾದ ಸಾಮಾನೆಲ್ಲ ತೆಗೆದುಕೊ, ಬೇಗ ಹೋಗುವ ಅವನು ಹೇಳ್ದಾಗಲೇ ಹೋಗ್ಬೇಕು ಇಲ್ಲದಿದ್ದರೆ ಮಾತು ಬದಲಾಯಿಸಿಕೊಳ್ಳೋಕೂ ಹಿಂಜರಿಯೋದಿಲ್ಲ ಅವನು ಗೋಸುಂಬೆ ಜಾತಿಗೆ ಸೇರಿದವ ಅವನ ಮನಸ್ಸು ಮನಸ್ಸಲ್ಲ ಮಗ ಅಂತ ಮಚ್ಚಿಕೊಳ್ಳೋದಿಲ್ಲ ನಾನು ತಕ್ಕೊಳ್ಳಿ ಸಾಮಾನು-ಹಣ್ಣು ಕಾಯಿ ವೀಳ್ಯದ ಎಲೆ" ಎಂದಳು ಸಿದ್ದಮ್ಮನೂ ತಿಮ್ಮಕ್ಕನೂ ಮದುವೆಯ ಚಿತ್ರವನ್ನು ಮನಸ್ಸಿನಲ್ಲಿ ಚಿತ್ರಿಸಿಕೊಳ್ಳುತ್ತಾ, ಸಡಗರದಿಂದ ಸಾಮಾನುಗಳನ್ನು ಸಿದ್ಧಮಾಡಿಕೊಂಡರು ಲಿಂಗಿ ಇವರ ಮಾತುಗಳನ್ನು ಕೇಳುತ್ತಾ ಬಾಳಿನ ಅರಿವಿಲ್ಲದ ದೃಷ್ಟಿಯನ್ನು ಬೀರುತ್ತಿದ್ದ ಕಣ್ಣುಗಳನ್ನು ಮಿಟಮಿಟನೆ ಬಿಡುತ್ತಾ ಕುಳಿತಿದ್ದಳು.

ಹೊನ್ನಮ್ಮ ಸಿದ್ದಮ್ಮನನ್ನು ಕರೆದುಕೊಂಡು ಹೊರಟಳು ಹೊನ್ನಯ್ಯನ ಮನಸ್ಸು ತೂಗುಯ್ಯಾಲೆಗೆ ಸಿಕ್ಕಿತು. 'ಏನೇನೋ ಆತುರಾತುರವಾಗಿ ಹೇಳಿಬಿಟ್ಟೆನಲ್ಲ ನಮ್ಮ ತಾಯಿ ಬೆರಳು ತೋರಿದರೆ ಹಸ್ತ ನುಂಗುತ್ತಾಳೆ ಆಕೆಗೆ ಏನುಗೊತ್ತು ಪ್ರಪಂಚದ ವಿಚಿತ್ರ! ಬಡವರ ಮನೆಗೆ ಹೇಗೆ ಹುಡುಗಿಯನ್ನು ಮದುವೆ ಮಾಡುವುದು ಅಂತ ಕಿಂಚಿತ್ ಮಾತ್ರವಾದರೂ ಆಕೆಯ ಹೃದಯದಲ್ಲಿ ಹುಟ್ಟಲಿಲ್ಲವಲ್ಲ! ಹಂಡತೀನೊ, ಅಳಿಯ ಒಳ್ಳೆ ಲಕ್ಷಣವಾದ ಹುಡುಗ ಅಂತ ಕುರುಡಿಯಾಗಿದ್ದಾಳೆ! ಮೊದಲೆ ಹೆಂಗಸು, ಏನು ತಿಳಿಯುತ್ತದ? ಬಡವರ ಮನೆಗೆ ಮಗಳನ್ನು ಕೊಟ್ಟು ಮದುವೆ ಮಾಡುವುದು ಹೇಗೆ? ನಿಧಾನವಾಗಿ ಹೇಳುತ್ತೇವೆ ಎಂದು ಒಂದು ಮಾತನ್ನಾದರೂ ಬಾಯಿಂದ ತೆಗೆಯಬಾರದೆ? ನಾನುತಾನೆ ಇವರ ಮಾತಿಗೆ ಮರುಳಾದೆನಲ್ಲ! ತಂಗಿಯ ಮೇಲಿನ ಪ್ರೇಮದಿಂದ ನನ್ನ ಬುದ್ಧೀನೆ ಮಂದವಾಯಿತಲ್ಲ! ಇರಲಿ, ನೋಡೋಣ' ಎಂದು ವಿಷಯವನ್ನು ತಿರುತಿರುಗಿ ಮನಸ್ಸಿನಲ್ಲಿ ಮೆಲಕು ಹಾಕಿದ. ನಾನು ಇವರ ಜೊತೆಯಲ್ಲೇ

ಜೋಯಿಸರ ಬಳಿ ಹೋದರೆ ಮೇಲು ಸಮಯಬಂದಹಾಗೆ ಶಾಸ್ತ್ರವನ್ನು ತಿರುಗಿಸಬಹುದು' ಎಂದು ಮನಸ್ಸುಮಾಡಿ ಅವರ ಹಿಂದೆ ಹೊರಟ.

೩

ಹೊನ್ನಮ್ಮ, ಸಿದ್ದಮ್ಮ ಮತ್ತು ಹೊನ್ನಯ್ಯ ಜೋಯಿಸರ ಬಳಿಗೆ ಬಂದರು ಜೋಯಿಸರು ಮನಸ್ಸಿನಲ್ಲೇ 'ಇವನು ಯಾವ ಕಾರ್ಯಕ್ಕೆ ಬಂದರೂ ನಮಗೆ ಎಲ್ಲಕ್ಕೂ ಸೊನ್ನೆ ಬೀಳುತ್ತೆ ಇವನು ಬಾರದಿದ್ದರೆ ಹೆಚ್ಚಿಗೆ ದಕ್ಷಿಣೆ ಬರುತ್ತಿತ್ತು' ಎಂದುಕೊಂಡು "ಏನು ಹೊನ್ನಯ್ಯ ನವರೇ! ಇಷ್ಟು ದೂರ ಬಂದಿದ್ದೀರಿ? ನಿಮ್ಮ ತಾಯಿ ಬಂದಿದ್ದರೆ ಸಾಕಾ ಗಿತ್ತು" ಎಂದು ರಾಗ ಎತ್ತಿದರು ಹೊನ್ನಯ್ಯ "ಇನ್ನೇನು ಇಲ್ಲ ಸ್ವಾಮಿ; ನಮ್ಮ ಲಿಂಗಿ, ನೀವು ನೋಡಿದ್ದೀರಲ್ಲ ಆ ಹುಡುಗಿಗೂ ನನ್ನ ತಂಗಿ ಮಗ ರಂಗಯ್ಯನಿಗೂ ಈ ವೈಶಾಖದಲ್ಲಿ ಲಗ್ನ ಮಾಡಬೇಕೆಂದು ನಮ್ಮ ತಾಯಿ ಏರ್ಪಾಡು ಮಾಡಿದ್ದಾಳೆ ಅದಕ್ಕೆ ಹೆಸರುಬಲ ನೋಡಿಸ ಬೇಕು".

"ಒಳ್ಳೆಯದು, ಕುಳಿತುಕೊಳ್ಳಿ ಶಾಸ್ತ್ರಕ್ಕೆ ಬೇಕಾದ ಸಾಮಾ ನೆಲ್ಲಾ ತಂದಿದ್ದೀರಿ ತಾನೆ"

"ನಮಗೆ ಗೊತ್ತಿಲ್ಲವೆ? ಹೊಸದಾಗಿ ಕೇಳುತೀರಲ್ಲಾ"

ಜೋಯಿಸರು ಶಾಸ್ತ್ರದ ಗಂಟನ್ನು ತಂದು ಕುಳಿತು, ಗಂಧದ ಕಡ್ಡಿ ಹೊತ್ತಿಸಿ, ದೇವರ ಧ್ಯಾನಮಾಡಿ, ಪಂಚಾಂಗವನ್ನು ಬಿಚ್ಚಿ "ಹುಡುಗ ಲಕ್ಷಣವಾಗಿದ್ದಾನೆಯೆ? ವಯಸ್ಸೆಷ್ಟು? ಕೊಂಚ ವಿದ್ಯೆಗಿದ್ಯೆ ಕಲಿತಿದ್ದಾ ನೇಯೆ?" ಎಂದು ಮುಂತಾಗಿ ಕೇಳಿದರು

"ಹುಡುಗನೇನೂ ಬೆಳ್ಳಗಿಲ್ಲದಿದ್ದರೂ, ಮೂಗು ಮುಖ ನೆಟ್ಟಗೆ ಲಕ್ಷಣವಾಗಿದ್ದಾನೆ. ವಯಸ್ಸು ಇಪ್ಪತ್ತಾಗಿದೆ ಅದಾವುದೊ ಕಾಲೇಜಿ ನಲ್ಲಿ ಓದುತ್ತಾನೆ, ಮೈಸೂರಿನಲ್ಲಿ" ಎಂದ ಹೊನ್ನಯ್ಯ ಅವನ ಮನಸ್ಸಿಗೆ ಏನೊ ತಟಕ್ಕನೆ ಹೊಳೆದಂತಾಗಿ, "ಸ್ವಾಮಿ, ನಿಮ್ಮ ಹಸು ಕರುಹಾಕಿ ಯಲ್ಲ, ಅದನ್ನು ಕಣ್ಣಿಂದ ನೋಡಬೇಕು ಕೊಟ್ಟಿಗೆಗೆ ದಯಮಾಡಿಸಿ ಎಂದ. ಇವನ ಕುತಂತ್ರವನ್ನರಿಯದ ಜೋಯಿಸರು—

"ಅದೇನು ನೋಡುತ್ತಿ ಹೊನ್ನಯ್ಯ? ಹೊತ್ತಿಗೆ ಒಂದೂವರೆ ಸೇರು ಹಾಲು ಕರೆಯುತ್ತೆ ಹೆಂಗರುವಾದರೂ ಮುತ್ತಿನಂತಿದೆ ಬಂದು ನೋಡು." ಎಂದು ಕರೆದುಕೊಂಡು ಹೋದರು. ಹೊನ್ನಯ್ಯ ಕೊಟ್ಟಿಗೆಯಲ್ಲಿ ಎಡಕ್ಕೂ ಬಲಕ್ಕೂ ಓರೆಗಣ್ಣಿಂದ ತಿರುಗಿ ನೋಡಿ, ಪಿಸುಮಾತಿನಲ್ಲಿ "ನೋಡಿ ಸ್ವಾಮಿ, ನಮ್ಮ ಲಿಂಗಿಗೂ ರಂಗಯ್ಯನಿಗೂ ಜಾತಕ ಸರಿಯಾಗಿಲ್ಲ, ಇವರಿಬ್ಬರ ಲಗ್ನ ಸಾಧ್ಯವಿಲ್ಲ—ಎಂದು ನನ್ನ ತಂಗಿ ಬಾಯಿಯರ ಎದುರಿನಲ್ಲಿ ದಾಕ್ಷಿಣ್ಯವಿಲ್ಲದೆ ಹೇಳಬಿಡಿ. ನಿಮಗೆ ಒಂದು ರೂಪಾಯಿ ದಕ್ಷಿಣೆ ಇಡುತ್ತೇನೆ ಸುಗ್ಗಿಗೆ ಸ್ವಲ್ಪ ಕಾಳುಕಡ್ಡಿ ಕೊಡುತ್ತೇನೆ ಇದೊಂದು ಉಪಕಾರ ಮಾಡಿಕೊಡಿ" ಎಂದ. ಜೋಯಿಸರು ಕಕ್ಕಾಬಿಕ್ಕಿಯಾಗಿ ಕುತೂಹಲದಿಂದ "ಕಾರಣ?" ಎಂದರು

"ಸ್ವಾಮಿ, ಹುಡುಗ ಓದಿದ್ದಾನೆ ಚಾಕರಿಗೆ ಹೊರಟರೆ ನನ್ನ ಮಗಳು ಅವನ ಹಿಂದೆ ಸುತ್ತಬೇಕು ನನ್ನ ತಂಗಿಯ ಊರು ದೂರ; ನಾನು ಒಬ್ಬಂಟಿಗ; ಇದೇ ಕಾರಣ"

ಜೋಯಿಸರು ಮನಸ್ಸಿನಲ್ಲಿ 'ತೆಗೆದ ಇವನ ತಂತ್ರವನ್ನು' ಎನ್ನುತ್ತಾ "ನೋಡು ಹೊನ್ನಯ್ಯ, ಶಾಸ್ತ್ರವನ್ನು ಸುಳ್ಳು ಹೇಳುವುದು ಸಾಧ್ಯವಿಲ್ಲ ಜಾತಕ ನೋಡುತ್ತೇನೆ, ಗಣಕೂಟ, ನಾಡಿಕೂಟ ಮತ್ತು ವಧೂವರರ ನಕ್ಷತ್ರ ಸರಿಬಂದರೆ ಮಾತ್ರ ಯಾರು ಏನು ಮಾಡಿದರೂ ಸುಳ್ಳು ಹೇಳಲಾರೆ 'ಹತ್ತು ಸುಳ್ಳುಹೇಳಿ ಒಂದು ಕನ್ಯಾದಾನ ಮಾಡು' ಎಂದು ಹಿರಿಯರು ಹೇಳಿದ್ದಾರೆ ಶಾಸ್ತ್ರ ಯಾರ ಮನೆ ಗಂಟು, ಸುಳ್ಳು ಹೇಳುವುದಕ್ಕೆ? ಸ್ವಲ್ಪ ವ್ಯತ್ಯಾಸವಾದರೆ ಮಾತ್ರ ನೋಡೋಣ" ಎಂದರು.

"ಹಾಗೆ ಹೇಳಬೇಡಿ ಸ್ವಾಮಿ ಹೇಗಾದರೂ ಮಾಡಿ ನನ್ನ ಪರ ಹೇಳಬೇಕು ಸಂಸಾರದ ಹೊರೆ ನಮ್ಮ ಹೆಂಗಸರಿಗೆ ಇನ್ನೂ ತಿಳಿದಿಲ್ಲ ಸ್ವಾಮಿ. ಮಕ್ಕಳು ಸುಖವಾಗಿ ಬಾಳಲಿ, ಬದುಕಲಿ ಅನ್ನುವ ಚಿಂತೆಯೇ ಇಲ್ಲವಲ್ಲ ಎಷ್ಟೊಂದು ದುಡ್ಡು ವೆಚ್ಚಮಾಡಬೇಕೆಂದಾದರೂ ಅರಿಯ ಬೇಡವೆ! ದೂರದ ಊರಿಗೆ ಮಗಳನ್ನು ಕೊಟ್ಟು ದಣಿವನ್ನುಣ್ಣಬೇಕೆ! ನನ್ನ ಮುಖ ನೋಡಿ ಸ್ವಾಮಿ; ಹೆಂಗಸರ ಮಾತು ಯಾವ ಲೆಕ್ಕ"

ಜೋಯಿಸರು— ಮನಸ್ಸಿನಲ್ಲೇ 'ಎಲಾ ಅವಿವೇಕಿ! ಇವನು

ಕೊಡುವುದು ಒಂದು ರೂಪಾಯಿಯಂತೆ, ಮುಂದಿನ ಸುಗ್ಗಿಗೆ ಎರಡು ಪಾವು ಕಾಳಂತೆ! ಇರಲಿ, ಏನಾದರೂ ಮಾಡಿ ಇದೇ ಹೆಣ್ಣಿಗೂ ಗಂಡಿಗೂ ಲಗ್ನ ಮಾಡಿಸೇಬಿಡುತ್ತೇನೆ' ಎಂದು ಮನಸ್ಸು ಮಾಡಿದರು ಪಂಚಾಂಗವೆಲ್ಲವನ್ನೂ ವಿಶದವಾಗಿ ನೋಡಿ “ ಏನು ಹೇಳಲಿ ಹೊನ್ನಯ್ಯ! ನಾನು ಬುದ್ಧಿಕಲಿತಂದಿನಿಂದ ಎಷ್ಟೋ ವಧೂವರರ ಜಾತಕ ನೋಡಿ ದ್ದೇನೆ, ಇಷ್ಟು ಹೊಂದಿಕಯಾಗಿರುವ ಜಾತಕ ಯಾರಿಗೂ ಬರಲಿಲ್ಲ ನೀನು ಸ್ವಲ್ಪವೂ ಯೋಚನೆ ಮಾಡಬೇಡ ಲಗ್ನಪತ್ರಿಕೆ ಬರೆದು ಕೊಡುತ್ತೇನೆ, ತೆಗೆದುಕೊ” ಎಂದು ಕರಕರನ ಬರೆದು, ಅರಶಿನ ಕುಂಕುಮ ಹಚ್ಚಿ, ಇನ್ನು ಆರು ದಿನಕ್ಕೆ ಲಗ್ನ ಹತ್ತು ಘಂಟೆಗೆ ಜರುಗ ಬೇಕೆಂದು ಹೇಳಿ, ಹೊನ್ನಯ್ಯನ ಮುಂದೆ ಇಟ್ಟು “ಈ ಲಗ್ನದಿಂದ ಶ್ರೇಯಸ್ಸಾಗುತ್ತದೆ ಮೊದಲು ಸಿದ್ಧತೆಮಾಡು ಹೋಗು” ಎಂದರು ಹೊನ್ನಮ್ಮನಿಗೂ ಸಿದ್ದಮ್ಮನಿಗೂ ಸಂತೋಷವು ಉಕ್ಕಿಬಂದು ಕಣ್ಣುಗಳ ಮೂಲಕ ಹೊರಬಿದ್ದಿತು ಹೊನ್ನಯ್ಯ ಪೆಚ್ಚುಮೋರೆ ಹಾಕಿಕೊಂಡು ಕೋಪದಿಂದ ಕಣ್ಣುಗಳನ್ನು ಜೋಯಿಸರ ಮೇಲೆ ಉರುಳಿಸಿದ ಲಗ್ನ ಪತ್ರಿಕೆಯನ್ನು ತಗದುಕೊಂಡು ವಸ್ತ್ರವನ್ನು ಹೆಗಲಮೇಲೆ ಎಸೆದುಕೊಂಡು ಪಡಾರನೆ ಎದ್ದವನೇ ಎಡದ ಕೈಯಿಂದ ಮೀಸೆಯನ್ನು ತಿರುಗಿಸುತ್ತಾ ಹೊರಟುಹೋದ ಆತ ಹೋಗುವ ಟೀವಿಯನ್ನು ಜೋಯಿಸರು ನೋಡುತ್ತಾ 'ಜಗತ್ತಿನಲ್ಲಿ ಇಂಥ ಮೂಢರೂ ಉಂಟೆ? ಇದೆಲ್ಲಾ ಧನ ಮದ ಮಗಳ ಸುಖವನ್ನೇ ತನ್ನ ಸುಖಕ್ಕಾಗಿ ಬಲಿಕೊಡುತ್ತಾನಲ್ಲ!' ಎಂದು ಮನೆಯೊಳಕ್ಕ ಹೋದರು

ಹೊನ್ನಯ್ಯನ ಮನಸ್ಸು ಚಿಂತೆಗೆ ತುತ್ತಾಯಿತು 'ಇನ್ನೇನು ಗತಿ, ಲಗ್ನಪತ್ರಿಕಯನ್ನೇ ಬರೆದು ಬಿಟ್ಟನಲ್ಲ ಈ ಹಾಳು ಜೋಯಿಸ!' ಎಂದು ಮನಸ್ಸಿನಲ್ಲೇ ಶಪಿಸಿದ ಮನಸ್ಸು ಹೊಡೆದುಕೂಳ್ಳುತ್ತಿದ್ದಾಗ ತಟಕ್ಕನ ಏನೋ ಒಂದು ಆಶಾಕಿರಣ ಹೊಳೆದಂತಾಗಿ, ಕೊಂಚ ಧೈರ್ಯ ಮನಸ್ಸಿನಲ್ಲಿ ಚಿಮ್ಮಿತು ತನ್ನನ್ನು ತಾನೇ ಮರೆತನು. ಗಾಣಕ್ಕ ಕಬ್ಬು ಸಿಕ್ಕಿದಂತೆ ಲಿಂಗಿಯ ಮದುವೆಯ ವಿಷಯವನ್ನು ಮನಸ್ಸಿನ ಗಾಣಕ್ಕೆ ಸಿಕ್ಕಿಸಿ ಜಗಿಯಿಸುತ್ತಿದ್ದಾನೆ ಇದರಿಂದ ತಪ್ಪಿಸಿಕೊಳ್ಳಲು

ಯೋಚಿಸಿದ ನಾನಾ ತೆರನಾಗಿ ನರ್ತಿಸುತ್ತ ಎದ್ದ ಮಾನಸಿಕ ಅಲೆಗಳಿಂದ ತುಸು ಶಾಂತಿ, ಸಮಾಧಾನದ ಸುಳಿವು ಕಂಡಂತಾಯಿತು

ಮನೆಗೆ ಬಂದವನೇ ತನ್ನ ಕೋಪದ ತಾಪವನ್ನು ಮರೆಮಾಚಿಕೊಂಡು, ತಂಗಿಯನ್ನು ಕರೆದು "ತಾಯಿ, ಮದುವೆ ಇನ್ನು ಆರೇ ದಿವಸ ಇದೆ ಈ ದಿವಸವೇ ಊರಿಗೆ ಹೋಗಿ ಸಾಮಾನೆಲ್ಲಾ ತೆಗೆದುಕೊಂಡು ಬರುವ ಏರ್ಪಾಡು ಮಾಡು ಇವತ್ತಿಗೆ ನಾಲ್ಕು ದಿವಸಕ್ಕೆ ದೊಡ್ಡ ವೀಳ್ಯಕ್ಕೆ ಬಂದು ಬಿಡಮ್ಮ, ನಿಮ್ಮ ಊರಿನ ಮುಖ್ಯಸ್ಥರ ಜೊತೆಯಲ್ಲಿ ಇಲ್ಲಿಗೆ ಆಗಬೇಕಾದ ಸಾಮಾನೆಲ್ಲಾ ತರಬೇಕಮ್ಮ ನಗುವವರ ಮುಂದೆ ಜಾರಿ ಬಿದ್ದ ಹಾಗೆ ಮಾಡೀಯೆ" ಎಂದು ನಗುಮುಖದಿಂದ ಹೇಳಿದ ಆ ನಗುವಿನ ಹಿಂದೆ ಅಡಗಿದ್ದ ಅವನ ಕಪಟ ಹೃದಯವನ್ನು ಸಿದ್ದಮ್ಮ ತಿಳಿಯಲಿಲ್ಲ ಸಂತೋಷದ ಉನ್ಮತ್ತತೆಯಲ್ಲಿ ಮನಸ್ಸು ಮಂದವಾಗಿತ್ತು, ಅಣ್ಣನ ಮಾತಿನಲ್ಲಿ ಅವಿತಿರುವ ಮರ್ಮವನ್ನು ತಿಳಿಯುವಷ್ಟು ತೀಕ್ಷ್ಣವಾಗಿರಲಿಲ್ಲ ಆ ಸಮಯದಲ್ಲಿ ಅವಳ ಮನಸ್ಸು ತಿಮ್ಮಕ್ಕ ಲಗ್ನ ಪತ್ರಿಕೆಯನ್ನು ನೋಡಿ ಸಂತೋಷದಿಂದ ಓಡಾಡುತ್ತಿದ್ದಳು. ಕೆನ್ನೆಯ ಮೇಲೆ ಉರುಳಿ ಬಗುತ್ತಿದ್ದ ಆನಂದದ ಹನಿಗಳನ್ನು ಸೆರಗಿನಿಂದ ಒರೆಸುತ್ತಲೂ ಬಿಡುತ್ತಲೂ ಇದ್ದಳು.

"ಆಗಲಣ್ಣ, ತರುತ್ತೇನೆ ಇನ್ನು ಹೋಗುತ್ತೇವೆ ಈ ದಿನವೇ ಊರುಸೇರಿದರೆ ಸಾಮಾನು ತೆಗೆಯಲು ಅನುಕೂಲವಾಗುತ್ತದೆ" ಎಂದಳು ಸಿದ್ದಮ್ಮ ರಂಗಯ್ಯ ಸಂತೋಷದಿಂದ ಹೊನ್ನಯ್ಯನ ಮುಖ ನೋಡಿ "ಇನ್ನು ಹೋಗುತ್ತೇವೆ" ಎಂದ ಹೊನ್ನಯ್ಯ "ಹೋಗಿ ಬನ್ನಿ, ಜೋಕ" ಎಂದ ರಂಗಯ್ಯನನ್ನೂ ಮತ್ತು ಸಿದ್ದಮ್ಮನನ್ನೂ ಬೀಳ್ಕೊಡಲು ಎಲ್ಲರೂ ಹೊರಟರು ಹೊನ್ನಯ್ಯ ಮಾತ್ರ ಮನೆಯಲ್ಲೇ ಉಳಿದುಕೊಂಡು ಯೋಚಿಸಿದ. ನಾನಾ ಉಪಾಯಗಳನ್ನು ಹುಡುಕ ತೊಡಗಿದ. ತನ್ನ ಮನಸ್ಸಿನ ಗಣಿಯಿಂದ ಒಂದೊಂದನ್ನಾಗಿ ತಗೆದು 'ಇದು ಸರಿಯೆ, ಅದು ಸರಿಯೆ' ಎಂದು ಉಜ್ಜಿ ಉಜ್ಜಿ ನೋಡಿದ

ದಾರಿಯಲ್ಲಿ ತಿಮ್ಮಕ್ಕ "ಅತ್ತಿಗೆ, ಕೊನೆಗೂ ನಮ್ಮ ಹಟವೇ ಗೆದ್ದಿತಲ್ಲಾ! ಇನ್ನು ನಿಧಾನ ಮಾಡ್ಬೇಡಿ ನಿಮ್ಮ ಬಂಧುಬಳಗದವರನ್ನೆಲಾ

ಸೇರಿಸಿಕೊಂಡು ತಕ್ಷಣ ಏರ್ಪಾಡು ಮಾಡ್ಬಿಡಿ" ಎಂದು ಹರ್ಷ ತುಂಬಿದ ದನಿಯಲ್ಲಿ ಹೇಳಿದಳು.

"ಇನ್ನೇನು ಮುಗಿಯಿತಲ್ಲ ಬಿಡು"ಎಂದುಕೊಂಡಳು ಸಿದ್ದಮ್ಮ. ಮನಸ್ಸಿಗೆ ಹಗುರವಾದಂತಾಯಿತು.

"ಇಷ್ಟೆಲ್ಲಾ ಕಷ್ಟಪಟ್ಟು ಹೆಣ್ಣು ಗೊತ್ತುಮಾಡಿರುವಾಗ ಮದುವೆ ಮಾಡೋಕೆ ತಡಮಾಡಿದರೆ ಆದೀತೆ? ಅದಾವ ಲೆಕ್ಕ ಬಿಡು ಅತ್ತಿಗೆ" ಎಂದಳು ಸಿದ್ದಮ್ಮ.

"ಜೋಕೆ ತಾಯಿ, ಮೂವರು ಮುತ್ತೈದೆಯರನ್ನು ಕರ್ಕೊಂಡು, ಸಂಜೆ ಬೆಳಕಿದ್ದಾಗಲೇ ಊರಿಗೆ ಬಂದು ಬಿಡು" ಎಂದಳು ಹೊನ್ನಮ್ಮ ಅವಳ ಮಾತಿನಲ್ಲೂ ಹರ್ಷ ತುಂಬಿತ್ತು, ನನ್ನ ಮಮ್ಮೊಗಳು ಮಗಳ ಮನೆಗೇ ಸೇರಿದಳೆಂದು

ಸ್ವಲ್ಪ ದೂರ ಹಿಂದೆ ದಾರಿಯಲ್ಲಿ ರಂಗಯ್ಯನೂ ಬಸವಯ್ಯನೂ ಮಾತನಾಡುತ್ತಾ ಬರುತ್ತಿದ್ದರು.

ರಂಗಯ್ಯ "ಬಸವಯ್ಯನವರೆ, ನಮ್ಮ ಸೋದರ ಮಾವನಿಗೂ ಕೂಡ ಹೆಣ್ಣು ಕೊಡು ಎಂದು ಅಂಗಲಾಚಿ ಬೇಡಿಕೊಳ್ಳಬೇಕಾಯಿತಲ್ಲ! ತಂಗಿಯ ಮಗನೆಂಬ ಮಮತೆ ಎಳ್ಳಷ್ಟೂ ಇಲ್ಲವಲ್ಲ ಮದುವೆಯಾಗು ವಾಗ ಇನ್ನೇನು ಕೈಕೊಡುತ್ತಾನೊ. ತಿಮ್ಮಕ್ಕನವರೇನೊ ಸುಗುಣೆ. ಆಕೆಯನ್ನು ಯಾವ ಕಡೆಗಾದರೂ ಒಲಿಸಬಹುದು. ನಮ್ಮ ಮುದುಕಿ ಬಿಡಿ, ಹೇಳಿದಹಾಗೆ ಕೇಳುತ್ತಾಳೆ,ಈಚೀಚೆಗೆ ಈತನನ್ನು ಮಾತ್ರ ನಂಬು ಕಷ್ಟವಾಗಿದೆ" ಎಂದ.

"ಅವನ ಕಥೆ ಬಹಳ ವಿಚಿತ್ರ. ನಾನು ಊರಿನಲ್ಲಿ ದಿನವೂ ಅವನ ನಡವಳಿಕೆಯನ್ನು ನೋಡುತ್ತಾ ಇದ್ದೇನೆ ಮದುವೆ ಎಂದರೆ ಸಾಮಾನ್ಯವೇ! ಹೆಣ್ಣಿನ ತಂದೆಯೇ ಅಲ್ಲ, ಲಗ್ನ ಮುಗಿಯುವವರೆಗೆ ಜನರು ಇಲ್ಲದ ಸಲ್ಲದ ತೊಂದರೆಗಳನ್ನೆಲ್ಲಾ ತಂದೊಡ್ಡುತ್ತಾರೆ ಅದನ್ನೆಲ್ಲಾ ಸರಿ ಪಡಿಸಿಕೊಂಡು ಅವರನ್ನೇ ಅನುಸರಿಸಿಕೊಂಡು ಹೋಗಬೇಕು. ಇವೆಲ್ಲಾ ತೊಡಕುಗಳು ಸಾಮಾನ್ಯ ಬಿಡಿ. ಮದುವೆ ಅಂದರೆ ಸಮುದ್ರವನ್ನು ಈಜಲು ಹೊರಟಹಾಗೆ. ಇಲ್ಲಿಕೇಳಿ, ವಿವಾಹವು

ದಾಂಪತ್ಯ ಜೀವನದ ಮೊದಲ ಮೆಟ್ಟಲು. ಎರಡು ಪ್ರೇಮಿಗಳ ಹೃದಯಗಳ, ಒಂದುಗೂಡುವ ದೇವಾಲಯ. ಎರಡು ಅಂತರಾತ್ಮಗಳೂ ಒಂದಕ್ಕೊಂದು ಈ ನಶ್ವರ ದೇಹಗಳಿರುವವರೆಗೂ ಸಂಸಾರ ಸುಖ ದುಃಖದಲ್ಲಿ ಸಮಭಾಗಿಗಳಾಗಿ, ಜೀವನ ಪಥದಲ್ಲಿ ರಥವನ್ನು ನಡೆಸುತ್ತಾ ಹೋಗುವುದನ್ನು ಅರಿಯುವ ಮೊದಲ ಪಾಠಶಾಲೆ. ಪ್ರಣಯಿಗಳು ಒಂದಾಗಿ ಸಂಸಾರ ಸುಖಸಾಮ್ರಾಜ್ಯದಲ್ಲಿ ಕಲೆತು ಜಗತ್ತನ್ನು ವಿಶಾಲ ದೃಷ್ಟಿಯಿಂದ ನೋಡುವ ಒಂದು ನವಜ್ಯೋತಿ ಈ ಜ್ಯೋತಿಯ ಬೆಳಕಿನಲ್ಲಿ ಕಾಣದ ಕಡಲನ್ನು ಕಂಡು, ಉಣ್ಣದ ಊಟ ಉಂಡು, ಹಾರಲಾರದ ಕಮರಿಯನ್ನು ಹಾರಿ ಕತ್ತಲೆಯೇ ಬಾರದ ಸಾಮ್ರಾಜ್ಯವನ್ನು ಸೇರುವ ಮೊದಲ ಹಂತ ಮಾನವ ಸಮಾಜದಲ್ಲಿ ಉಚ್ಚಸ್ಥಾನವನ್ನು ಸಾಧಿಸುವ ಉತ್ತಮ ಮಾರ್ಗದ ಮೊದಲ ಮೆಟ್ಟಲು. ಸಂಸಾರ ರಥವನ್ನು ಸರಾಗವಾಗಿ ಎಳೆದುಕೊಂಡು ಹೋಗಲು ಕಟ್ಟುವ ಜೋಡಿ ಜೀವಿಗಳು ದಂಪತಿಗಳು. ಈ ಜೀವಿಗಳೆರಡರ ಮನವೂ ಸದಾಕಾಲದಲ್ಲೂ, ಸಕಲ ಸನ್ನಿವೇಶಗಳಲ್ಲೂ ಒಂದಾಗಬೇಕು, ರಂಗಯ್ಯನವರೇ''

ತಕ್ಕಮಟ್ಟಿಗೆ ಪ್ರಪಂಚದ ವ್ಯವಹಾರವನ್ನು ಕಣ್ಣಿನಿಂದ ನೋಡಿ ತಿಳಿದುಕೊಂಡಿದ್ದ ರಂಗಯ್ಯನಿಗೆ ಬಸವಯ್ಯನ ಲೋಕಾನುಭವದ ಮಾತುಗಳು ಕಿವಿಗಳ ಮುಖಾಂತರ ಹೃದಯಕ್ಕೆ ಇಳಿದು ರೂಢಮೂಲವಾಗಿ ನಾಟಿದವು. ರಂಗಯ್ಯನು ಮದುವೆಯ ವಿಚಿತ್ರವನ್ನು ಗಾಢವಾಗಿ ಯೋಚಿಸಿದ ಜ್ಞಾನದೃಷ್ಟಿ ಬಹುದೂರ ಹೋಯಿತು. ಕಣ್ಣುಗಳು ಚಲಿಸದೆ ತಾವು ಕಾಣುತ್ತಿದ್ದ ಹೊಸ ಜ್ಞಾನ ಜ್ಯೋತಿಯನ್ನು ಎರಚುತ್ತಿದ್ದುವು ಕೊಂಚ ಆವೇಶಬಂದವನಂತಾಗಿ "ಹುಡುಗಿಯು ಉತ್ತಮಳು. ಬೆಳೆಯು ಮೊಳಕೆಯಲ್ಲೇ ಕಾಣುವುದೆಂಬ ನಾಣ್ನುಡಿಗೆ ಸರಿಯಾಗಿದೆ. ಆದರೆ ಜನರು ತಂದೊಡ್ಡುವ ಸಮಸ್ಯೆಗಳೂ, ವಿಘ್ನಗಳೂ ನಮ್ಮಿಂದ ಬಗೆಹರಿಸಲು ಸಾಧ್ಯವಾಗದಿದ್ದರೆ ಜೀವನವು ದುಃಖಮಯವಾಗಿ ಬಾಳೆಲ್ಲಾ ಬಾಡಿ ಹೋಗುವುದಲ್ಲಾ! ಇದಕ್ಕೇನಾದರು ದಾರಿಯುಂಟೆ?'' ಎಂದ. ಬಸವಯ್ಯ ಸ್ನೇಹಿತನ ವಿಶಾಲ ದೃಷ್ಟಿಯ ಮಾತುಗಳನ್ನು ಎವೆಯಿಕ್ಕದೆ ಕೇಳುತ್ತಾ ಮೂಕನಂತಾಗಿದ್ದ. ಬಸವಯ್ಯ ಹೇಳಿದ.

"ಲಗ್ನವನ್ನು ತಡೆಗಟ್ಟಲು ಇನ್ನು ಯಾವ ಸಮಸ್ಯೆಗಳೂ ತಲೆ ಹಾಕವು ನಿಮ್ಮಿಬ್ಬರ ಬಾಳು ಒಂದಾಗಬೇಕೆಂದು ದೈವೇಚ್ಛೆ ಇದೆ ಅಂಥ ತೊಡಕುಗಳೇನಾದರು ಬಂದರೆ, ಹಲಸಿನ ಹಣ್ಣನ್ನು ಕೊಯ್ಯು ವಾಗ ಅಂಟು ಕೈಗೆ ಅಂಟದಂತೆ ಎಣ್ಣೆಯನ್ನು ಹಚ್ಚಿಕೊಳ್ಳುವ ಹಾಗೆ, ಜ್ಞಾನವೆಂಬ ತೈಲದಿಂದ ಜೀವನದಲ್ಲಿ ಬಂದೊದಗುವ ಎಡರು ತೊಡರು ಗಳೆಂಬ ಅಂಟನ್ನು ಬಿಡಿಸಬೇಕು ಜ್ಞಾನವಿಲ್ಲದವನು ಮನಷ್ಯ ರೂಪಿನ ಮೂಕಪ್ರಾಣಿ ಅಜ್ಞಾನ ಮನುಷ್ಯನನ್ನು ಮುಸುಕಿದಾಗ ಅವನ ಮನು ಷ್ಯತ್ವವು ಶೂನ್ಯವಾಗಿ, ಪಂಚೇಂದ್ರಿಯಗಳು ಅವನ ಸ್ವಾಧೀನ ತಪ್ಪಿ ಸ್ವೇಚ್ಛಾನುಸಾರವಾಗುವವು. ಮಾನವನು ಆಗ ಅಹಂಕಾರ ಮತ್ತನಾಗಿ ವರ್ತಿಸಿ, ಜೀವನವನ್ನೇ ನರಕಕೂಪವನ್ನಾಗಿ ಮಾಡಿಕೊಳ್ಳುವನು. ತಿಳಿ ವಳಿಕೆಯೊಂದಿದ್ದರೆ ಸಾಕು"

ರಂಗಯ್ಯ "ನಿಜ" ಎಂದು ತಲೆದೂಗಿದ ಇಬ್ಬರೂ ಪರಸ್ಪರ ಮಾತನಾಡುತ್ತಾ ಬಹಳ ದೂರ ಹೊರಟರು ಮೋಟಾರಿ. ವೇಳೆ ಯಾದ್ದರಿಂದ ತಿಮ್ಮಕ್ಕ ಹೊನ್ನಮ್ಮ ಮತ್ತು ಬಸವಯ್ಯ "ಹೋಗಿ ಬನ್ನಿ" ಎಂದು ಸಿದ್ದಮ್ಮನನ್ನೂ ಆಕೆಯ ಮಗನನ್ನೂ ಬೀಳ್ಕೊಟ್ಟರು ಲಿಂಗಿ "ಹೋಗಿಬರುತ್ತೀರ ಮಾವಯ್ಯ?" ಎಂದು ನಗುನಗುತ್ತಾ ಹೇಳಿದ್ದಕ್ಕೆ ರಂಗಯ್ಯ "ಹೂ, ಹೋಗಿಬರುತ್ತೇನೆ" ಎಂದು ನಗುವನ್ನು ಚೆಲ್ಲುತ್ತಾ ಉತ್ತರಕೊಟ್ಟ ಸ್ವಲ್ಪ ಹೊತ್ತು ಲಿಂಗಿಯನ್ನು ಅಡಿಯಿಂದ ಮುಡಿಯ ವರೆಗೂ ನೋಡಿದ ಲಿಂಗಿಯ ಚಿತ್ರ ಅವನ ಮನಸ್ಸಿನ ಮೇಲೆ ಅಚ್ಚೊತ್ತಿ ನಿಂತಿತು

ತಾಯಿಯೂ ಮಗನೂ ಮೋಟಾರನ್ನು ಹತ್ತಿದರು ಲಿಂಗಿ ದೂರ ವಾದಂತೆಲ್ಲಾ ಅವಳ ಆಕೃತಿ ರಂಗಯ್ಯನ ಕಣ್ಣುಮುಂದ ಬಂದು ನಿಲ್ಲು ತ್ತಿತ್ತು. ಅವನ ಮನಸ್ಸು 'ಪಾಪ ಸಣ್ಣವಳು ಇನ್ನು ಆರು ದಿವಸ ದಲ್ಲಿ ನನ್ನ ಕೈಹಿಡಿದ ಸಹಧರ್ಮಿಣಿಯಾಗುತ್ತಾಳೆ ಆಗ ಮಾವಯ್ಯ ಎನ್ನುವ ಮಾತು ಮಾಯವಾಗಿ ನಸುನಾಚುವಳೇನೊ! ಮೃದುಮನ ಸ್ಸಿನ ಹುಡುಗಿಯನ್ನು ಯಾವ ವಿಧದಲ್ಲೂ ನೋಯಿಸಬಾರದು. ನೆಚ್ಚಿನ ಗೆಳತಿಯಂತೆ ನನ್ನ ಜೀವಮಾನದಲ್ಲಿ ಕಾಣಬೇಕು' ಎಂದು ಹೇಳುತ್ತಿತ್ತು.

ವಿಶಾಲವಾದ ಇಡೀ ಜಗತ್ತಿನಲ್ಲಿ ಲಿಂಗಿ ಮತ್ತು ತಾನು ಇಬ್ಬರೇ ಇರುವಂತೆ ಆತನಿಗೆ ಭಾಸವಾಯಿತು ಆಕೆಯ ರೂಪು ಲಾವಣ್ಯಗಳು ದೈವಕಲೆಯ ಸೌಂದರ್ಯವನ್ನು ಅವನ ದೃಷ್ಟಿಗೆ ತರುತ್ತಿದ್ದುವು ದೈವ ಸೃಷ್ಟಿಯ ವಿಚಿತ್ರದ ಮೇಲೆ ಮನಸ್ಸು ತೀಕ್ಷ್ಣವಾಗಿ ಹೊಕ್ಕಿತು "ದೇವರು ಎಂಥಾ ಕಲಾವಿದ. ಮಾಯದ ರಂಗಮಂಟಪವೆಂಬ ಈ ಪ್ರಪಂಚದಲ್ಲಿ ವ್ಯಕ್ತಿಗಳನ್ನು ಸನ್ನಿವೇಶಗಳ ಮುಖಾಂತರ ಪಾತ್ರವಹಿಸುವಂತೆ ಮಾಡಿ, ಅಗೋಚರ ನಿರ್ದೇಶಕನಾಗಿ ನಾಟಕವಾಡಿಸುವನು. ಪಾತ್ರಗಳಿಗನುಸಾರವಾಗಿ ಕಾಲದ ಪರದೆಗಳನ್ನು ತೆಗೆಯುತ್ತಲೂ, ಮುಚ್ಚುತ್ತಲೂ ಪ್ರೇಕ್ಷಕನಾಗಿ ನೋಡುವನು " ಹೀಗೆ ಆಲೋಚನಾಪರನಾಗಿದ್ದ ರಂಗಯ್ಯನಿಗೆ ಊರು ಸಮೀಪಿಸಿದ್ದು ಅರಿವಾಗಲಿಲ್ಲ.

ತಾಯಿಯೂ ಮಗನೂ ಊರಿಗೆ ಬಂದು ಇನ್ನು ಆರುದಿವಸಕ್ಕೆ ಮುಹೂರ್ತವೆಂದು ತಮ್ಮ ಬಂಧು ಮಿತ್ರರಿಗೆಲ್ಲಾ ತಿಳಿಸಿದರು ಲಗ್ನ ಪತ್ರಿಕೆಯನ್ನು ಅಚ್ಚುಹಾಕಿಸಿ ಕೆಲವು ಲಗ್ನ ಪತ್ರಿಕೆಗಳನ್ನು ಹೊನ್ನಯ್ಯನಿಗೆ ಕಳುಹಿಸಿದರು. ಲಗ್ನಕ್ಕೆ ಬೇಕಾದ ಸಾಮಾನೆಲ್ಲವನ್ನೂ ಬೇಗ ಬೇಗ ಹವಣಿಸತೊಡಗಿದರು ಅಕ್ಕಸಾಲಿ ಮನೆ ಬಾಗಿಲಿಗೆ ಸಿದ್ದಮ್ಮ ದಿನಕ್ಕೆ ನಾಲ್ಕುಸಲವಾದರೂ ಸುಳಿಯುತ್ತಿದ್ದಳು. ' ಹುಡುಗಿ ಚಲುವೆ–ಒಡವೆಗಳನ್ನು ಅಂದವಾಗಿಯೇ ಮಾಡಬೇಕು ' ಎಂದು ಅಕ್ಕಸಾಲಿಗನಿಗೆ ಆಗಾಗ್ಗೆ ಎಚ್ಚರಿಸುವುದನ್ನು ಆಕೆ ಮರೆಯಲಿಲ್ಲ.

ಲಗ್ನಪತ್ರಿಕೆ ಹೊನ್ನಯ್ಯನ ಕೈಸೇರಿತು ಅದನ್ನು ಕಂಡು ಆತ ಮತ್ತಷ್ಟು ಅಶಾಂತನಾದ, ರಾತ್ರಿಯಲ್ಲಾ ಕೆಲವು ಉಪಾಯಗಳನ್ನು ಯೋಚಿಸಿದ ಕೊನೆಗೆ " ಇದೇ ಸರಿ " ಎಂದುಕೊಂಡು, " ನಾಳೆಯಿಂದ ನನ್ನ ಶಾಸ್ತ್ರವನ್ನು ಪ್ರಾರಂಭಿಸುತ್ತೇನೆ ಆ ಬ್ರಾಹ್ಮಣನ ಶಾಸ್ತ್ರವನ್ನು ಮಣ್ಣುಗೂಡಿಸುತ್ತೇನೆ •ಸಿದ್ದಮ್ಮ ಬೇರೆ ನಾನು ಬೇಡಮ್ಮ ಎಂದರೂ ಹಿಂಸೆಮಾಡುತ್ತಾಳೆ,ಹೆಣ್ಣುಕೊಡು ಕೊಡು ಅಂತ ನನಗೆ ಕೆಲಸ ಮಾಡುವ ನೆಂಟರು! ಬೇಕು ಅಂದರೆ ಈ ಬಸವಯ್ಯನ ಪುರಾಣ ಬೇರೆ. ' ರಂಗನ ಮುಂದೆ ಸಿಂಗನೆ' ಅಂತ, ನನ್ನ ಮುಂದೆ ಇವರ ಆಟ ನಡೆಯುತ್ತದೆಯೆ !" ಎಂದುಕೊಂಡ ಬೆಳಗ್ಗೆ ಅಡಿಗೆ ಕೋಣೆಗೆ ಯಾರೂ ಇಲ್ಲದ ವೇಳೆಯಲ್ಲಿ

ಹೋದ. ಅಟ್ಟಕ್ಕೆ ಏಣಿ ಹಾಕಿಕೊಂಡು ಸರಸರನೆ ಕೋತಿ ಮರವನ್ನೇರುವಂತೆ ಹತ್ತಿದ. ಅಟ್ಟದ ಮೇಲೆ ಕುಳಿತು ಒಂದೆರಡುಸಾರಿ ಕೆಳಗೆ ಇಣಿಕಿ ನೋಡಿದ, ಕಿವಿಗೊಟ್ಟು ಆಲಿಸಿದ, ನರಪ್ರಾಣಿಯ ಸದ್ದು ಇರಲಿಲ್ಲ. ಸರಿ, ಮೇಲಿದ್ದ ತುಪ್ಪದ ಗಡಿಗೆಗಳನ್ನೆಲ್ಲಾ ನೋಡಿದ. ಒಂದು ಗಡಿಗೆಯಲ್ಲಿ ಸ್ವಲ್ಪವೇ ತುಪ್ಪವಿತ್ತು, ಅದನ್ನು ಮಾತ್ರ ಕೆಳಕ್ಕೆ ದಢಾರನೆ ಕೆಡವಿ, ಸರಸರನೆ ಕೆಳಗೆ ಇಳಿದು ಯಾರಿಗೂ ಕಾಣಿಸಿಕೊಳ್ಳದೆ ತೋಟಕ್ಕೆ ಹೊರಟು ಹೋದ ತೋಟದಲ್ಲಿ ಅಶಾಂತನಾಗಿ ಅತ್ತ ಇತ್ತ ತಿರುಗುತ್ತಿದ್ದಾನೆ, ಹೆಂಗಸು ಬಂದಮೇಲೆ ಮನೆಗೆ ಹೋಗಿ ಕಾಡುಕಿಚ್ಚನ್ನು ಹಚ್ಚಬೇಕೆಂದು ಯೋಚಿಸುತ್ತಿದ್ದಾನೆ.

ನೀರು ತರಲು ಬಾವಿಗೆ ಹೋಗಿದ್ದ ತಿಮ್ಮಕ್ಕ ತುಂಬಿದ ಕೊಡವನ್ನು ಹೊತ್ತುಕೊಂಡು ಬಂದು ಹೊರಗಡೆಯ ಕದದ ಚಿಲಕವನ್ನು ತೆಗೆದು ಬಾಗಿಲು ತಳ್ಳಿದಳು. ಅವಳ ಮೂಗಿಗೆ ತುಪ್ಪದ ವಾಸನೆ ಬಡಿಯಿತು ಸರಸರನೆ ಬಿಂದಿಗೆಯನ್ನು ಹಜಾರದಲ್ಲಿಟ್ಟು, ಕೋಣೆಗೆ ಹೋಗಿ ನೋಡಿದಳು ತುಪ್ಪದ ಗಡಿಗೆ ಒಡೆದು ನುಚ್ಚುನೂರಾಗಿ ಬಿದ್ದಿತ್ತು ತುಪ್ಪವೆಲ್ಲಾ ಕೋಣೆಯಲ್ಲಿ ಚೆಲ್ಲಾಡಿತ್ತು. ವಾಸನೆಯು ಕೋಣೆಯನ್ನೆಲ್ಲಾ ತುಂಬಿಬಿಟ್ಟಿತ್ತು ಈ ದೃಶ್ಯವು ಕಣ್ಣಿಗೆ ಬಿದ್ದ ಕೂಡಲೇ ಆಕೆಗೆ ಭಯವೂ ಆಶ್ಚರ್ಯವೂ ಒಂದೇ ಬಾರಿ ಉಂಟಾದುವು. ಮೈ ನಡುಕಗೊಂಡಿತು ಆಕೆ ಏನೂ ತೋಚದೆ ಸ್ವಲ್ಪ ಹೊತ್ತು ಬೆಪ್ಪು ಹಿಡಿದವಳಂತೆ ನಿಂತುಕೊಂಡಳು

"ತುಪ್ಪದ ಗಡಗೆಗಳನ್ನೆಲ್ಲಾ ಅಟ್ಟದ ಮೇಲೆ ಭದ್ರವಾಗಿ, ಜೋಪಾನವಾಗಿ ಇಟ್ಟಿದ್ದೆ. ಬೆಕ್ಕು ಬಂದರೂ ಉರುಳಿಸಲು ಸಾಧ್ಯವಿಲ್ಲ ಹೇಗೆ ಈ ಮಾಯ ನಡೆದಿದೆ" ಎಂದು ಚಿಂತಿಸಿದಳು. ಯಾವ ಕಾರಣದಿಂದ ಹೀಗಾಗಿದೆ ಎಂಬುದು ಆಕೆಯ ಊಹೆಗೆ ಎಟುಕಲಿಲ್ಲ ತಾನು ಸೊಸೆಯಾಗಿ ಬಂದಂದಿನಿಂದ ಇಂಥ ಅಪಶಕುನಗಳಾವುವನ್ನೂ ನೋಡಿರಲಿಲ್ಲ. ಈ ಮದುವೆ ಏರ್ಪಾಡು ಮಾಡುತ್ತಿರುವುದಕ್ಕೇನಾದರೂ ಹೀಗಾಯಿತೆ? ಎಂದು ಏನೇನೋ ಯೋಚಿಸುತ್ತ "ಅದೇನೇ ಆಗಲಿ ಯಜಮಾನರಿಗೆ ಗೊತ್ತಾದರೆ ಇದೇ ಒಂದು ನೆವ ಇಟ್ಟುಕೊಂಡು ಊರಲ್ಲೆಲ್ಲಾ ಸಾರಿ

ಬಿಡುತ್ತಾರೆ ಎಂದುಕೊಂಡು, ಬೆವರು ಹರಿಯುತ್ತಿದ್ದ ಮುಖವನ್ನು ಒರಸಿ ಕೊಂಡಳು. ಕಣ್ಣು ಮುಚ್ಚಿ ಬಿಡುವಷ್ಟರಲ್ಲಿ ಕೋಣೆಯನ್ನು ಗುಡಿಸಿ ತೊಳೆದಳು ತುಪ್ಪದ ವಾಸನೆ ಮಾತ್ರ ಎರಚುತ್ತಲೇ ಇತ್ತು. ಯಜಮಾನರು ನೋಡಿದರೆ ಏನುಮಾಡುತ್ತಾರೋ ? ಅಪಶಕುನದ ಹೆಗ್ಗುರುತೆಂದು ಲಗ್ನಕ್ಕೆ ಎಲ್ಲಿ ಭಂಗತಂದಾರೋ! ಎಂಬ ಭಯ ಆಕೆಯಲ್ಲಿ ಬೇರೂರಿತು. ಅಷ್ಟರಲ್ಲಿ ಹೊನ್ನಯ್ಯ ಏನೂ ಅರಿಯದವನಂತೆ ಮನೆಗೆ ಬಂದ, ಹೊರಬಾಗಿಲಿನಲ್ಲಿ ನಿಂತು ಕಾಲುಧೂಳು ಕೊಡಹುತ್ತಾ ತಾನು ಬಂದದ್ದು ಹೆಂಡತಿಗೆ ತಿಳಿಯಲೆಂದು ಒಂದೆರಡು ಸಾರಿ ಕೆಮ್ಮಿದ. ಒಳ ಬಾಗಿಲಿಗೆ ಕಾಲಿಡುತ್ತಲೇ "ಏನಿದು, ತುಪ್ಪದ ವಾಸನೆ ಎರಚಾಡುತ್ತಾ ಇದೆ. ಏನಾಯ್ತು ? ತುಪ್ಪದ ಗಡಿಗೆ ಬಿದ್ದುಹೋಗಿರುವಹಾಗಿದೆ! ಯಾರು ಒಡೆದವರು ?" ಎಂದು ಒಂದೇ ಉಸಿರಿನಲ್ಲಿ ಹೆಂಡತಿಯನ್ನು ಪ್ರಶ್ನಿಸಿದ ಇವನ ಧ್ವನಿಯನ್ನು ಕೇಳಿದ ಕೂಡಲೇ ಆಕೆ ಗಿಡಗನನ್ನು ಕಂಡ ಪಾರಿವಾಳದಂತೆ ಬೆದರಿಹೋದಳು. ವಿಷಯವನ್ನೇ ಅರಿಯದ ಆಕೆ ತಕ್ಷಣ ಉತ್ತರವನ್ನು ಕೊಡಲಾರದೆ ಬಾಯಿಗೆ ಬೀಗ ಹಾಕಿ ಕೊಂಡಳು. ಮೈ ಬೆವರ ತೊಡಗಿತು ; ಬೊಂಬೆಯಂತೆ ಮಾತನಾಡದೆ ಗೋಡೆಯನ್ನು ಒರಗಿ ನಿಂತಳು. ಹೊನ್ನಯ್ಯ ಕ್ಷಣಮಾತ್ರದಲ್ಲಿ ಮನುಷ್ಯತ್ವವನ್ನು ಕಿತ್ತೊಗೆದು, ಕಣ್ಣುಗಳನ್ನು ಬಿರಿಬಿರಿಬಿಡುತ್ತಾ ಆಕೆಯನ್ನೇ ನುಂಗಿಬಿಡುವಂತೆ ತೀಕ್ಷ್ಣದೃಷ್ಟಿಯನ್ನು ಬೀರತೊಡಗಿದ. ತಿಮ್ಮಕ್ಕನ ತುಟಿಗಳು ಅದರತೊಡಗಿದವು ಮುಖದ ಮೇಲೆಲ್ಲಾ ಬೆವರಿನ ಹನಿಗಳು. "ಏನು ? ಹೇಳುತ್ತೀಯೋ ಇಲ್ಲವೋ ? ಮಳ್ಳಿ ಇದ್ದಹಾಗೆ ಇದ್ದೀಯಲ್ಲೇ, ಏನಿದು ? ಬಾಯಿಬಿಡು" ಎಂದು ಹುಲಿಯಂತೆ ಆರ್ಭಟಿಸಿದ ಹೊನ್ನಯ್ಯ. ಆಕೆಯು ಕಂಬನಿಯ ಕಾಲುವೆಯನ್ನು ಹರಿಸುತ್ತಾ ಕುಂದಿದ ಧ್ವನಿಯಿಂದ "ನಾನು ಬಾವಿಗೆ ಹೋಗಿದ್ದೆ ಆ ಸಮಯದಾಗ ತುಪ್ಪದ ಗಡಿಗೆ ಅಟ್ಟದ ಮೇಲಿಂದ ಇದ್ದಕ್ಕಿದ್ದಹಾಗೆಯೇ ಬಿದ್ದು ಒಡೆದು ಚೂರಾಗಿತ್ತು ಸ್ವಲ್ಪ ತುಪ್ಪ ಹೋಗಿದೆ." ಎಂದಳು. ಹೊನ್ನಯ್ಯ "ಹಾಂ, ಹೆಚ್ಚಾಗಿ ಹೋಗಬೇಕಾಗಿತ್ತೆ ? ಸ್ವಲ್ಪ ಹೋಗಿರುವುದು ಸಾಲದೆ ನಿನಗೆ ? ಏನು ಹೇಳುತ್ತಿ ಈಗ ? 'ರಂಗಪ್ಪನಿಗೆ ಮದುವೆ ಮಾಡಿ, ಅಂತ

ಕುಣಿಯುತ್ತಾ ಇದ್ದಿರಿ. ನನ್ನ ಮನೆಯಲ್ಲಿ ತಿಂದು ನಿಮಗೆಲ್ಲಾ ಕೊಬ್ಬು ಹೆಚ್ಚಾಯಿತು ಶಕುನ ಎಷ್ಟು ಚಂದಾಯಿತು ನೋಡಿದಿರೋ ? ಮೂರು ಕಾಸಿನ ಹೆಂಗಸರೂ ನನಗೆ ಬುದ್ಧಿ ಹೇಳುವುದಕ್ಕೆ ಬರುವುದು ! ಈಗ ಅನುಭವಿಸುವವರಾರು, ನಾನಲ್ಲವೆ? ಈಗೇನು ಕಂಡೆ, ಸರಿಯಾದ ಬರೆ ಹಾಕ್ತೇನೆ ನಿಮಗೆಲ್ಲಾ"ಎಂದು ನೊರನೊರನೆ ಹಲ್ಲುಕಡಿಯುತ್ತಾ 'ಕಳ್ಳನಿಗೆ ಪಿಳ್ಳೆ ನೆವ' ಎಂಬ ಗಾದೆಗೆ ಸರಿಯಾಗಿ ಇದನ್ನೇ ದೊಡ್ಡದು ಮಾಡಿಕೊಂಡು ಸರಸರನೆ ಜಗುಲಿಗೆ ಹೋಗಿ ಕುಳಿತ. ಊರಿನ ಕೆಲವು ಮುಖಂಡರನ್ನು ಕರೆಸಿದ ಎಲ್ಲರೂ ಬಂದು "ಏನಪ್ಪ ಸಮಾಚಾರ ? ಈ ದಿನ ಏಕೆ ಇಷ್ಟೊಂದು ಕಿಡಿ ಕಿಡಿಯಾಗಿದ್ದೀ ? ಯಾರ ಮೇಲೆ ?" ಎಂದರು

"ಮೊದಲು ಕುಳಿತು ಕೊಳ್ಳಿರಯ್ಯ; ಕಿಡಿ ಕಿಡಿಯಾಗಿದ್ದೇನೆ ಕೆಲಸವಿಲ್ಲದೆ ನೋಡಿರಯ್ಯ ! ನಾನು ಗಿಳಿಗೆ ಹೇಳಿದ ಹಾಗೆ ನಮ್ಮ ತಾಯಿಗೂ, ನಮ್ಮ ಹೆಂಗಸಿಗೂ ಹೇಳಿದೆ ನನ್ನ ಮಾತು ಕೇಳದೆ ಸಿದ್ಧಮ್ಮನ ಮಗನಿಗೆ ಹೆಣ್ಣು ಒಪ್ಪಂದ ಮಾಡಿ ಲಗ್ನ ಕಟ್ಟಿಸಿದ್ದು ನಿಮಗೆ ಗೊತ್ತಿದ ಇಲ್ಲಿ ಬಂದು ನೋಡಿ" ಎಂದು ಕೋಣೆಗೆ ಕರೆದುಕೊಂಡು ಹೋಗಿ 'ಈ ತುಪ್ಪದ ಗಡಿಗೆ ನೋಡಿ, ಇದ್ದಕ್ಕಿದ ಹಾಗೆ ಬಿದ್ದು ಒಡೆದುಹೋಗಿದೆ ಇದು ಎಂಥ ಅಪಶಕುನ ನೋಡಿ ! ಆ ಬಡ ಜೋಯಿಸ ಸುಳ್ಳು ಶಾಸ್ತ್ರ ಹೇಳಿ ಲಗ್ನ ಕಟ್ಟಿದ್ದಾನಲ್ಲಾ ! ಏನು ಮಾಡಲಿ ಅವನಿಗೆ ? ನಾಳೆ ಹೆಣ್ಣು ಕೊಡಲಿಲ್ಲವೆಂದು ಗಂಡಿನ ಕಡೆಯುವರು ಜೋರುಮಾಡಿದರೆ ನೀವೆಲ್ಲಾ ಇದಕ್ಕೆ ಸಾಕ್ಷಿಯಾಗಿರಿ. ನಾನು ಈಗಲೇ ಬೇರೆ ಊರಿಗೆ ಹೋಗಿ ತಿಳಿದವರಿಂದ ಕವಡೆ ಬಿಡಿಸಿ, ಶಾಸ್ತ್ರವನ್ನು ನಿಧಾನವಾಗಿ ಕೇಳುತ್ತೇನೆ" ಎಂದು ಹೇಳುತ್ತಾ ಎದ್ದು ಹೊರಟೇ ಹೋದ, ಹೊನ್ನಯ್ಯ ಬಂದಿದ್ದ ಯಜಮಾನರು ತಿಮ್ಮಕ್ಕನ ದುಃಖವನ್ನು ನೋಡಿ ಕನಿಕರಗೊಂಡು "ಏಕೆ ದುಃಖಪಡುತ್ತಿ ಬಿಡಮ್ಮ, ಆ ಹುಡುಗಿ ಹಣೆಯಲ್ಲಿ ಬರೆದ ಹಾಗೆ ಆಗುತ್ತೆ. ಇವನ ರಗಳೆ ಕಂಡಿದ್ದೀಯೆ" ಎಂದು ಸಮಾಧಾನ ಹೇಳಿದರು. ತಿಮ್ಮಕ್ಕ ಈ ವಿಚಿತ್ರ ಹೇಗೆ ನಡೆದಿತೆಂಬುದು ತನಗೂ ಅರಿಯದೆಂದು ಅವರ ಸಂಗಡ ಹೇಳಿ "ನೋಡಿರಪ್ಪ, ನೀವೂ ಮಕ್ಕಳಂದಿಗರು. ಈ ಆಟ ನೀವೂ ಆಡ್ತೀರಾ ?" ಎಂದು

ಕಣ್ಣೀರು ಸುರಿಸತೊಡಗಿದಳು. ಬಂದಿದ್ದವರು ಸಪ್ಪೆ ಮೋರೆ ಹಾಕಿಕೊಂಡು ತಾವು ಮಾತಾಡಿ ಪ್ರಯೋಜನವಿಲ್ಲವೆಂದು ಸೂಚಿಸುವ ಮೌನದಿಂದ ತಮ್ಮ ತಮ್ಮ ಮನೆಗೆ ಹೊರಟುಹೋದರು.

ತೋಟಕ್ಕೆ ಹೋಗಿದ್ದ ಹೊನ್ನಮ್ಮ ಮನೆಗೆ ಬಂದು ವಿಚಾರವನ್ನು ತಿಮ್ಮಕ್ಕನಿಂದ ತಿಳಿದೊಡನೆಯೇ ತಲೆಯ ಮೇಲೆ ಕೈ ಇಟ್ಟುಕೊಂಡು ಯೋಚಿಸುತ್ತಾ ಕುಳಿತಳು ಆಕೆ ಹಳೆಯ ಸಂಪ್ರದಾಯಕ್ಕೆ ಸೇರಿದ ವ್ಯಕ್ತಿಯಾದ್ದರಿಂದ ಇಂಥ ಶಕುನಗಳನ್ನು ಕೆಡಕೆಂದೇ ನಂಬುತ್ತಿದ್ದಳು. ಮನಸ್ಸಿನಲ್ಲಿ ಒಂದೊಂದು ಸಲ "ಏನೋ ಅಕಸ್ಮಾತ್ತಾಗಿ ಬೆಕ್ಕೊ ಗಿಕ್ಕೊ ಬೀಳಿಸಿದ್ದರೂ ಇರಬಹುದು ಇದೇನು ಮಹ" ಎಂದುಕೊಂಡು, ರೋಗದ ಕೋಳಿಯಂತೆ ಕೊರಗುತ್ತಾ ಕುಳಿತಿದ್ದ ಸೊಸೆಯನ್ನು "ಬಿದ್ದರೆ ಏನಾಯ್ತು? ಇದಾವ ದೊಡ್ಡ ಅಪಶಕುನ? ಮನುಷ್ಯರೇ ಸಾಯುವುದಿಲ್ಲವೇ? ಇನ್ನು ತೆಪ್ಪನೆ ಇರು ತಿಮ್ಮಿ"ಎಂದು ಸಮಾಧಾನಪಡಿಸುತ್ತಿದ್ದಳು. ತಿಮ್ಮಕ್ಕ ಯಾರು ಏನು ಧೈರ್ಯ ಹೇಳಿದರೂ ನಂಬದ ಸ್ಥಿತಿಯಲ್ಲಿದ್ದಳು. ತನ್ನಲ್ಲಿ ಮೂಡಿದ್ದ ಹೂಂಗನಸೆಲ್ಲವೂ ಮಣ್ಣುಪಾಲಾಯಿತೆಂದು ಗೋಳಾಡಿದಳು ಮನಸ್ಸು ಸಂತಾಪದ ಜೊತೆಯಲ್ಲಿ ರಂಗಯ್ಯನ ಕಡೆ ಹೋಯಿತು ದಿನವೆಲ್ಲಾ ಉಪವಾಸವ್ರತ ಮಾಡಿದಳು. ರಾತ್ರಿ ಯೋಚನೆಯ ಬೇಗೆಯಿಂದ ಬೆಂದು ನಿದ್ರೆಬಾರದೆ ಕತ್ತಲಲ್ಲೇ ಎದ್ದು ಮಡಿಬಟ್ಟೆಯಲ್ಲಿ ತಮ್ಮ ಮನೆದೇವತೆಗೆ ನಾಲ್ಕು ಪಾವಲಿ ಕಾಣಿಕೆ ಕಟ್ಟಿ, ಈ ಲಗ್ನವನ್ನು ಹೇಗಾದರೂ ಮಾಡಿ ನೆರವೇರಿಸಬೇಕೆಂದೂ ಪರಿಣಾಮವಾಗಿ ದೇವಸ್ಥಾನಕ್ಕೆ ಮಗಳನ್ನೂ ಅಳಿಯನನ್ನೂ ಪ್ರತಿ ವರ್ಷವೂ ಯಾತ್ರೆ ಕಳುಹಿಸುವುದಾಗಿಯೂ ಕೂತಲ್ಲಿ ಕುಳಿತು ಬೆಳಗಾಗುವವರೆಗೂ ಪ್ರಾರ್ಥಿಸಿದಳು. (ಆಕೆಯ ಪ್ರಾರ್ಥನೆಯಿಂದ ದೈವೇಚ್ಛೆ ಬದಲಾಗುವುದುಂಟೆ?) ಜೀವನದಲ್ಲಿ ಪ್ರತಿ ಘಳಿಗೆಯಲ್ಲೂ ಎಡರು ತೊಡರುಗಳಿದ್ದೇ ಇವೆ.

ಹೊನ್ನಯ್ಯ ಬೇರೆ ಜೋಯಿಸರಿಂದ ಶಾಸ್ತ್ರವನ್ನು ಕೇಳುತ್ತೇನೆಂದು ಹೊರಟವನು ತನ್ನ ದೂರದ ಸಂಬಂಧಿಗಳಿದ್ದ ನವಲೂರಿಗೆ ಹೋದ. ಹೊನ್ನಯ್ಯ ಇದ್ದಕ್ಕಿದ್ದ ಹಾಗೆ ಬಂದದ್ದನ್ನು ನೋಡಿ ಮುತ್ತಣ್ಣನಿಗೆ ಒಮ್ಮೆಲೆ ಆಶ್ಚರ್ಯವಾಯಿತು. 'ಇದೇನು! ಎಂದೂ ಬಾರದಿದ್ದ ಮನುಷ್ಯ

ತಾನಾಗಿಯೇ ಬಂದವನಲ್ಲ' ಎಂದುಕೊಂಡು ಇವನನ್ನು ಬಹಳ ಆದರ ದಿಂದ ಕಂಡು "ಏನು ಅಪರೂಪವಾಗಿ ಬಂದಿರಲ್ಲಾ! ಬಡವರ ಮನೆಗೆ ಭಾಗ್ಯ ಬಂದಹಾಗಾಯ್ತು" ಎಂದ.

"ನಾನು ಯಾವುದೋ ಕಾರ್ಯಾರ್ಥವಾಗಿ ಬಂದೆ. ಹೀಗೆಯೆ ತಮ್ಮೆಲ್ಲರನ್ನು ನೋಡಿಕೊಂಡು ಹೋಗಬೇಕೆಂದು ಮನಸ್ಸಾಯಿತು" ಎಂದ ಹೊನ್ನಯ್ಯ ಇವನ ಬಡ ಬಂಧುಗಳು ಕ್ಷಣಮಾತ್ರದಲ್ಲಿ ಬೇಕಾದ ಸಾಮಾನುಗಳನ್ನು ಅಲ್ಲಿ ಇಲ್ಲಿ ಹವಣಿಸಿ ಊಟಕ್ಕೆ ಸಿದ್ಧಪಡಿಸಿದರು. ಅಂದು ಮನೆಯಲ್ಲಿ ಮುತ್ತಣ್ಣ ಸ್ವಲ್ಪ ಹೆಚ್ಚುಕಟ್ಟಲೆ ಅಡುಗೆ ಮಾಡಿಸಿದ್ದ, ದುಡ್ಡಿನವ ಹೊನ್ನಯ್ಯ, ಇನ್ನೇನಾದರೂ ತಿಳಿದಾನೆಂದು. ಕೈಕಾಲಿಗೆ ನೀರು ಕೊಟ್ಟು, ತಣಿಗೆಯನ್ನು ಮುಂದಿಟ್ಟರು. ಊಟಕ್ಕೆ ಕುಳಿತಾಗ ಮುತ್ತಣ್ಣ ನನ್ನು ಹೊನ್ನಯ್ಯ ತನ್ನ ಪಕ್ಕದಲ್ಲೇ ಕುಳಿತು ಊಟಮಾಡಬೇಕೆಂದು ಕೂರಿಸಿಕೊಂಡ ಹೊನ್ನಯ್ಯ ಅದೂ ಇದೂ ಮಾತಾಡುತ್ತಾ—"ಏನು, ಈ ವರ್ಷ ಮಳೆ ಬೆಳೆ ಚೆನ್ನಾಗಿದೆ ನಿಮ್ಮ ದೊಡ್ಡಮಗನಿಗೆ ಏನಾದರೂ ಮದುವೆ ಮಾಡುತ್ತೀರೊ ಇಲ್ಲವೊ?" ಎಂದು ಮಾತು ತೆಗೆದ. ಮುತ್ತಣ್ಣ ನಿಗೆ ಹೊನ್ನಯ್ಯನ ಮಾತು ಅರ್ಥವಾಯಿತು

"ಏನು ಮಾಡಲಿ ಹೇಳಿ ಸ್ವಲ್ಪ ದಿನಸಿ ಇದೆ ದುಡ್ಡಿಗೆ ತಾನೆ ತಾಪತ್ರಯ" ಎಂದ ಮೆಲುದನಿಯಲ್ಲಿ ಮುತ್ತಣ್ಣ

"ಮನೆಯಲ್ಲಿ ಯಾವುದಾದರೂ ಮರಿ, ಕರುಗಳಿಲ್ಲವೆ? ಮಾರಿದ ರಾಯಿತು, ಹೇಗೂ ಒಂದಕ್ಕೆ ಎರಡಾಗಿದೆ ವ್ಯಾಪಾರ. ಶಿವನಳ್ಳಿ ಜಾತ್ರೆಯಲ್ಲಿ ಸತ್ತು ಹೋಗುವಂಥ ಗೋವುಗಳೂ ನಿಲ್ಲಲಿಲ್ಲ".

"ಈಗ್ಗೆ ನಾಲ್ಕು ದಿನದಲ್ಲಿ ಒಂದು ಕರು ಮಾರಿದ್ದಾಯಿತು ಆ ದುಡ್ಡನ್ನು ಒಂಬತ್ತು ಗಂಟುಹಾಕಿ ಇಟ್ಟಿದ್ದೀನಿ ಇನ್ನು ಅದಕ್ಕೆ ಯಾವಾವ ದಾರಿ ಕಾದಿದೆಯೋ ಕಾಣೆ"

"ಎಷ್ಟಕ್ಕೆ ಮಾರಿದಿರಿ? ಕರು ಚೆನ್ನಾಗಿತ್ತು ಅಂತ ಕಾಣುತ್ತೆ"

"ಚೆನ್ನಾಗಿ ಸಾಕಿದ್ದೆ ಒಂದನೂರ ಏವತ್ತಕ್ಕೆ ಕೊಟ್ಟು ಬಿಟ್ಟೆ".

ಹೊನ್ನಯ್ಯ ಕಿವಿ ನೆಟ್ಟಗೆ ಮಾಡಿಕೊಂಡು ತನ್ನಲ್ಲೇ 'ಇನ್ನೇನು ಸಲ ದುಡೂ ಇದೆ. ಇದೇ ಸಮಯ" ಎಂದುಕೊಂಡು."ನಾನೊಂದು

ಮಾತು ಹೇಳುತ್ತೇನೆ ಕೇಳುತ್ತೀರ?" ಎಂದು ಹುಸಿನಗೆ ಬೀರಿದ.

"ಇದೇನು ಹೀಗೇಳ್ತೀರಿ? ನಿಮ್ಮಂಥ ಬದುಕಿ ಬಾಳಿದವರು ಹೇಳಿದರೆ ಕೇಳಲಾರ್ನೆ. ನನಗೇನು ತಿಳಿದಿದೆ?" ಎಂದ ಮುತ್ತಣ್ಣ

"ನೀವು ಖಂಡಿತ ಕೇಳುತ್ತೇನೆಂದರೆ ಮಾತ್ರ ಹೇಳುತ್ತೇನೆ. ಸುಮ್ಮನೆ ಯಾಕೆ ಬಾಯಿ ನೋವು ಮಾಡಿಕೊಳ್ಳಲಿ? ಏನೋ ಹೇಳ್ದ; ಹೊರಟುಹೋದ ಅನ್ನಬಾರದು ನೀವು"

"ಏತಕ್ಕೆ ಇಷ್ಟು ಅನುಮಾನ? ಖಂಡಿತ ಕೇಳ್ತೀನೆ. ಅದೇನು ಬಾಯಿಬಿಡಿ"

"ನಿಮ್ಮ ಹುಡುಗನಿಗೆ ಈ ಬೇಸಿಗೆಯಲ್ಲಿ ಮದುವೆ ಮಾಡಿಬಿಡಿ. ಇರುವ ದುಡ್ಡು ಖರ್ಚಾಯಿತೆಂದರೆ ಪುನಃ ಸಂಪಾದಿಸುವುದು ಬಹು ಕಷ್ಟ. ಪ್ರಾಯದ ಗಂಡುಮಕ್ಕಳನ್ನು ಹಾಗೆ ಬಿಟ್ಟರೆ ದಾರಿ ತಪ್ಪಿದರೂ ತಪ್ಪ ಬಹುದು ಎಷ್ಟೊಂದು ಹುಡುಗರು ಕೆಟ್ಟಿದ್ದಾರೆ ಅಂತೀರ. ಅದಕ್ಕೆಲ್ಲಾ ನಾವೇ ಕಾರಣ ಮುತ್ತಪ್ಪ"

"ತಾವು ಹೇಳುವುದು ನ್ಯಾಯ ನನಗೂ ನನ್ನ ತಲೆ ಮೇಲಿರುವ ಒಂದು ಭಾರ ಇಳಿಸಿದಂತಾಗತದೆ. ಆದರೆ ಈ ತುರ್ತಲ್ಲಿ ಹೆಣ್ಣೆಲ್ಲಿದೆ? ಮದುವೆ ಅಂದರೆ ಹುಡುಗಾಟವೆ? ಬಡಸ್ಥಿತಿಯಲ್ಲಿ ಲಗ್ನಮಾಡಿದರೂ ನೂರಾರು ರುಪಾಯಿ ಬೇಡವೆ?"

"ಇಲ್ಲೊಂದು ಹುಡುಗಿ ಇದೆ. ಗೊಂಬೆ ಇದ್ದಹಾಗಿದೆ ಬೇಕಾ ದರೆ ಕೊಡಿಸುತ್ತೇನೆ. ತಕ್ಕ ಮಟ್ಟಿಗೆ ಧನಿಕರು. ನಿಮ್ಮ ಹುಡುಗನಿಗೆ ತಂದುಕೊಳ್ಳಬಹುದು ದುಡ್ಡಿನ ವಿಚಾರ ನನಗಿರಲಿ. ಇನ್ನೇನು?"

ಮುತ್ತಣ್ಣ (ಆಶ್ಚರ್ಯದಿಂದ) "ಅದೆಲ್ಲಿದೆ, ನಾನು ಕಾಣದ ಹಾಗೆ? ನಿಮ್ಮನ್ನು ಬಿಟ್ಟರೆ ಈ ಹಳ್ಳಿಯ ಕಡೆ ಬೇರೆ ಧನಿಕರಿಲ್ಲವಲ್ಲ! ಅದರಲ್ಲೂ ನಿಮ್ಮ ಲಿಂಗಮ್ಮನ ಹಾಗೆ ಯಾವ ಹೆಣ್ಣಿದೆ, ಹೇಳಿ ಹೊನ್ನಪ್ಪ ಆದರೆ ನಾನೊಂದು ಮಾತು ಕೇಳುತ್ತೇನೆ. ಮನಸ್ಸಿಗೆ ಬೇಸರ ಮಾಡಿಕೋಬೇಡಿ. ಧನಿಕರ ಮನೆ ಹೆಣ್ಣು ತರಬಾರದು. ಬಡವರಿಗೆ ಬಡವರೇ ಸರಿ. ಹೆಣ್ಣು ತರಬೇಕಾದ್ರೆ ಬಡವರ ಮನೇಲಿ ತರಬೇಕು, ಕೊಡಬೇಕಾದ್ರೆ ಧನಿಕರ ಮನೆಗೆ ಕೊಡಬೇಕು. ಮುಖ್ಯವಾಗಿ ಮಾನವಂತರ ಮನೆಗೆ

ಹೆಣ್ಣು ಮಕ್ಕಳನ್ನು ಕೊಡಬೇಕು ಹೊನ್ನಪ್ಪ" ಎಂದ

ಮನೆಯವರೆಲ್ಲರೂ ಒಂದು ಮೂಲೆಯಲ್ಲಿ ಒಟ್ಟಿಗೆ ಸೇರಿಕೊಂಡು "ಹೊನ್ನಯ್ಯನವರು ಅದೇನು ಬಗೆಯೊ, ಈ ದಿನ ಬಹಳ ಖುಷಿಯಾಗಿ ಮಾತನಾಡುತ್ತಾ ಇದ್ದಾರೆ, ಏನೋ ಇರಬೇಕು, ಇಲ್ಲದಿದ್ದರೆ ತಾನಾಗಿ ನಮ್ಮ ಮನೆಗೆ ಬಂದು ಇಷ್ಟು ಸರಾಗವಾಗಿ ಮಾತನಾಡಿಯಾರೆ ?" ಎಂದುಕೊಳ್ಳುತ್ತಾ ಇವರ ಮಾತುಗಳನ್ನು ತೆರೆದ ಬಾಯಿಂದ, ನಿಮಿರೆದ್ದ ಕಿವಿಗಳಿಂದ ಕೇಳುತ್ತಿದ್ದರು

"ಊಟ ಮುಗಿಸಿ ಹೆಣ್ಣಿರುವ ಸ್ಥಳ ತೋರಿಸುತ್ತೇನೆ ಹೆದರ ಬೇಡಿ. ಅವರು ಧನಿಕರಾದರೂ ಸಜ್ಜನರು ಆ ವಿಚಾರದಲ್ಲಿ ನೀವು ಎಳ್ಳಷ್ಟೂ ಯೋಚನೆ ಮಾಡಬೇಡಿ" ಎಂದು ಹಲ್ಲುಕಿರಿದ ಹೊನ್ನಯ್ಯ

ಇಬ್ಬರೂ ಊಟ ಮುಗಿಸಿ ಮನೆಯ ಹಜಾರದಲ್ಲಿ ತಾಂಬೂಲ ಹಾಕಿಕೊಳ್ಳುತ್ತಾ ಕುಳಿತರು.

"ಏನು ಮುತ್ತಪ್ಪ, ಮೌನವಾಗಿ ಕುಳಿತುಬಿಟ್ಟಿರಲ್ಲ! ಇದು ಹೆಣ್ಣು ನೋಡುವವರ ತರ?" ಎಂದು ವ್ಯಂಗ್ಯವಾಗಿ ನಕ್ಕ ಹೊನ್ನಯ್ಯ ಆ ನಗುವಿನ ಹಿಂದೆ ಸಂಚು ಅಡಗಿದ್ದುದನ್ನು ಮುತ್ತಣ್ಣ ಹೇಗೆ ತಿಳಿದಾನು?

"ಎಲ್ಲವೂ ತಮ್ಮದೆ ಎಂದು ನಾನು ತೆಪ್ಪನಾದೆ ನೀವೇ ಒಂದು ದಾರಿ ತೋರಿಸಬೇಕು ನಮಗೆ" ಎಂದ ಮುತ್ತಣ್ಣ

"ನಿಮ್ಮ ಹುಡುಗನಿಗೆ ಮಾಡಿಕೊಳ್ಳುತ್ತೇನಂದರೆ ಹೇಳುತ್ತೇನಪ್ಪ. ನೀವು ಮಾತಿಗೆ ಕದಿಯಬಾರದು"

"ಹೇಳಿ. ನೀವು ಮಾಡಿಕೊಳ್ಳಿ ಎಂದ ಮೇಲೆ ತೀರಿತು. ನಿಮ್ಮ ಮಾತನ್ನು ಮೀರ್ತೇನೆಯೆ ?"

"ದೂರ ಏತಕ್ಕೆ? ನಾನು ತಾನೆ ಹೊಸ ನಂಟಸ್ತಿಕೆಗೆ ಹೋಗುವುದೇ ಬೇಡ. ಹೊಸ ಮನೆಗೆ ಕಾಗೆ ಹೊಕ್ಕೀತಾಗುತ್ತೆ ನಿಮ್ಮ ಗುಣ ನಡತೆ ನಮಗೆ ಹೊಸದಲ್ಲ ನಮ್ಮ ಕಷ್ಟ ಸುಖ ನಿಮಗೆ ಗೊತ್ತಿದೆ ನಮ್ಮ ಲಿಂಗಿಯನ್ನೇ ಮಾಡಿಕೊಳ್ಳಿ ಹೋಗಿ ಹಳೆ ತಲೆಯ ನಂಟೂ ಉಳಿದುಕೊಳ್ಳುತ್ತದೆ" ಎಂದು ಗಂಭೀರವಾಣಿಯಿಂದ ಹೇಳಿದ.

"ಏನು ಹೊನ್ನಪ್ಪ! ಸಿದ್ದಮ್ಮನ ಮಗನಿಗೆ ಲಗ್ನ ಮಾಡ್ತೀರಂತೆ

ಏನು ಆಶ್ಚರ್ಯ ನೀವು ಮಾತನಾಡೋದು! ಈ ಸೀಮೆ ಜನ ಏನು ತಿಳಿದುಕೊಂಡಾರು? ನಮ್ಮ ಊರಲೆಲ್ಲಾ ಸುದ್ದಿ ಹರಡಿದೆ ಯಾವ ಹೆಂಗಸಿನ ಬಾಯಲ್ಲೂ ಅದೇ ಮಾತು!"

ಮುತ್ತಪ್ಪ, ಆ ಕತೆ ಏನು ಹೇಳಲಿ? ಅದೊಂದು ರಾಮಾಯಣ, ನೋಡಿ. ಬೇಡಮ್ಮ, ದೂರದ ದೇಶವೆಂದರೂ ಹಟಹಿಡಿದಳು ಸಿದ್ದಮ್ಮ ಬಲವಂತದಿಂದ ಈ ಹೊತ್ತಿಗೆ ಮೂರು ದಿನಕ್ಕ ಏಳ್ಯದ ಶಾಸ್ತ್ರಕ್ಕೆ ಬರುತ್ತೇವೆಂದೂ ಮತ್ತೆರಡು ದಿನಕ್ಕೇ ಲಗ್ನ ಮಾಡಬೇಕೆಂದೂ ತಾನೇ ಗೊತ್ತು ಮಾಡಿಕೊಂಡು ಊರಿಗೆ ಹೋದಳು. ಆಕೆ ಆ ಕಡೆ ಹೋದಳೊ ಇಲ್ಲವೊ, ಈ ಕಡೆ ನಮ್ಮ ಮನೆಯಲ್ಲಿ ಆಗಬಾರದ್ದೆಲ್ಲಾ ಆಗಿ ಹೋಯಿತು ತುಪ್ಪ ತುಂಬಿ ತುಳುಕುತ್ತಿದ್ದ ಗಡಿಗೆ ಇದ್ದಕ್ಕಿದ್ದ ಹಾಗೆ ಬಿದ್ದು ಒಡೆದು ಹೋಯಿತು ಸ್ವಪ್ನಸಾರಿಕೆಯೇ ಸರಿಯಾಗಿಲ್ಲ ಹೀಗಿರುವಲ್ಲಿ ಯಾರಿಗೆ ತಾನೆ ಮನಸ್ಸು ಬರುತ್ತೆ? ಚಿನ್ನದ ಕತ್ತಿ ಅಂತ ಮೂಗು ಕೊಯಿಸಿಕೊಳ್ಳಲೇ? ಆ ವಿಚಾರವನ್ನ ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಹೆಣ್ಣಿನ ತಂದೆ ನಾನು. ನಾನೇ ನಿಮ್ಮ ಮನೆ ಬಾಗಲಿಗೆ ಬಂದು 'ಹೆಣ್ಣು ಕೊಡುತ್ತೇನೆ ಮಾಡಿಕೊಳ್ಳಿ'! ಎನ್ನುವಾಗ ನಿಮಗೇಕ ಬಾಕಿ ವಿಚಾರ ಏನು ಬಂದರೂ ನಾನು ನೋಡಿಕೊಳ್ಳುತ್ತೇನೆ" ಎಂದು ದರ್ಪದಿಂದಲೇ ಹೇಳಿದ

"ಹೊನ್ನಪ್ಪ, ನೀವು ಎಷ್ಟೊ ದೊಡ್ಡದೊಡ್ಡವರ ಹತ್ತಿರ ಕೂತಿದ್ದವರು. ನಾನು ಹೇಳುವುದೇನಿದೆ? ಆದರೆ ಪಂಚಾಯ್ತಿ ಗಿಂಚಾಯ್ತಿಗೆ ನಿಮ್ಮ ತಂಗಿಯವರು ಸೇರಿಸಿದ್ರೆ ಹೆಣ್ಣು ಮದುವೆ ಮಾಡ್ಕೊಂಡವರ ಮೇಲೂ ತಪ್ಪು ಬರುತ್ತದೆ ಅದಕ್ಕಾಗಿ ನನಗೆ ಸ್ವಲ್ಪ ಹೆದರಿಕೆ ಅದರಲ್ಲೂ ನಾವು ಬಡವರು. ಕುಲ ಅನ್ನುವುದು ದೊಡ್ಡದು ನ್ಯಾಯಕ್ಕೆ ಬಡವರು ಸಿರಿವಂತರು ಅಂತ ಇಲ್ಲ ಸ್ವಲ್ಪ ಯೋಚನೆಮಾಡಿ ನೋಡಿಯಪ್ಪಾ. ದುಡುಕಬಾರದು ಆಮೇಲೆ ಹೆಣ್ಣಿನ ತಲೆ ಮೇಲೆ ಮಾತು ನಿಂತುಕೊಳ್ತದೆ ನಮ್ಮ ಕತೆ ಹೇಗೋ ಆಗ್ತದೆ ಎಲ್ಲೋ ಒಂದು ಹೆಣ್ಣು ತಂದರೆ ತೀರಿತು. ನಮ್ಮ ಹುಡುಗನೇನು ಚೆಲುವೇನೆ ಮದುವೆ ಆಗಬೇಕೂಂತ ತಪಸ್ಸು ಮಾಡ್ತಾ ಇಲ್ಲ"

ಹೊನ್ನಯ್ಯ— (ದರ್ಪದಿಂದ) "ಇದೆಲ್ಲಾ ನನಗೆ ಹೇಳಬೇಡಿ. ನಾನೇನು ಕುರಿಯಲ್ಲ. ನಾನು ಇಂಥ ಪಂಚಾಯ್ತಿಗಳನ್ನು ಎಷ್ಟೋ ನೋಡಿದ್ದೇನೆ. ನೀವು ಸದ್ದುಮಾಡದೆ ಏಳಿ ಮೇಲಕ್ಕೆ ಒಳ್ಳೆ ಜೋಯಿಸರ ಹತ್ತಿರ ಹೋಗಿ ಲಗ್ನ ಕಟ್ಟಿಸೇ ಬಿಡೋಣ ನಿಮ್ಮ ಹೆಂಗಸರು ಮಕ್ಕಳಿಗೆ ಸಮಾಚಾರವನ್ನು ತಿಳಿಸಿಬಿಡಿ" ಎಂದು ದಡಾರನೆ ಮೇಲಕ್ಕೆದ್ದ. ಅವನ ದನಿಯಲ್ಲಿ ಆಹಂಕಾರ ದರ್ಪಗಳು ತೇಲಿ ಬರುತ್ತಿದ್ದುವು ಮನಸ್ಸಿಲ್ಲದ ಮನಸ್ಸಿನಿಂದ ವಿಷಯವನ್ನು ಮುತ್ತಣ್ಣ ಮನೆಯವರಿಗೆ ತಿಳಿಸಿದ. "ಹಾಗೆಯೆ ನೂರ ಐವತ್ತು ರೂಪಾಯಿಯನ್ನು ತೆಗೆದುಕೊಳ್ಳಿ. ಈ ದಿನವೇ ಒಡವೇ ವಸ್ತು ತೆಗೆದೇ ಬಿಡೋಣ" ಎಂದ ಹೊನ್ನಯ್ಯ. ಮುತ್ತಣ್ಣ ದುಡ್ಡಿನ ಗಂಟನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಅವನ ಹಿಂದೆಯೇ ಹೊರಟ. ಹೊನ್ನಯ್ಯ ದೊಡ್ಡ ಶಿಕಾರಿ ಮಾಡಿದ ಬೇಟೆಗಾರನಂತೆ ಹಿಗ್ಗಿಹೋದ. ಇಬ್ಬರೂ ಒಬ್ಬ ಜೋಯಿಸರಲ್ಲಿ ಹೋಗಿ ಲಿಂಗಿಗೂ ರಂಗಯ್ಯನಿಗೂ ಲಗ್ನಕ್ಕೆ ಏರ್ಪಡಿಸಿದ್ದ ದಿನವೇ ಮುಹೂರ್ತವನ್ನು ಗೊತ್ತುಮಾಡಿ ಲಗ್ನ ಪತ್ರಿಕೆಯನ್ನು ಬರೆಸಿ ತಂದರು. ಹೊನ್ನಯ್ಯ ನೆಂಟನ ಜೊತೆಯಲ್ಲೇ ಪುನಃ ನವಲೂರಿಗೆ ಬಂದು "ಎಲ್ಲಾ ಸಾಮಾನು ಸಿದ್ಧಮಾಡಿಕೊಳ್ಳಿ ಹನುಮಂತರಾಯನ ಗುಡಿಹತ್ತಿರ ಲಗ್ನ ಮಾಡಿಬಿಡೋಣ. ಹೆಣ್ಣನ್ನು ಹೊತ್ತಿಗೆ ಮುಂಚೆ ಕರೆದುಕೊಂಡು ಬರುತ್ತೇನೆ. ನಿಮ್ಮಲ್ಲಿರುವ ದುಡ್ಡನ್ನು ನನಗೆ ಕೊಟ್ಟರೆ ಸೀರೆ, ಒಡವೆ ತರುತ್ತೇನೆ" ಎಂದ. ಹೊನ್ನಯ್ಯ ಬೀಗನಾದನಲ್ಲಾ ಎಂದು ಮುಖವನ್ನು ಊರಗಲ ಮಾಡಿಕೊಂಡ ಮುತ್ತಣ್ಣ ರೂಪಾಯಿಗಳನ್ನು ಕೊಟ್ಟು "ಚೆನ್ನಾಗಿರುವ ಒಡವೆ ವಸ್ತು ತನ್ನಿ, ಹೋಗಿಬನ್ನಿ" ಎಂದು ಕಳುಹಿಸಿಕೊಟ್ಟ. ಹೊನ್ನಯ್ಯ ಮೀನು ಬಲೆಗೆ ಬಿದ್ದಿತೆಂದು ಮುಂದೆ ಬರಬಹುದಾದ ತೊಡರುಗಳನ್ನು ಪರಿಹರಿಸುವ ಉಪಾಯವನ್ನು ಯೋಚಿಸುತ್ತಾ, ಮುತ್ತಣ್ಣ ಕೊಟ್ಟ ದುಡ್ಡಿನಲ್ಲೂ ಒಂದಷ್ಟು ರೂಪಾಯಿ ಉಳಿಸಿ ಜೇಬಿಗೆ ಹಾಕಬಹುದಲ್ಲಾ ಎಂದು ಊರಿನ ಕಡೆ ತಿರುಗಿದ

ಮುತ್ತಣ್ಣನ ಹೆಂಡತಿ ಬಸಮ್ಮ ಗಂಡನನ್ನು ಕುರಿತು "ಏನು ಹೀಗೆ ದುಡಿಕಿದರಲ್ಲಾ ! ತಂಗಿಯ ಮಗನಿಗೆ ಮಗಳನ್ನು ಕೊಡದೆ ಮೋಸ

ಮಾಡಿದ ಮಹಾರಾಯ ಇನ್ನು ನಮಗೇನು ಗಸ್ತು ಕೊಟ್ಟಾನೊ ! ಯಾರು ಬಲ್ಲರು ಅವರ ಮನೆ ಮಠಕ್ಕೆ ಹೊಸದಾಗಿ ಹೋಗಿಬಂದಿಲ್ಲ, ಶಾಸ್ತ್ರ ಸೂತ್ರ ನೋಡಿಲ್ಲ. ನಮ್ಮೂರ ಜನ ಏನೆಂದು ತಿಳಿದಾರು ? ನಮ್ಮ ಹುಡುಗ ನಾಗಯ್ಯನನ್ನು ಒಂದು ಮಾತು ಕೇಳಿದ್ರೇ ಚಂದಾಗಿತ್ತು" ಎಂದು ತನ್ನ ಅಸಮ್ಮತಿಯನ್ನು ಸೂಚಿಸಿದಳು "ನಾವೇನು ಅವನ ಮೇಲೆ ಬಿದ್ದು ಹೋಗಿದ್ದೆವೆ, ಧರ್ಮಕ್ಕೆ ಮದುವೆ ಮಾಡು ಅಂತ? ಅವ ನಾಗಿದ್ದು ನಮ್ಮ ಮನೆ ಬಾಗಿಲಿಗೆ ಬಂದವನೆ. ಯಾರು ಏನಂದಾರು ? ನಾವೇನು ಕಳ್ಳತನ ಮಾಡಿದ್ದೇವೆ ? ಏನೋ ಶಾಸ್ತ್ರ ಸರಿಬರಲಿಲ್ಲವಂತೆ ಹೆಣ್ಣಿನ ತಂದೆಗೆ ತಂಗಿ ಮಗನಿಗೆ ಕೊಡೋಕೆ ಮನಸ್ಸಿಲ್ಲ ಅದಕ್ಕೆ ನಮ್ಮ ದೇನು ತಪ್ಪು? ಆಗುವ ಕಾರ್ಯಕ್ಕೆ ಅಡ್ಡಿ ಬರಬಾರದು. ನೀನು ತೆಪ್ಪ ನಿರು. ಹುಡುಗನನ್ನೇನು ಕೇಳೋದು?" ಎಂದು ಹೆಂಡತಿಗೆ ಮುತ್ತಣ್ಣ ಹೇಳಿ ಒಪ್ಪಿಸಿದ. ಮನೆಯಲ್ಲಿ ಮದುವೆಗೆ ಬೇಕಾದ ಸಿದ್ಧತೆಗಳು ಭರ ದಿಂದ ಸಾಗುತ್ತಿದ್ದವು

ಹೊನ್ನಯ್ಯ ನವಲೂರಿಗೆ ಬಂದಿದ್ದ ಸಮಯದಲ್ಲಿ ಮನೆಯ ಆಳು ಗಳೂ, ಹೆಂಡತಿ ಮತ್ತು ತಾಯಿಯೂ ಅಪಶಕುನದ ಚಿಂತೆಯಲ್ಲಿ ಮಗ್ನ ರಾಗಿದ್ದುದರಿಂದ ಮನೆಯ ಕೆಲಸಗಳನ್ನು ಸರಿಯಾಗಿ ನೋಡಿಕೊಳ್ಳುತ್ತಿರ ಲಿಲ್ಲ ದನಗಳನ್ನು ಮೇಯಿಸುವುದಕ್ಕೆ ಆಳುಗಳು ಎಂದಿನಂತೆ ಆ ದಿನ ಕಾಡಿಗೆ ಹೋದರು. ಅಲ್ಲಿ ದನ ಮೇಯಿಸಲು ಬಂದಿದ್ದ ಊರಿನ ಇತ ರರ ಜೊತೆಯಲ್ಲಿ ಅವರು ತಮ್ಮ ಯಜಮಾನನ ಮಗಳ ಮದುವೆಯ ವಿಷಯದಲ್ಲಿ ತಮಗೆ ತಿಳಿದಂತೆ ಮಾತಾಡುತ್ತ ಕುಳಿತರು ದನಗಳೆಲ್ಲವೂ ಸ್ವೇಚ್ಛೆಯಾಗಿ ಹುಲ್ಲು ಹುಲುಸಾಗಿ ಬೆಳೆದಿದ್ದ ಅರಣ್ಯದ ಮಧ್ಯಕ್ಕೆ ಮೇಯುತ್ತಾ ಹೊರಟುಹೋದವು ಮಾತಿನಲ್ಲಿ ತೊಡಗಿದ್ದುದರಿಂದ ಇದೊಂದನ್ನೂ ಇವರಾರೂ ಗಮನಿಸಲಿಲ್ಲ. ಹೆಬ್ಬುಲಿಯೊಂದು ದಟ್ಟ ವಾಗಿ ಬೆಳೆದಿದ್ದ ಹೆಮ್ಮರಗಳ ಮರೆಯಲ್ಲಿ ಹಸಿವಿನಿಂದ ಆಹಾರಕ್ಕಾಗಿ ಹೊಂಚುಹಾಕುತ್ತಾ ಅಡಗಿಕೊಂಡಿತ್ತು. ದನಗಳು ಹುಲ್ಲನ್ನು ಮೇ ಯುತ್ತಾ ವೈಮರೆತ ಸಮಯದಲ್ಲಿ ಅದು ಒಂದು ಕೊಬ್ಬಿದ ಹಸುವಿನ ಮೇಲೆ ಚಂಗನೆ ಹಾರಿ ಹಿಡಿಯಿತು. ಬೇರೆ ದನಕರುಗಳು ಬೆದರಿ ಬೆಟ್ಟ

ಗುಡ್ಡಗಳ ಸಲೆ ಏಳುವಂತೆ ಗಟ್ಟಿಯಾಗಿ ಅರಚಿಕೊಳ್ಳುತ್ತಾ ದಿಕ್ಕು ದಿಕ್ಕಿಗೆ ನಾಗಾಲೋಟದಿಂದ ಓಡಿಹೋದವು ಇದನ್ನು ಕಂಡು ದನ ಕಾಯುವು ದಕ್ಕೆ ಬಂದಿದ್ದವರೆಲ್ಲಾ ಗಾಬರಿಗೊಂಡು ತಮ್ಮ ದನವನ್ನೇನಾದರೂ ಹುಲಿ ಹಿಡಿಯಿತೆ ಎಂದು ಎದೆಬಡಿದುಕೊಳ್ಳುತ್ತಿರಲು, ಕಾಡಿನಲ್ಲಿ ಹುಡು ಕುತ್ತಾ ಮೂಲೆಮೂಲೆಗೂ ಹೊರಟರು ಹುಲಿಯು ಬೀಳನ್ನು ತನ್ನ ಗುಹೆಗೆ ಎಳೆದುಕೊಂಡು ಹೋಗಿತ್ತು. ಎಲ್ಲರೂ ಹಿಂತಿರುಗಿ ಬಂದು ತಮ್ಮ ತಮ್ಮ ದನಕರುಗಳನ್ನು ಕಾತುರತೆಯಿಂದ ಹುಡುಕಿದರು ಹೊನ್ನ ಯ್ಯನ ಹೋರಿಕರುವಿನ ಹಸು ಮಾತ್ರ ಇರಲಿಲ್ಲ ಹುಲಿ ಹಿಡಿದಿರುವುದು ಅದೇ ಹಸುವೆಂದೇ ಖಂಡಿತ ಮಾಡಿಕೊಂಡರು ಹೊನ್ನಯ್ಯನ ಮನೆ ಆಳುಗಳು ಹೆದರಿ, ನ್ಯೆಬೆವೆತು, ಊರಿಗೆ ದನಗಳನ್ನು ಓಡಿಸಿಕೊಂಡು ಬಂದು ನಡೆದ ಸಂಗತಿಯನ್ನು ಮನೆಯಲ್ಲಿ ತಿಳಿಸಿದರು ಇದನ್ನು ಕೇಳಿದ ಕ್ಷಣವೇ ತಿಮ್ಮಕ್ಕನಿಗೆ ಜೀವ ಹಾರಿಹೋದಂತಾಯಿತು ಶರೀರವು ಬೆವರಿ ಬಂಡಾಯಿತು

ಹೊನ್ನಯ್ಯ ಚಿಂತೆಯಿಂದ ಕೂಡಿದವನಂತೆ ನಟಿಸುತ್ತಾ ನವಲೂರಿ ನಿಂದ ಮನೆಗೆ ಬಂದ. ಮನೆಯು ಶೂನ್ಯವಾಗಿದ್ದಂತ ಕಂಡಿತು ಚಿನ್ನ ದಂತಹ ಹಸುವನ್ನು ಹುಲಿ ತಿಂದುದಕ್ಕೆ ಮಕ್ಕಳು ಮೊದಲುಗೊಂಡು ಎಲ್ಲರೂ ವ್ಯಸನ ಪಡುತ್ತಾ ಮೂಕರಂತೆ ಕುಳಿತಿದ್ದರು ಆತ ಈ ವಿಚಿತ್ರವನ್ನು ನೋಡಿದ. ಏನೋ ತೊಂದರೆ ಸಂಭವಿಸಿರಬೇಕೆಂದು ಊಹಿಸಿ ಒಂದು ಮೂಲೆಯಲ್ಲಿ ಕುಳಿತು ಕಣ್ಣೀರು ಸುರಿಸುತ್ತಿದ್ದ ಹೆಂಡತಿ ಯನ್ನು "ಏನು ಸಮಾಚಾರ ?" ಎಂದ. ಹುಲಿಯು ಬಾಯಿಗೆ ಹೋರಿ ಗರುವಿನ ಹಸು ತುತ್ತಾದುದನ್ನು ಆಕೆ ಹೇಳಿ ಬಿಕ್ಕಿ ಬಿಕ್ಕಿ ಅಳತೊಡಗಿ ದಳು. ಇದನ್ನು ಕೇಳಿದೊಡನೆಯೇ ಆತನಿಗೆ ಕೋಪ ಉಕ್ಕಿಬಂದು ಕೋಪದ ಕಿಡಿಯನ್ನು ತಾಯಿಯ ಮೇಲೂ ಹೆಂಡತಿಯಮೇಲೂ ಕಾರ ತೊಡಗಿದ. ಬಾಯಿಗೆ ಬಂದಂತೆಲ್ಲಾ ಬೈದು "ಹೆಣ್ಣನ್ನು ಸಿದ್ದಮ್ಮನ ಮನೆಗೆ ಕೊಡಲು ಒಪ್ಪಿದುದೇ ಈ ನಷ್ಟಕ್ಕೆಲ್ಲಾ ಕಾರಣ. ಇನ್ನು ಮೇಲೆ ಯಾರಾದರೂ ಆ ಸಂಬಂಧದ ಸುದ್ದಿ ಎತ್ತಿದರೆ ಚರ್ಮ ಸುಲಿಯುತ್ತೇನೆ" ಎಂದು ಆರ್ಭಟಿಸಿದ ಆಳುಗಳು ಇವನ ಆರ್ಭಟವನ್ನು ನೋಡಿ ಜೀವ

ವನ್ನು ಕೈಲಿ ಹಿಡಿದುಕೊಂಡು ಹಿತ್ತಿಲಲ್ಲಿ ಅಡಗಿಕೊಂಡರು ಹೊನ್ನಯ್ಯ ಆಳುಗಳ ಜುಟ್ಟನ್ನು ಹಿಡಿದು ಕತ್ತು ಬಗ್ಗಿಸಿಕೊಂಡು ಕೋಪ ಹಿಂಗುವ ವರಗೆ ಗುದ್ದಿ "ನನ್ನ ಮನೆಯಲ್ಲಿ ಚೆನ್ನಾಗಿ ತಿಂದೂ ತಿಂದೂ, ಹಸು ವನ್ನು ತೀರಿಸಿದಿರಾ? ಆದರ ಕರೀದಿ ಕೊಟ್ಟುಬಿಟ್ಟು ಮನೆಯಿಂದ ತೊಲಗಿ ಪುನಃ ಹೊಸಲು ಮೆಟ್ಟಿದರ ಸಾಯಿಸಿ ಬಿಡುತ್ತೇನ" ಎಂದು ಜುಟ್ಟು ಹಿಡಿದು ಬೀದಿಗೆ ತಳ್ಳಿಬಿಟ್ಟ ಹಸು ಹೋದುದನ್ನು ನೆನೆದಂತೆಲ್ಲಾ ಕೋಪಾಗ್ನಿಯು ಅವನ ನರನಾಡಿಗಳನ್ನೆಲ್ಲಾ ವ್ಯಾಪಿಸಿತು "ಎಲ್ಲರನ್ನೂ ಮನೆಯಿಂದ ಓಡಿಸುತ್ತೇನೆ" ಎಂದು ಹೇಳುತ್ತಾ ಜಗುಲಿಗೆ ಹೋಗಿ ಕುಳಿತುಕೊಂಡ. ಊರಿನ ಕೆಲವು ಮುಖ್ಯಸ್ಥರನ್ನೆಲ್ಲಾ ಬರಮಾಡಿಕೊಂಡ ಎಲ್ಲರೂ ಬಂದು ಮೌನವಾಗಿ ಕುಳಿತರು ಇವನ ಕೋಪಕ್ಕ ಕಾರಣ ವೇನೆಂದು ಎಲ್ಲರಿಗೂ ತಿಳಿದಿತ್ತು. ಹೊನ್ನಯ್ಯ ತನ್ನ ಕಥೆಯನ್ನು ಪ್ರಾರಂಭಮಾಡಿ ಹೆಣ್ಣು ಕೇಳಿದಂದಿನಿಂದ ತನಗಾದ ನಷ್ಟವನ್ನೂ ಅಪ ಶಕುನಗಳನ್ನೂ ವಿಶದವಾಗಿ ಸಣ್ಣದನ್ನೂ ದೊಡ್ಡದಾಗಿ ಮಾಡಿ ತಿಳಿಸಿದ "ನೋಡಿ, ಈ ದಿನ ಸಿದ್ದಮ್ಮ ವೀಳ್ಯದ ಶಾಸ್ತ್ರಕ್ಕ ಬರುತ್ತಾಳೆ ನೀವ ಲ್ಲರೂ ನನಗೆ ಉಂಟಾಗಿರುವ ಅಪಾರ ನಷ್ಟಗಳನ್ನೂ ಕೆಟ್ಟ ಅಪಶಕುನ ಗಳನ್ನೂ ಖಂಡಿತವಾಗಿ ತಿಳಿಸಿ, ಹೆಣ್ಣುಕೊಡಲು ಸಾಧ್ಯವಿಲ್ಲವೆಂದು ನನ್ನ ಪರ ಹೇಳಬೇಕು ಇದಕ್ಕೆ ನಿಮಗೆ ನಾನು ಬೇಕಾದ ಸಹಾಯ ಮಾಡು ತ್ತೇನೆ" ಎಂದ. ಎಲ್ಲರೂ ಇವನ ಮಾತಿಗೆ ಸಮ್ಮತಿಸಿದವರಂತೆ ಒಬ್ಬರ ಮುಖವನ್ನೊಬ್ಬರು ನೋಡುತ್ತಾ ಬಾಯಿ ಬಿಡದೆ ಕುಳಿತರು ಈ ವಿಷಯವನ್ನು ವೈಯೆಲ್ಲಾ ಕಿವಿಮಾಡಿಕೊಂಡು ಕೇಳುತ್ತಿದ್ದ ತಿಮ್ಮಕ್ಕ ನಿಗೂ ಹೊನ್ನಮ್ಮನಿಗೂ ಉಸಿರೇ ಹಾರಿಹೋದಂತಾಯಿತು. ಹೊನ್ನಯ್ಯ ಮನೆಗೆ ಬಂದು ತಾಯಿ ಮತ್ತು ಹೆಂಡತಿಯಕಡೆ ದುರದುರನೆ ನೋಡುತ್ತಾ "ಈ ದಿವಸ ವೀಳ್ಯದ ಶಾಸ್ತ್ರಕ್ಕೆ ಬರುವವರಿಗೆ ಅಡಿಗೆ ಮಾಡಕೂಡದು ಅಪಶಕುನವಾದ್ದರಿಂದ ಹೆಣ್ಣುಕೊಡಲು ಸಾಧ್ಯವಿಲ್ಲವೆಂದು ಸಾರಿ ಸಾರಿ ಹೇಳಿಬಿಡಿ ಯಾರಾದರೂ ಅವರ ಪರ ವಹಿಸಿ ಮಾತನಾಡಿದ್ದು ನನ್ನ ಕಿವಿಗೆ ಬಿದ್ದದ್ದೇ ಆದರೆ ಅವರ ಗತಿ ಮುಗಿಸಿಬಿಡುತ್ತೇನೆ, ಎಚ್ಚರಿಕೆ" ಎಂದು ಹೇಳಿ ತೋಟಕ್ಕೆ ಹೊರಟುಹೋದ.

ಇತ್ತ ಕಡೆ ತಿಮ್ಮಕ್ಕನು ತನ್ನ ಮುದ್ದು ಮಗಳನ್ನು ತಬ್ಬಿಕೊಂಡು ಹಿತ್ತಲಿನಲ್ಲಿ ಗೋಳಾಡುತ್ತಾ " ಅಯ್ಯೋ ದೇವರೆ, ಉತ್ತಮ ಸಂಸಾರಕ್ಕೆ ಕಟ್ಟಬೇಕೆಂದಿದ್ದ ನನ್ನ ಆಸೆಯನ್ನು ಮಣ್ಣುಪಾಲು ಮಾಡಿದೆಯಾ? ಏನೂ ಅರಿಯದ ನನ್ನ ಮಗಳು ನಿನಗೆ ಮಾಡಿದ ಅಪರಾಧವಾದರೂ ಏನು? ನನ್ನ ಗಂಡನ ಮನಸ್ಸನ್ನು ಬದಲಾಯಿಸಲಾರೆಯ! ಬದಲಾಯಿಸಲು ನಿನ್ನಿಂದ ಸಾಧ್ಯವಿಲ್ಲ ಆತನು ನಿನ್ನನ್ನು ಮೀರಿಸಿದವನಾಗಿದ್ದಾನೆ. ಹೆತ್ತ ಹೊಟ್ಟೆ ಉರಿಯುತ್ತಾ ಇದೆ ನನಗೆ ದಿಕ್ಕಿಲ್ಲದಂತಾಯ್ತು. ಈ ಲಗ್ನವನ್ನು ನೋಡಿ ಆನಂದ ಪಡಬೇಕೆಂದಿದ್ದ ನನ್ನ ಕಣ್ಣಿನಲ್ಲಿ ಸುಣ್ಣವನ್ನು ಹಾಕಿದೆ ನಿರ್ಭಾಗ್ಯಳಾದ ನನಗೆ ಪ್ರಪಂಚದಲ್ಲಿ ಇನ್ನಾವ ಆಸೆ ಇದೆ? ಇನ್ನು ಯಾವ ಸುಖಕ್ಕಾಗಿ ನನ್ನ ಈ ಹಾಳುಬಾಳ ಸಾಗಿಸಬೇಕು? ಸಾಕು ಇನ್ನು ಸಾಕು ಈಗ ನನಗಿರುವುದು ಪ್ರಾಣ ತೊರೆದುಕೊಳ್ಳುವುದೊಂದೇ ದಾರಿ ಆದರೆ ಈ ಸಣ್ಣ ಮಕ್ಕಳ ಗತಿ ಏನು? ಈ ಮಕ್ಕಳನ್ನು ಯಾರ ಮಡಲಿಗೆ ಹಾಕಿ ಹೋಗಲಿ?" ಎಂದು ದುಃಖಿಸುತ್ತಿದ್ದಳು. ತಾಯಿಯ ಕಣ್ಣೀರನ್ನು ಕಂಡ ಲಿಂಗಿ ಬಿಕ್ಕಿ ಬಿಕ್ಕಿ ಅಳುತ್ತಾ ಕಣ್ಣೀರನ್ನು ಕೈಗಳಿಂದ ಒರಸಿಕೊಳ್ಳುತ್ತಾ " ಅವ್ವ, ನೀನು ಸತ್ತು ಹೋದರೆ ನಮ್ಮ ಗತಿ ಏನು? ಮಾವಯ್ಯನನ್ನು ಕರಸಿ ಈ ಸಮಾಚಾರ ಹೇಳು ಅವರು ಹೇಳಿದಂತೆ ಮಾಡು" ಎಂದಳು.

ತಿಮ್ಮಕ್ಕನಿಗೆ ಈ ಮಾತುಗಳು ಸಿಡಿಲು ಹೊಡೆತದಷ್ಟು ಭಯಂಕರವಾಗಿ ಕಂಡವು "ಮಗು, ಇನ್ನು ನಿಮ್ಮ ಮಾವಯ್ಯನಿಗೂ, ನಿನಗೂ ನನಗೂ ಎಲ್ಲಿಯ ಸಂಬಂಧ? ಇದು ಎಂದಿಗೂ ಆಗದು" ಎಂದು ಮುಖವನ್ನು ಸೆರಗಿನಿಂದ ಮುಚ್ಚಿಕೊಂಡಳು. " ಮಾವಯ್ಯನಿಗೂ ನಮಗೂ ಸಂಬಂಧವಿಲ್ಲವೆಂದರೇನವ್ವ? ಇದಕ್ಕೇತಕ್ಕೆ ಪ್ರಾಣ ಕಳೆದುಕೊಳ್ಳುವುದು? ಬಸವಣ್ಣನವರಿಗೆ ಹೇಳಿ ಮಾವಯ್ಯನನ್ನು ಕರೆಸು. ಅವನ ಮಾತು ಕೇಳು" ಎಂದು ತಾಯಿಯನ್ನು ಸಮಾಧಾನಪಡಿಸಲು ಪ್ರಾರಂಭಿಸಿದಳು ಲಿಂಗಿ ತಿಮ್ಮಕ್ಕ ಮನಸ್ಸಿನಲ್ಲೇ ' ಅಯ್ಯೋ ಪಾಪ, ಈ ಹುಡುಗಿಗೆ ಗಂಡ ಹೆಂಡಿರ ಜೀವನವೇ ಗೊತ್ತಿಲ್ಲದ್ದರಿಂದ ಹೀಗೆ ಹೇಳುತ್ತಾಳೆ, ಇನ್ನೂ ಸ್ವಲ್ಪ ವಯಸ್ಸಾಗಿದ್ದರೆ ನನಗಿಂತಲೂ ಹತ್ತುಪಾಲು

ಹೆಚ್ಚಾಗಿ ದುಃಖಪಡುತ್ತಿದ್ದಳು ' ಎಂದುಕೊಂಡು " ನೋಡುವ ಬಾ " ಎಂದು ಮಗಳನ್ನು ಮನೆಗೆ ಕರೆತಂದಳು.

ಅದೇ ದಿನ ಸಿದ್ದಮ್ಮ ಮತ್ತು ಆಕೆಯ ಊರಿನ ಮುಖಂಡರೂ ವೀಳ್ಯದ ಶಾಸ್ತ್ರಕ್ಕೆ ಬರುತ್ತಿದ್ದರು. ಸಿದ್ದಮ್ಮನ ಮುಖ ನೋಡಿದರೆ ತಂಗಿ ಎಂಬ ಸಂಬಂಧದ ಪ್ರೇಮಕ್ಕಾದರೂ ತನ್ನ ಗಂಡನ ಕೋಪ ಹಿಂಗಿ ಯಾವುದಾದರೊಂದು ರೀತಿಗೆ ಬರಬಹುದೆಂದು ತಿಳಿದು, ತಿಮ್ಮಕ್ಕ ಗುಟ್ಟಾಗಿ ಹದಿನೈದು ಮಂದಿಗೆ ಅಡಿಗೆ ಮಾಡಿದಳು. ಆಕೆ ಮಾಡುತ್ತಿದ್ದ ಯಾವುದೊಂದು ಕೆಲಸಕ್ಕೂ ಹೊನ್ನಮ್ಮ ಉತ್ತೇಜನ ಕೊಡುತ್ತಿದ್ದಳೇ ವಿನಾ, ಮಗನನ್ನು ಹಡೆದ ತಾಯಿಯ ಅಧಿಕಾರವಾಣಿಯಿಂದ, ಮಗನು ನ್ಯಾಯರೀತಿಯಿಂದ ವರ್ತಿಸುತ್ತಿಲ್ಲವೆಂದೂ, ಈ ಲಗ್ನವನ್ನು ಮಾಡಿಯೇ ತೀರಬೇಕೆಂದೂ ಹೇಳುವಷ್ಟು ಧೈರ್ಯ ಆಕೆಗೆ ಇರಲಿಲ್ಲ ಆಕೆ ಹಾಗೆ ಹೇಳಿದ್ದರೂ ಹೊನ್ನಯ್ಯ ಕೇಳುವನೆ ? ಅದನ್ನು ತಿಳಿದೇ ಹೊನ್ನಮ್ಮ ಮೂಗಿಯಾದಳು. ಮನಸ್ಸಿನಲ್ಲಿ ಚಿಂತೆಗಳು ಅಲೆ ಅಲೆಯಾಗಿ ಸುಳಿಯ ತೊಡಗಿದವು.

ಈ ಕಡೆ ಸಿದ್ದಮ್ಮ ತನ್ನ ಊರಿನ ಯಜಮಾನರನ್ನು ಕರೆದು ಕೊಂಡು ಶಾಸ್ತ್ರಕ್ಕೆ ಬೇಕಾದ ಸಾಮಾನುಗಳನ್ನೂ, ವಧುವಿಗೆ ಬೇಕಾದ ಹೊಸ ಬಟ್ಟೆ ಒಡವೆಗಳನ್ನೂ ತೆಗೆದುಕೊಂಡು ರಾಮನಗರಕ್ಕೆ ಬಹಳ ಸಡಗರದಿಂದ ಹೊರಟಳು. ಆಕೆಯ ಮನಸ್ಸಿಗುಂಟಾದ ಸಂತೋಷ ವನ್ನು ಹೇಳ ತೀರದು ಕಾಡುಸೀಮೆಗೆ ಎಂದೂ ಬರದಿದ್ದ ಹೆಂಗಸರೂ, ಗಂಡಸರೂ ಪ್ರಕೃತಿಯ ದೃಶ್ಯವನ್ನು ನೋಡಿ ಆಶ್ಚರ್ಯದಿಂದ ಸಂತೋ ಷಪಡುತ್ತ ಇದ್ದರು ದಾರಿಯ ಉದ್ದಕ್ಕೂ ಹುಲುಸಾಗಿ ಬೆಳೆದು ಹಸುರು ಕಾಂತಿಯನ್ನು ಚಿಮ್ಮುತ್ತಿದ್ದ ಹೊಂಗೆಯ ಮರಗಳ ಕೆಳಗೆ ಅವರೆಲ್ಲಾ ಕುಳಿತುಕೊಂಡು ದಣಿವಾರಿಸಿಕೊಳ್ಳುತ್ತಿದ್ದರು. ಅವರಲ್ಲಿ ಒಬ್ಬಳು " ಮದುವೆ ಹೆಣ್ಣು ಲಕ್ಷಣವಾಗಿದೆಯೇ ಸಿದ್ದಮ್ಮ ? " ಎಂದಳು

" ನೋಡುವಿರಿ ಬನ್ನಿ ! ಚಂದ್ರನ ಚಲುವೆ ಗೊಂಬೆಯಂತೆ ತೆಳ್ಳಗವಳೆ. ಮೂಗು ಕಣ್ಣುಗಳು ಹೇಳಿ ತಿದ್ದಿಸಿದಂತಿವೆ. ಹುಬ್ಬು ಗಳೊಂದು ಚಂದ, ಕಾಮನ ಬಿಲ್ಲನಂತಿವೆ. ಅಕ್ಕರಂತೂ ಇನ್ನೇನು

ಬಾಯಿಂದ ಮುತ್ತುಗಳು ಸುರಿಯುತ್ತವೆ ಎನ್ನುವಂತೆ ಕಾಣುತ್ತದೆ. ಚಿಕ್ಕ ಬಾಯಿಂದ ಬರುವ ಮಾತುಗಳ ಇಂಪನ್ನು ಕೇಳೋಕೆ ಒಂದು ಸೊಗಸು. ಜನರನ್ನೂ, ನಂಟರನ್ನೂ ಕಂಡರೆ ಅಷ್ಟೊಂದು ಅಕ್ಕರೆ ನನ್ನನ್ನು ಕಂಡರೆ ಪಂಚಪ್ರಾಣ. ನಮ್ಮ ರಂಗಯ್ಯನನ್ನ ಕಂಡರಂತೂ ಹೇಳ ತೀರದು ಯಾವಾಗಲೂ ನಗುಮುಖದಿಂದಿರುತ್ತಾಳೆ ನಮ್ಮ ಕಡೆ ಇಂಥ ಲಕ್ಷಣವಾದ ಹುಡುಗಿ ಸಿಕ್ಕುವುದು ಅಪರೂಪ ಒಂದು ವೇಳೆ ಸಿಕ್ಕಿದರು ಇಷ್ಟು ಗುಣವಂತೇನ ಎಲ್ಲಿ ಹುಡುಕೋದು ?" ಎಂದಳು. ಸಿದ್ದಮ್ಮನು ಹೇಳಿದ್ದನ್ನು ಎಲ್ಲರೂ ಬಿಟ್ಟಬಾಯಿಂದ ಎವೆಯಿಕ್ಕದೆ ಕೇಳುತ್ತಾ ಲಿಂಗಿಯ ರೂಪನ್ನು ತಮ್ಮ ತಮ್ಮ ಮನೋಭಾವನೆಗೆ ಹೊಳೆದಂತೆಲ್ಲಾ ಚಿತ್ರಿಸಿಕೊಳ್ಳುತ್ತಿದ್ದರು

"ಹಾಗಾದ್ರೆ ರಂಗಯ್ಯ ಭಾಗ್ಯವಂತ. ಓದಿರುವವನಿಗೆ ಒಳ್ಳೆ ಹುಡುಗಿ ಸಿಕ್ಕಿತು ನೀನು ಪುಣ್ಯವಂತೆ ಕಣಮ್ಮ, ಇಂಥ ಸೊಸೆ ಪಡೆದೆಯಲ್ಲಾ!" ಎಂದು ನಸುನಗುತ್ತ ಹೇಳಿದರು

"ಹೆಣ್ಣು, ಹೊನ್ನು, ಮಣ್ಣು ಲಭಿಸಬೇಕಾದರೆ ಋಣವಿರಬೇಕಮ್ಮ" ಎಂದ ಅವರಲ್ಲಿ ಒಬ್ಬ ಯಜಮಾನ.

"ಏನೋ ಅಪ್ಪ, ಋಣವಿರುವುದರಿಂದಲೇ ಹುಡುಗಿ ದೊರೆತಿದ್ದು" ಬಿಸಿಲು ತಂಪಾದ್ದರಿಂದ ಅಲ್ಲಿಂದ ಅವರೆಲ್ಲಾ ಎದ್ದು ಮಾತನಾಡುತ್ತಾ ರಾಮನಗರದ ಎಲ್ಲೆಕಟ್ಟೆಗೆ ಬಂದರು ಸಿದ್ದಮ್ಮ ತೌರೂರನ್ನೂ, ತೌರು ಮನೆಯನ್ನೂ ಬೆರಳಿನಿಂದ 'ಅದೇ ಮನೆ' ಎಂದು ತೋರಿಸಿದಳು, ಅವಳ ದನಿಯಲ್ಲಿ ಹರ್ಷ ತುಂಬಿತ್ತು; ಮನೆಯನ್ನು ಎಷ್ಟು ಹೊತ್ತಿಗೆ ಸೇರುವೆವೆಂಬ ಆತುರ ತೋರಿ ಬರುತ್ತಿತ್ತು. ನಡೆದು ಸ್ವಲ್ಪ ಆಯಾಸವಾಗಿದ್ದವರು ಊರು ಸಮೀಪಿಸಿತೆಂದು ಸಂತೋಷಪಟ್ಟರು. ಮತ್ತೆ ಕೆಲವರು ಹೆಣ್ಣು ನೋಡಬೇಕೆಂದು ಕುತೂಹಲಪಡುತ್ತಿದ್ದರು ಸಿದ್ದಮ್ಮನು "ಅಣ್ಣ, ತಾಯಿ ಮತ್ತು ಅತ್ತಿಗೆ ನಮಗಾಗಿ ಕಾದಿದ್ದಾರೆ, ಸರಸರನೆ ಹೆಜ್ಜೆ ಹಾಕಿ" ಎಂದು ತನ್ನ ಊರಿನ ಜನರನ್ನು ಹುರಿದುಂಬಿಸುತ್ತಿದ್ದಾಳೆ ಅವರು ಆಯಾಸಪಡುವರೆಂದು ಅವರ ಮನಸ್ಸನ್ನು ಯಾವಯಾವ ವಿಚಾರಗಳಿಂದಲೊ ಬೇರೆ ಕಡೆಗೆ ತಿರುಗಿಸುತ್ತಿದ್ದಾಳೆ. ಅಷ್ಟರಲ್ಲಿ ದನಕಾ

ಯುವವರು ಸಂಜೆಯಾದ್ದರಿಂದ ದನಗಳನ್ನು ಅಟ್ಟಿಕೊಂಡು ಊರಿಗೆಬರತ್ತಿ ವರು ಸಿದ್ದಮ್ಮನನ್ನು ಕಂಡು ಹತ್ತಿರ ಬಂದರು.

“ಏತಕಮ್ಮ ಇಷ್ಟು ಕಷ್ಟಬಿದ್ದೆ ? ನಿಮ್ಮ ಕಡೆ ಎಲ್ಲೂ ಹೆಣ್ಣು ಸಿಕ್ಕುತ್ತಿರಲಿಲ್ಲವೆ ? ನಿಮ್ಮಣ್ಣ ಎಂಥವನೆನ್ನುವುದು ನಿನಗೆ ಗೊತ್ತಿರಲಿಲ್ಲವೆ? ಅವನ ಮಾತನ್ನು ನಮ್ಮ ಸೀಮೆಯಲ್ಲಿ ಯಾರುತಾನೆ ನಂಬುತ್ತಾರೆ? ಕಂಡೂ ಕಮರಿಗೆ ಹಾರಿದೆಯಲ್ಲಮ್ಮ!” ಎಂದರು ಸಿದ್ದಮ್ಮನಿಗೆ ಹಾವು ತುಳಿದಂತಾಯಿತು ಅವರ ಮಾತನ್ನು ಕೇಳಿ. “ಏಕೆ, ಏನಾಯಿತು ?” ಎಂದು ಒಂದೇ ಉಸಿರಿನಲ್ಲಿ ಪ್ರಶ್ನಿಸಿದಳು.

“ಅಯ್ಯೋ ಏನು ಹೇಳಲಮ್ಮ, ಅವರ ಮನೆ ಹಗರಣವ? ತುಪ್ಪ ತುಂಬಿದ್ದ ಗಡಿಗೆ ಅಟ್ಟದ ಮೇಲಿಂದ ಇದ್ದಕ್ಕಿದ್ದಹಾಗೆ ಬಿದ್ದು ಹೋಯಿತಂತೆ! ಅದೇ ಒಂದು ನೆವ ತೆಗೆದು ಅಪಶಕುನ, ಅಪಶಕುನ ಅಂತ ಪ್ರಾರಂಭಮಾಡಿದ. ಸರಿ, ನಾವು ಕಂಡಹಾಗೆ ನಿನ್ನೆ ಹೋರಿಗರು ವಿನ ಹಸುವನ್ನು ಹುಲಿ ತಿಂದುಬಿಟ್ಟಿತು. ಇದೂ ಒಳ್ಳೇ ಸಮಯಕ್ಕೆ ಹೀಗಾಯಿತು. ಮೊದಲೇ ಹಾಗೆ, ಇನ್ನು ಮುನಿಸಿಕೊಂಡರೆ ಹೇಗೆ ಅಂತ! ಊರಲ್ಲೆಲ್ಲಾ ಕೂಗಿದ ನಿಮ್ಮಣ್ಣ, ಅಪಶಕುನ ಅಂತ. ಮನೆಯಲ್ಲಂತೂ ಹೆಂಗಸರಿಗೂ ಮಕ್ಕಳಿಗೂ ಚಿತ್ರಹಿಂಸೆ ಕೊಟ್ಟನಮ್ಮ ತಿಮ್ಮಕ್ಕ ಕಣ್ಣೀ ರಿನಲ್ಲಿ ಕೈ ತೊಳೆಯುತ್ತಾಳೆ ಬೇರೆ ಊರಿಗೆ ಮಗಳನ್ನು ಮದುವೆ ಮಾಡೋಕೆ ಲಗ್ನ ಕಟ್ಟಿಸಿದ್ದಾನಂತೆ. ಅವನ ಕಥೆ ಹೀಗಿರುವಾಗ ನಿಮ್ಮ ಮನೆಗೆ ಹೆಣ್ಣು ಕೊಡ್ತಾನೆಯೆ ? ಈ ದಿವಸ ಮನೆಯಲ್ಲಿ ಬೆಂಕಿಯನ್ನೇ ಹಾಕಕೂಡದೆಂದು ಕಟ್ಟುಮಾಡವನೆ. ಸದ್ದುಮಾಡದೆ ನಿಮ್ಮ ಊರಿನ ದಾರಿ ಹಿಡಿಯಮ್ಮ” ಎಂದರು. ಸಿದ್ದಮ್ಮನ ಎದೆಗೆ ಸಿಡಿಲು ಬಡಿ ದಂತಾಯಿತು ಜೊತೆಯಲ್ಲಿ ಬಂದಿದ್ದ ಹೆಂಗಸರು “ಕೊಡದೆ ಏನು ಮಾಡತಾನೆ? ಯಾವುದೋಕೋಪದಿಂದ ಹಾಗಂದಿರಬೇಕು? ನಡೆಯಮ್ಮ ಹೋಗೋಣ” ಎಂದು ಸಿದ್ದಮ್ಮನಿಗೆ ಸಮಾಧಾನ ಹೇಳಿದರು. ಬಂದಿದ್ದ ಯಜಮಾನರು ಈ ವಿಷಯವನ್ನು ಕೇಳಿ ‘ಏನೋ ಮೋಸ ನಡೆದಿದೆ’ ಎಂದುಕೊಂಡು ಸ್ವಲ್ಪ ಹೊತ್ತು ಬಾಯಿ ಬಿಡಲಿಲ್ಲ ಕುಸಿದು ಬಿದ್ದ ಮನಸ್ಸಿಗೆ ಧೈರ್ಯತಂದುಕೊಂಡು ಹೇಳಿದರು.—“ಬೇಕಾದ್ದಾಗಲಿ

ಅವನ ಕುತಂತ್ರ ನಮ್ಮಲ್ಲಿ ನಡೆಯುವುದಿಲ್ಲ ನೋಡಿಯೇ ಬಿಡೋಣ ಅದೇನು ಊರೋ, ಕಾಡೋ? ನ್ಯಾಯ ತಿಳಿದವರು ಯಾರೂ ಇಲ್ಲವೆ ಆ ಊರಲ್ಲಿ? ಇದಕ್ಕೆಲ್ಲಾ ಹೆದರಿದರೆ ಇನ್ನು ಈ ಲೋಕದಲ್ಲಿ ಬಾಳು ವುದೇ ಕಷ್ಟ. ಹುಂ, ಹೊರಡಿ, ದೇವರು ಮಾಡಿಸಿದಂತಾಗಲಿ ಎಂದು ಅವಸರವಾಗಿ ಊರಿಗೆ ಹೊರಟರು. ಸಿದ್ದಮ್ಮ ಅವರ ಹಿಂದೆ ಕಾಲು ಗಳನ್ನು ಎಳೆದುಕೊಂಡು ಅವನಿಗೆ ಇಷ್ಟವಿಲ್ಲದ್ದೂ ನಿಜ, ಇದು ನಡೆದಿರು ವುದೂ ನಿಜ ಎಂದು ಯೋಚಿಸುತ್ತಾ ಹೊರಟಳು. ಎಲ್ಲರೂ ಊರಿಗೆ ಹೋದರು. ಎಲ್ಲರೂ ಜಗುಲಿಯ ಮೇಲೆ ಕುಳಿತುಕೊಂಡರು ಸಿದ್ದಮ್ಮ ನನ್ನು ನೋಡಿದಕೂಡಲೇ ತಿಮ್ಮಕ್ಕನೂ ಲಿಂಗಿಯೂ ಬಂದು ಆಕೆಯ ಮುಂದೆ ಮೌನವಾಗಿ ನಿಂತು ಕಣ್ಣೀರು ಸುರಿಸಿದರು ಹೊನ್ನಮ್ಮ ಬಂದು ತಲೆಯಮೇಲೆ ಕೈಇಟ್ಟುಕೊಂಡು ಸಿದ್ದಮ್ಮನ ಪಕ್ಕದಲ್ಲಿ ಕುಳಿತು ಕೊಂಡಳು. ಅವರು ಕುಳಿತಿದ್ದರೀತಿ, ತಾಳಿದ್ದ ಮೌನವೇ ನಡೆದ ಸಮಾ ಚಾರವನ್ನು ಬಿಚ್ಚಿತೋರಿಸುತ್ತಿತ್ತು. ಸಿದ್ದಮ್ಮನ ಊರಿನವರು ಈ ದೃಶ್ಯ ವನ್ನು ಕಂಡು ವ್ಯಥೆ ಪಡುತ್ತ, ಹೆಣ್ಣಿನ ಲಕ್ಷಣವನ್ನೂ ಮರ್ಯಾದೆಯನ್ನೂ ನೋಡಿ 'ಅಯ್ಯೋ ಪಾಪ' ಎಂದು ಮರುಗಿದರು. ಆ ರಾತ್ರಿ ಪಂಚಾ ಯಿತಿಗೆ ಈ ಊರಿನವರೆಲ್ಲರನ್ನೂ ಸೇರಿಸಬೇಕೆಂದು ಅವರು ತೀರ್ಮಾ ನಿಸಿದರು ನಾಳೆ ಆಗಬೇಕಾದ ಲಗ್ನವನ್ನು ತಡೆಯಲು ಯಾರೂ ಸಮ್ಮತಿಸುವುದಿಲ್ಲವೆಂಬುದು ಇವರ ನಂಬಿಕೆಯಾಗಿತ್ತು. ಇವರ ನಂಬಿಕೆ ಫಲಿಸುವುದೆಂಬ ಭರವಸೆಯನ್ನು ಕೊಡುವರಾರು? ಪರಗ್ರಾಮ ಹೊನ್ನಯ್ಯನ ಕಡೇನೆ ವಹಿಸಿ ಊರಿನ ಜನ ಮಾತನಾಡಬಹುದು. ಒಳ್ಳೆ ಇಕ್ಕಟ್ಟಿನ ಪ್ರಸಂಗಕ್ಕೆ ಸಿಕ್ಕಿದೆವಲ್ಲ ಎಂದುಕೊಂಡರು ಅಪಶಕುನ ವನ್ನೇ ನೆನಪಾಗಿ ಇಟ್ಟುಕೊಂಡು, ತನ್ನ ಗಂಡನು ಮಗಳನ್ನು ಬೇರೆ ವರ ನಿಗೆ ಮದುವೆ ಮಾಡಲು ಏರ್ಪಾಡು ಮಾಡಿದ್ದಾನೆಂದು ತಿಮ್ಮಕ್ಕ ಸಿದ್ದಮ್ಮನಿಗೆ ಕಣ್ಣೀರು ಮಿಡಿಯುತ್ತಾ ಹೇಳಿದಳು

"ಒಳ್ಳೆ ಹಗರಣವಾಯ್ತಲ್ಲ, ಅತ್ತಿಗೆ ನನಗೆ ಕಣ್ಣೇ ಕಾಣೋದಿಲ್ಲ. ನಾವೆಲ್ಲರೂ ಜೋಯಿಸರಲ್ಲಿ ಲಗ್ನ ಕಟ್ಟಿಸಲು ಹೋಗಿದ್ದಾಗಲೇ ಹೆಣ್ಣು ಕೊಡೋದಿಲ್ಲ ಅಂತ ಕಡ್ಡಾಯವಾಗಿ ಹೇಳಿದ್ರೆ ಈ ಗೊಂದಲವೇ ಬರ್ತಿರ

ಲಿಲ್ಲವಲ್ಲ. ಜೋಯಿಸರಾದರೂ ಹೆಣ್ಣಿಗೂ ಗಂಡಿಗೂ ಲಗ್ನ ಸರಿಯಾಗಿ ಲ್ಲವೆಂದು ಹೇಳಿಬಿಟ್ಟಿದ್ದರೆ ಈ ಕಥೆಯೇ ಇರುತ್ತಿರಲಿಲ್ಲ ಆಗಲೇ ಎದೆಗೆ ಕಲ್ಲು ಹಾಕಿಕೊಂಡು ಊರಿಗೆ ಹೊಗುತಾ ಇದ್ದೆ. ನಾಳೆ ಲಗ್ನಕ್ಕೆ ಏರ್ಪಾ ಡಾಗಿದೆ. ನೆಂಟರು ಇಷ್ಟರೆಲ್ಲಾ ಬರ್‍ತ್ತಾರೆ. ನಾವು ಪೆಚ್ಚುಮೋರೆ ಮಾಡಿಕೊಂಡು ತಲೆಮೇಲೆ ಬಟ್ಟೆಹಾಕಿಕೊಂಡು ಊರಿಗೆ ಹೋಗಬೇಕಾ ಗಿದೆ ಮದುವೆಗೆ ಸಿದ್ಧಮಾಡಿರುವ ಸಾಮಾನೆಲ್ಲಾ ಹಾಳಾಗುತ್ತದೆ. ಬೇರೆ ಹೆಣ್ಣುತಾನೆ ಎಲ್ಲಿ ನೋಡುವುದು, ಈ ಅಲ್ಪ ಕಾಲದಲ್ಲಿ? ಅದರಲ್ಲೂ ರಂಗಯ್ಯನ ಮನಸ್ಸು ಅಲ್ಲೋಲ ಕಲ್ಲೋಲವಾಗುವುದಿಲ್ಲವೆ ? ಆತನು ತಾನೆ ಇಷ್ಟಪಡುತ್ತಾನೆಯೆ, ' ಬೇರೆ ಹುಡುಗಿಯನ್ನು ಮದುವೆ ಮಾಡಿಕೊ ಳ್ಳೋಕೆ ? ಏನೊ! ದೇವರೆ ಗತಿ. ಇದಕ್ಕೇನೂ ಉಪಾಯವಿಲ್ಲವೆ ?" ಎಂದಳು ಸಿದ್ದಮ್ಮ

"ನಾನು ಯಾವ ಉಪಾಯಾನೂ ಕಾಣೆ ಈ ಜಗದಲ್ಲಿ ಯಾರು ಹೇಳಿದರೂ ಕೇಳೋದಿಲ್ಲ, ನಿಮ್ಮ ಅಣ್ಣ. ಹಟಮಾರಿಯಾಗಿದ್ದಾರೆ. ಅವರಿಗೆ ಮತ್ತೇನೂ ಇಲ್ಲ ಕಾರಣ ನೀನು ಕಂಡಹಾಗೆ ಒಂದುಕಾಸನ್ನು ಒಂಬತ್ತುಗಂಟುಹಾಕಿ ಇಡುತ್ತಾರೆ ಅದೆಲ್ಲಿ ಖರ್ಚುಮಾಡಬೇಕಾಗುತದೋ ಅಂತ ಯೋಚನೆ ತಗುಲಿ ಹತ್ತಿರದ ಊರಿಗೆ ನಾಳೆ ಮಗಳ ಮದುವೆ ಮಾಡುತ್ತಾರೆ. ಇನ್ನೇನಿದೆ ? ನನ್ನ ಮಗಳ ಬಾಳನ್ನು ಹಾಳುಮಾಡಿದರು ನಾವು ಯಾರೂ ಮದುವೆಗೆ ಹೋಗೋದಿಲ್ಲ ಅವರ ಮಗಳನ್ನು ಅವ ರೊಬ್ಬರೇ ಕರಕೊಂಡುಹೋಗಿ ಲಗ್ನಮಾಡಿಕೊಳ್ಳಲಿ ಹಾಗೂ ಮಾಡದೆ ಬಿಡುತ್ತಾರೆ ಅಂತೀರ! ಅಂತಹ ಪ್ರಚಂಡ ಮನುಷ್ಯರನ್ನು ನಾನೆಲ್ಲೂಕಾಣೆ, ಕೇಳಿಯೂ ಇಲ್ಲ. ಇನ್ನೊಂದೇ ದಾರಿ ಇದೆ, ನೀವು ಮಾಡುವುದಾದರೆ ಆಗಬಹುದು" ಎಂದು ದುಃಖ ತುಂಬಿದ ದನಿಯಲ್ಲಿ ಹೇಳಿದಳು ತಿಮ್ಮಕ್ಕ. ಸಿದ್ದಮ್ಮನು ಕಿವಿ ನೆಟ್ಟಗೆ ಮಾಡಿಕೊಂಡು ಕುತೂಹಲದಿಂದ "ಅದಾವ ದಾರಿ ?" ಎಂದು ಮೆಲ್ಲನೆ ಪಿಸುಗುಟ್ಟುತ್ತಾ ಕೇಳಿದಳು

"ನಮ್ಮ ಲಿಂಗಿಯನ್ನ ಈ ರಾತ್ರಿ ನಿಮ್ಮ ಊರಿನವರ ಜೊತೇಲಿ ಕಳುಹಿಸಿ ಬಿಡುತೇನೆ ನಾಳೆ ಆದಷ್ಟು ಜಾಗ್ರತೆ ಲಗ್ನ ಮಾಡಿಸಿಬಿಡಿ. ಆಮೇಲೆ ಬೇಕಾದ್ದು ಬರಲಿ, ಇಲ್ಲಿದ್ದರೊಂದು, ಹೋದರೊಂದು. ನೀವು

ಮಾತ್ರ ಇಲ್ಲೇ ಇರಿ".

ಸಿದ್ದಮ್ಮನ ಕುತೂಹಲ ಹಾಗೆಯೇ ಮಾಯವಾಯಿತು. ಆಕೆ ವಿಶಾಲದೃಷ್ಟಿಯಿಂದ ಯೋಚಿಸಿ, ತಲೆಯಲ್ಲಾಡಿಸುತ್ತಾ "ಇದು ಹೇಗೆ ಸಾಧ್ಯ? ನಾವು ದುಡುಕಿ ಈ ರೀತಿ ಮಾಡಿದರೆ ಮುಂದೆ ಅನೇಕ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಜನರು ನಮ್ಮನ್ನು ಹುಲ್ಲುಸತ್ತೆಗಿಂತ ಕಡೆಯಾಗಿ ಕಾಣತಾರೆ ಕೊನೆಯದಾಗಿ ನಮ್ಮ ಅಣ್ಣನನ್ನೇ ವೀಳ್ಯದ ಶಾಸ್ತ್ರಕ್ಕೆ ಏರ್ಪಾಡು ಮಾಡು ಎಂದು ಕೇಳುತೇನೆ" ಎಂದಳು

ಹೊನ್ನಯ್ಯ ಪಕ್ಕದಲೂರಿನಲ್ಲಿ ಮಗಳ ಲಗ್ನಕ್ಕೆ ಏರ್ಪಡಿಸಿ ದೇವಸ್ಥಾನದ ಮುಂದೆ ಹಸರು ಚಪ್ಪರ ಹಾಕಿಸಬೇಕೆಂದು ಬೀಗನಿಗೆ ಹೇಳಿ ಸಂಜೆಯಲ್ಲಿ ಮನೆಗೆ ಬಂದ. ಬರುತ್ತಿದ್ದ ಹಾಗೆಯೇ ಜಗುಲಿಯ ಮೇಲೆ ಕುಳಿತಿದ್ದ ಜನರನ್ನು ದೂರದಿಂದಲೇ ತೀಕ್ಷ್ಣದೃಷ್ಟಿಯಿಂದ ನೋಡಿದ ಮುಖವನ್ನು ಗಂಟುಹಾಕಿಕೊಂಡು ಮನೆಯೊಳಕ್ಕೆ ಬಹು ಬಿರುಸಾಗಿ ಹೋದ. ಅಣ್ಣನನ್ನು ಕಂಡ ಒಡನೆ ಸಿದ್ದಮ್ಮನಿಗೆ ಸಿಟ್ಟುಬಂತು ಆದರೂ ದಡಾರನೆ ಎದ್ದು ಹರಿಯುತ್ತಿದ್ದ ಕಣ್ಣೀರನ್ನು ಸೆರಗಿನಿಂದ ಒರಸಿಕೊಳ್ಳುತ್ತಾ "ಅಣ್ಣಾ" ಎಂದಳು ಹೊನ್ನಯ್ಯ ಮೌನವನ್ನು ತಾಳಿ ಒಳ ಹಜಾರದಲ್ಲಿ ಬಹಳ ಚಿಂತಿಸುವವನಂತೆ ಕುಳಿತ ಜಗುಲಿಯ ಮೇಲೆ ಕುಳಿತಿದ್ದವರ ದೃಷ್ಟಿ ಆತನನ್ನು ನುಂಗಿಬಿಡುವಷ್ಟು ತೀವ್ರವಾಗಿ ಬೀಳುತ್ತಿದ್ದುವು ಸಿದ್ದಮ್ಮನು ಬಿಕ್ಕಿಬಿಕ್ಕಿ ಅಳತೊಡಗಿದಳೇ ಹೊರತು ಬಾಯಿ ತೆಗೆಯಲಿಲ್ಲ. ಬಹಳ ಹೊತ್ತಿನಮೇಲೆ ಹೊನ್ನಯ್ಯ ಮುಖ ಗಂಟುಹಾಕಿಕೊಂಡು "ಏನು ಮಾಡಲಮ್ಮ, ಹೆಣ್ಣಿಗೂ ಗಂಡಿಗೂ ಶಾಸ್ತ್ರ ಸರಿಯಾಗಲಿಲ್ಲ ಆ ಜೋಯಿಸರಿಗೂ ನನಗೂ ಬಹಳ ವರ್ಷಗಳಿಂದ ಮನಸ್ತಾಪವಿತ್ತು. ಆತ ಉದ್ದೇಶ್ಯವಾಗಿ ಸುಳ್ಳು ಲಗ್ನ ಕಟ್ಟಿದ್ದಾನೆ ಅವನಿಗಾಗಬೇಕಾದ್ದೇನು? ಯಾರ ಮನೆಯಾದರೂ ಮುಳುಗಿಹೋಗಲಿ, ದುಡ್ಡುಬಂದರೆ ಸಾಕು. ಏನೇನು ಅಪಶಕುನ! ಏನೇನು ಸ್ವಪ್ನ? ನೀನೇ ಕೇಳಮ್ಮ ತುಪ್ಪ ತುಂಬಿ ತುಳುಕುತ್ತಿದ್ದ ಗಡಿಗೆ ಮಾಯದಲ್ಲೇ ಒಡೆದುಹೋಯಿತು. ಚಿನ್ನದಂತ ಹೋರಿಗರುವಿನ ಹಸುವು ಹುಲಿ ಬಾಯಿಗೆ ಹೋಯಿತು. ಬೇಕಾದಷ್ಟು ಹಾಲುಕರೆಯುತ್ತಿದ್ದ ಎಮ್ಮೆಗಳು ಈ ಲಗ್ನಕ್ಕೆ ಕೈಹಾಕಿದಂದಿನಿಂದ

ಒಂದು ಪಾವು ಹಾಲುಕೂಡ ಕೊಡುವುದಿಲ್ಲ ಆ ದಿನದಿಂದ ಮನೆಯಲ್ಲಿ ಜಗಳ, ಮನಸ್ತಾಪ ಸುಂಟರಗಾಳಿ ಸುತ್ತಿದಂತೆ ಸುತ್ತಿಕೊಂಡಿದೆ ಇಂಥ ಅಪಶಕುನಗಳನ್ನು ಕಂಡೂ ಕಂಡೂ ಎಂಥ ಮೂರ್ಖನಾದರೂ ಹೆಣ್ಣು ಕೊಡುತ್ತಾನೆಯೇ? ಚಿನ್ನದ ಕತ್ತಿ ಅಂತ ಮೂಗು ಕೊಯ್ಯಿಸಿಕೊಳ್ಳುವು ದಕ್ಕಾಗುತ್ತದೆಯೆ ? ಈ ಮಾತು ಮರೆತುಬಿಡಮ್ಮ" ಎಂದು ದನಿಯಲ್ಲಿ ಅಸಮ್ಮತಿಯನ್ನು ತೋರುತ್ತಿದ್ದರೂ ನಯವಾಗಿ ಹೇಳಿದ.

ಸಿದ್ದಮ್ಮನಿಗೆ ಅವನ ಮಾತುಮಾತಿಗೂ ಸಿಟ್ಟು ಉಕ್ಕಿ ಉಕ್ಕಿ ಬರುತ್ತಿತ್ತು ಕೊನೆಗೆ ಅವಳ ಹಿಡಿತವಿಲ್ಲದೆಯೇ ಮಾತುಗಳು ಹೊರಬೀಳ ತೊಡಗಿದವು

"ಅಣ್ಣ ನಾಲಿಗೆಗೆ ತಪ್ಪಬಾರದು ತಂಗಿಗೆ ನೀನು ಈ ರೀತಿ ಮೋಸಮಾಡುವುದು ಧರ್ಮವಲ್ಲ. ನಾಳೆ ಲಗ್ನ. ನೀನು ಅದನ್ನು ಮುರಿಯುತ್ತಿದ್ದೀಯೆ ಸಿದ್ಧಮಾಡಿರುವ ಸಾಮಾನೆಲ್ಲಾ ಹಾಳಾಗುತದೆ. ನನ್ನ ದುಃಖವನ್ನ ಅಳತೆ ಮಾಡುವುದಕ್ಕೆ ಸಾಧ್ಯವೇ ಇಲ್ಲ ನಾನೇನು ಅನ್ಯಳೆ ? ನಿನ್ನ ಒಡಹುಟ್ಟಿದವಳಲ್ಲವೆ ? ಸ್ವಲ್ಪ ದೂರಾಲೋಚನೆ ಮಾಡಿ ನೋಡು"

"ಆಲೋಚನೆ ಗೀಲೋಚನೆ ಒಂದೂ ಇಲ್ಲ ಹೆಣ್ಣು ಕೊಡುವುದಿಲ್ಲವೆಂದರೆ ಮುಗಿಯಿತು ಬೇಕಾದರೆ ನಿಮ್ಮ ಅಪ್ಪನ ಹತ್ತಿರ ಗೋಳಾಡಿ ದುಃಖ ತೀರಿಸಿಕೊಂಡು ನಿಮ್ಮ ಊರಿಗೆ ಹೋಗು" ಎಂದು ಹೊನ್ನಯ್ಯ ಕೋಪದಿಂದ ಆರ್ಭಟಿಸಿದ ಈ ಮಾತುಗಳನ್ನು ಕೇಳಿ ಸಿದ್ದಮ್ಮನಿಗೆ ಕೋಪವು ಕ್ಷಣಮಾತ್ರದಲ್ಲಿ ಉಕ್ಕಿಬಂದು ನರನಾಡಿಗಳಲ್ಲಿ ಚಲಿಸಲಾರಂಭಿಸಿತು. ಆಕೆಯ ಕೋಪದ ಪ್ರವಾಹ ಅಣ್ಣನೆಂಬ ಪ್ರೇಮದ ಕಟ್ಟೆಯನ್ನು ಒಡೆಯಿತು. ಕಣ್ಣೀರು ಹನಿಹನಿಯಾಗಿ ಕೆನ್ನೆಯ ಮೇಲೆ ಉರುಳಲಾರಂಭಿಸಿತು

"ಏನೆಂದೆ! ಅಣ್ಣ, ನಾನು ಯಾರೆಂದು ತಿಳಿದಿದ್ದೀಯೆ ? ಈ ಊರಿನ ಬಡಜನರನ್ನು ಬೆದರಿಸಿಕೊಂಡು, ಅವರ ರಕ್ತನ ಹೀರಿ ಐಶ್ವರ್ಯವಂತನಾಗಿದ್ದೀಯೆ. ಸಿರಿಮದದಿಂದ ಸ್ವೇಚ್ಛಾನುಸಾರ ವರ್ತಿಸುತ್ತೀಯೆ. ಇಷ್ಟು ವಯಸ್ಸಾಗಿದೆ ನಿನಗೆ. ಗೋಸುಂಬೆ ಕ್ಷಣಕ್ಷಣಕ್ಕೆ ಬದಲಾಯಿಸಿ

ದಂತೆ ನಾಲಿಗೇನ ಬದಲಾಯಿಸಿಕೊಳ್ಳುತ್ತೀಯೆ. ನಿನ್ನದು ನಾಲಿಗೆಯೋ ಮತ್ತೇನೋ" ಎಂದಳು ಹೊನ್ನಯ್ಯನ ಮುಖ ಪೆಚ್ಚಾಯಿತು. ಉಕ್ಕಿ ಬಂದ ಬೆವರನ್ನು ಆಗಾಗ್ಗೆ ಒರಸಿಕೊಳ್ಳುತ್ತಾ ಒಳಗೊಳಗೆ ಹಲ್ಲು ಕಡಿಯು ತ್ತಿದ್ದನೇ ಹೊರತು ಅಷ್ಟು ಜನರ ಮಧ್ಯದಲ್ಲಿ ಬಾಯಿ ತೆರೆಯಲಾಗಲಿಲ್ಲ. ಹೀಗೆ ಸಿದ್ದಮ್ಮ ದೂಷಿಸುತ್ತಿದ್ದಾಗ ಹೊರಗಡೆ ಜಗುಲಿಯಮೇಲೆ ಕುಳಿ ತಿದ್ದ ಕೆಲವು ಮುಖಂಡರುಗಳಿಗೂ ಕೋಪದ ಕಾವೇರಿತು. ಹುಬ್ಬು ಗಂಟಿಕ್ಕಿಗೊಂಡು ಒಳಗೆ ಬಂದರು. ಕೆಕ್ಕರಿಸಿಕೊಂಡು ಹೊನ್ನಯ್ಯನನ್ನು ನೋಡುತ್ತಾ "ನಮ್ಮ ಸೀಮೆಕಡೆ ಈ ರೀತಿ ನಡೆದಿದ್ದರೆ ನಿನ್ನ ಗತಿ ಏನಾಗು ತ್ತಿತ್ತೋ ? ಈಗಲೂ ನೋಡೋಣ ಇರು" ಎಂದರು ಹೊನ್ನಯ್ಯ ವಿಧಿ ಇಲ್ಲದೆ ತನ್ನ ಕೋಪವನ್ನು ತಾನೇ ನುಂಗಿಕೊಂಡು ತೆಪ್ಪಗಾದ ಮನಸ್ಸಿ ನಲ್ಲೇ 'ಏನುಮಾಡಲಿ. ನನ್ನ ಬೆಂಬಲಕ್ಕೆ ಯಾರೂ ಇಲ್ಲವಲ್ಲ ಪರ ಗ್ರಾಮದವರು ಬಂದು ನೆರೆ ಊರಿನಲ್ಲಿ, ಅದರಲ್ಲೂ ನನ್ನ ಮನೆಯಲ್ಲಿ ಈ ರೀತಿ ತುಚ್ಛೀಕರಿಸಿ ಮಾತನಾಡುವುದನ್ನು ನೋಡಿದರೆ ಒಂದು ಕೈ ನೋಡಿಯೇ ಬಿಡೋಣ ಅನ್ನಿಸುತ್ತದೆ ಆಗಲಿ, ಜಂಬ ಮಾಡಿಕೊಂಡು ಹೋಗಲಿ' ಎಂದು ಗೊಣಗಿದ.

ಸಿದ್ದಮ್ಮ ಊರಿನ ಮುಖ್ಯಸ್ಥರ ಮನೆಗಳಿಗೆಲ್ಲಾ ಹೋಗಿ ವಿಚಾರ ವನ್ನೆಲ್ಲಾ ಚಾಚೂ ತಪ್ಪದೆ ಹೇಳಿದಳು ರಾತ್ರಿ ಪಂಚಾಯಿತಿಗೆ ದೇವ ಸ್ಥಾನದ ಚಾವಡಿಯಲ್ಲಿ ಸೇರಬೇಕೆಂದು ಕೇಳಿಕೊಂಡಳು ಕೆಲವರು ಹೊನ್ನಯ್ಯನ ಗೋಜಿಗೆ ಹೋಗಬಾರದೆಂದು ಹಿಂಜರಿಯುತ್ತಾ ಚಾವಡಿಗೆ ಬಂದರು ಬಸವಯ್ಯ ಸಿದ್ದಮ್ಮನಿಗೆ "ಬೇಕಾದ್ದಾಗಲಿ ಬಿಡಬೇಡಮ್ಮ. ನಿಮ್ಮ ಬೆಂಬಲಕ್ಕೆ ನಾನಿದ್ದೇನೆ" ಎಂದು ಉತ್ತೇಜನ ಕೊಟ್ಟ ಆತ ನನ್ನೂ ಚಿಂತೆಯು ಉರಿ ಆವರಿಸಿದೆ 'ಅಯ್ಯೋ ಏನು ನಡೆದು ಹೋಯಿತು !' ಅಂದುಕೊಳ್ಳುತ್ತಿದ್ದಾನೆ ಹೊನ್ನಯ್ಯನನ್ನೂ ಬರಹೇಳಿ ಕಳುಹಿಸಿದರು ಬಸವಯ್ಯನು ಎಲ್ಲರನ್ನೂ ಕರತಂದ

ತಿಳಿಬಾನಿನಲ್ಲಿ ಚಂದ್ರನು ಹಾಲುಚಲ್ಲಿದಂತೆ ಬೆಳಕನ್ನು ಎರಚುತ್ತಿದ್ದ. ಈ ಬೆಳ್ಳಿಯ ಬಳಕಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯನ್ನೂ ಗುರುತಿಸಬಹುದಾ ಗಿತ್ತು ಆಗಾಗ್ಗೆ ತುಂಡು ಮೋಡವೊಂದು ಚಂದ್ರನನ್ನು ಮುಸುಕಿ

ವ್ಯಕ್ತಿಗಳ ಮುಖದ ಮೇಲೆ ನಸುಗತ್ತಲೆಯನ್ನು ಬೀರುತ್ತಿತ್ತು. ನಸು ನೀಲಿಯ ಅನಂತಾಕಾಶದಲ್ಲಿ ಒಂದೇ ಸಮನೆ ತಾರೆಗಳು ಮಿಣುಗುಟ್ಟುತ್ತಿದ್ದುವು. ಮಾರುತನು ತಣ್ಣಗೆ ಬೀಸುತ್ತಿದ್ದ.

ಹೊನ್ನಯ್ಯನ ಮನಸ್ಸು ಹೋಗಲೇ ಬೇಡವೆ ಎಂದು ತೂಗುಯ್ಯಾಲೆಗೆ ಸಿಕ್ಕಿತು ಕೊನೆಗೆ ತಾನು ಹೋಗದಿದ್ದರೆ ತಪ್ಪಿತಸ್ಥನಾಗುತ್ತೇನೆಂದು ಅರಿತು ಪಂಚಾಯಿತಿಗೆ ಬಂದ ಬೀದಿಯಲ್ಲಿ ಕುಳಿತಿದ್ದವರು ದಾರಿಬಿಟ್ಟರು. ಆತ ಸರಸರನೆ ಚಾವಡಿಯ ಮೇಲಕ್ಕೆ ಹೋಗಿ ಮಧ್ಯದಲ್ಲಿ ಕುಳಿತ. ಸಿದ್ದಮ್ಮ ತನ್ನ ತಾಯಿಯನ್ನೂ ಅತ್ತಿಗೆಯನ್ನೂ ಬಲವಂತದಿಂದ ಪಂಚಾಯಿತಿಗೆ ಕರೆತಂದಳು. ಅವರಿಬ್ಬರೂ ಹೊನ್ನಯ್ಯನಿಗೆ ಕಾಣಿಸಿಕೊಳ್ಳದೆ ಸೆರಗನ್ನು ತಲೆಯಮೇಲೆ ಹಾಕಿಕೊಂಡು ಹೆಂಗಸರ ಗುಂಪಿನಲ್ಲಿ ಕುಳಿತಿದ್ದರು. ಪಂಚಾಯಿತಿಗೆ ಬಂದಿರುವುದನ್ನು ತನ್ನ ಗಂಡ ನೋಡಿದರೆ ತನ್ನನ್ನು ಮನೆಯಿಂದಲೇ ಓಡಿಸುವನೆಂದು ತಿಮ್ಮಕ್ಕ ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತಿದ್ದಳು ಮನಸ್ಸು ನಾನಾಮುಖವಾಗಿ ಗರಿಗೆದರಿ ನಿಂತಿತು. ತಾನು ಇಲ್ಲಿಗೆ ಬರಬಾರದಾಗಿತ್ತು, ಬಂದಾದರೂ ತಾನೆ ಈ ಕಾರ್ಯ ಸಾಧಿಸಲಾದೀತೆ ತನ್ನಿಂದ? ಎಂದು ಚಿಂತಿಸಿದಳು ಬಂದದ್ದಾಯಿತೆಂದು ಮನಸ್ಸನ್ನು ಗಟ್ಟಿಮಾಡಿಕೊಳ್ಳುತ್ತಿದ್ದಳು ಕೆಲವು ಯಜಮಾನರ ಹೆಂಗಸರು ತಮ್ಮ ಗಂಡಂದಿರಿಗೆ ''ಯಾರು ಹೇಗಾದರೂ ಮಾತಾಡಲಿ, ನೀವು ಮಾತ್ರ ತೆಪ್ಪಗೆ ಎಲೆಮರೆಕಾಯಿಯ ಹಾಗೆ ಕುಳಿತಿದ್ದು ಬನ್ನಿ, ಬೀದಿಯಲ್ಲಿ ಹೋಗುವ ಮಾರಿ ಬೀದಿಯಲ್ಲೇ ಹೋಗಲಿ. ಇದೆಲ್ಲಾ ಕಟ್ಟಿಕೊಂಡು ನಾವೇತಕ್ಕೆ ಹೊನ್ನಯ್ಯನನ್ನು ಹಗೆ ಮಾಡಿಕೋಬೇಕು ಎಂದು'' ಉಪದೇಶ ಹೇಳಿ ಕಳುಹಿಸುತ್ತಿದ್ದರು

ಸಿದ್ದಮ್ಮನ ಊರಿನಿಂದ ಬಂದಿದ್ದ ಯಜಮಾನರೂ, ಹೆಂಗಸರೂ ದೇವಸ್ಥಾನದ ಚಾವಡಿಯಲ್ಲಿ ಸೇರಿದರು. ರಾಮನಗರದ ಕೆಲವು ಹೆಂಗಸರ ಗುಂಪೊಂದು ಸೇರಿತು ಒಂದನೆಯವಳು "ಈ ಅನ್ಯಾಯವನ್ನೇ ಮಾಡೋದು ಶುಭಕಾರ್ಯ ಮಾಡುವಾಗ ಈ ರಗಳೆ ತಂದೊಡ್ಡಿದ್ದಾನೆ ಭೂಲೋಕದಲ್ಲುಂಟೇ ಇದು!''

" ಅವನೇನು ಸಾಮಾನ್ಯನೇನಕ್ಕ? ಯಾವುದಕ್ಕೂ ಹಿಂಜರಿಯು

ವುದಿಲ್ಲ ಅವನ ಜನ್ಮದಲ್ಲೇ ನಿಜ ಹೇಳಿಲ್ಲ ನ್ಯಾಯ ಧರ್ಮ ಎನ್ನು ವುದು ಒಂದು ಚೂರೂ ಇಲ್ಲ ಅವನಲ್ಲಿ. ಇವನ ಆಟ ನೋಡಿ ನೋಡಿ ಸಾಕಾಗಿದೆ ಕಾಣಕ್ಕ, ನಮ್ಮೂರಿನವರಿಗೆ'' ಎಂದಳು ಎರಡನೆಯವಳು.

"ಅವನ ಸುದ್ದಿ ಈ ತಂಪುಹೊತ್ತಿನಲ್ಲೇ ಮಾತಾಡೋದು, ಬಿಡಿ ಮಾಡಿದ್ದಣ್ಣೋ ಮಹರಾಯ' ಅಂತ ಅವನಿಗೂ ದೇವರು ತಂದು ಕೊಡುತ್ತಾನೆ ನಾನೇ ಈ ಕಣ್ಣುಗಳಿಂದ ಎಷ್ಟು ಜನ ನೋಡಿಲ್ಲ, ಇಂಥ ಆಟವಾಡಿ ಬಟ್ಟೆಗೆಟ್ಟುಹೋದವರ ಮನುಷ್ಯ ತಾನೇ ಹೆಚ್ಚುಅಂತ ಮೆರೀ ತಾನೆ ಹೆಣ್ಣು ಕೊಡುವುದಕ್ಕಾಗುವುದಿಲ್ಲವೆಂದು ಮೊದಲೇ ಹೇಳಿಬಿಡ ಬೇಕಾಗಿತ್ತು ನೋಡೋಕೆ ಏನೂ ತಿಳಿಯದವನ ಹಾಗೆ ಕುಳಿತವನೆ ಇಂಥವರ ಹತ್ತಿರವೆ ಇರುವುದು ಮೆಂತ್ಯದ ಗಂಟು ಯಾರೂ ಸರಿಯಾ ದವರಿಲ್ಲ, ಇವನನ್ನು ಬಲಿ ಹಾಕುವುದಕ್ಕ'' ಎಂದಳು ಮೂರನೆಯವಳು

"ಬಿಡಕ್ಕ, ದೇವರೇ ಒಂದು ದಿನ ಬರೆ ಹಾಕತಾನೆ ದೇವರಿಗೆ ಕಣ್ಣಿಲ್ಲವೆ ? ಇವನೇನೊ ತಿಳಿದುಕೊಂಡು ಮೆರೆಯುತ್ತಾನೆ ನೋಡೋಣ ತಡಿಯಿರಿ, ಪಂಚಾಯಿತಿಯಲ್ಲಿ ಏನೇನಾಗುತ್ತದೋ" ಎಂದಳು ನಾಲ್ಕ ನೆಯವಳು

"ಏನಕ್ಕ ಆಗುವುದು ? ಎಲ್ಲರ ಬಾಯನ್ನೂ ಮುಚ್ಚಿಸಿಬಿಡುತಾನೆ. ಹಾಗೆಯೇ ನೋಡುತ್ತಾ ಇರಿ ಸಿದ್ದಮ್ಮನೇನೋ ಮಾತಿನಲ್ಲಿ ದಕ್ಕುವು ದಿಲ್ಲ ಆದರೂ ಅವನು ಹಟಮಾಡಿದರೆ ತೀರಿಹೋಯಿತು ತಂದೆಯೇ ಹೆಣ್ಣು ಕೊಡುವುದಕ್ಕೆ ಇಷ್ಟವಿಲ್ಲವೆಂದರೆ ಪಂಚಾಯಿತರು ಏನು ತಾನೆ ಮಾಡೋಕಾಗುತವೆ? ಇವೆಲ್ಲಾ ಹಣೆಬರಹ ಈ ಬಡಿದಾಟ ನಾನೆಲ್ಲೂ ಕಾಣೆನಪ್ಪ ದೇವರೇ ಕಾಪಾಡಬೇಕು" ಎಂದಳು ಐದನೆಯವಳು ಇವರ ಗುಜುಗುಂಪು ಹೆಚ್ಚಾದುದರಿಂದ ಚಾವಡಿಯ ಮೇಲೆ ಕುಳಿತಿದ್ದವ ರಲ್ಲಿ ಒಬ್ಬ ''ಏನರವ್ವ ಸದ್ದು? ಇದೇನು ಪಂಚಾಯ್ತಿಯಾ ಮತ್ತೇನನ್ನಾ? ಏನು ಅಂತ ತಿಳಿದುಕೊಂಡಿದ್ದೀರಿ ? ಹೆಂಗಸರ ಗುಂಪು ಸೇರಿದ ಕಡೆ ಯೆಲ್ಲಾ ಹೀಗೆಯೆ ಮಾತು ನಿಲ್ಲಿಸಿ. ನಿಮ್ಮ ಮನೆಯಲ್ಲಿ ಮಾತನಾಡಿ ಕೊಳ್ಳಿ "ಎಂದ ಹೆಂಗಸರ ಗುಂಪಿನಲ್ಲಿ ಸದ್ದು ಮಾಯವಾಯಿತು.

ಸಿದ್ದಮ್ಮ ಎದ್ದು ನಿಂತು ಕೈ ಜೋಡಿಸಿಕೊಂಡು ತನ್ನ ಅಣ್ಣ ಮಾಡಿ

ಸುವ ಅನ್ಯಾಯವನ್ನು ಪಂಚಾಯಿತರಿಗೆ ಒಪ್ಪಿಸಿ, ಹಾಲು ಅನ್ನ ಉಂಡ ವರು ಪಕ್ಷಪಾತವಿಲ್ಲದೆ ನ್ಯಾಯ ತೀರ್ಮಾನ ಮಾಡಬೇಕೆಂದು ಹೇಳಿ ಕುಳಿತುಕೊಂಡಳು

"ಹೊನ್ನಯ್ಯನವರೇ, ಇನ್ನು ನಿಮ್ಮ ಕಥೆ ಹೇಳಿ" ಎಂದರು ಊರಿನ ಮುಖಂಡರು. ಪಂಚಾಯತಿಯಲ್ಲಿದ್ದವರೆಲ್ಲರ ಕಣ್ಣುಗಳೂ ಹೊನ್ನಯ್ಯನ ಕಡೆ ತಿರುಗಿದವು.

" ನನ್ನದೇನೂ ತಪ್ಪಿಲ್ಲ. ನನ್ನ ತಂಗಿಯೇ ಬಲವಂತದಿಂದ ವೀಳ್ಯದ ಶಾಸ್ತ್ರಕ್ಕೆ ಬಂದಿದ್ದಾಳೆ ಆಕೆಯೂ ನಮ್ಮ ತಾಯಿಯೂ ಸೇರಿ ಲಗ್ನ ಕಟ್ಟಿ ಸಿದ್ದಾರೆ ನಾನು ಹೆಣ್ಣು ಕೊಡಲು ಸಮ್ಮತಿಸಲಿಲ್ಲ 'ಅದೂ ಅಲ್ಲದೆ ಹೆಣ್ಣು ನೋಡಿಕೊಂಡು ಹೋದಂದಿನಿಂದ ಆದ ಅಪಶಕುನಗಳನ್ನು ನಿಮಗೆ ನಾನು ಮೊದಲೇ ತಿಳಿಸಿದ್ದೇನೆ" ಎಂದು ಗಡಸಿನ ದನಿಯಲ್ಲಿ ಹೊನ್ನಯ್ಯ ಕೂತಲ್ಲೇ ಹೇಳಿದ. ಆ ದನಿ ತಾನು ಯಾರಿಗೂ ಬಗ್ಗುವುದಿಲ್ಲ ಎಂಬ ಅರ್ಥಗರ್ಭಿತ ವಾಗಿತ್ತು ಮುಂದೆ ಏನೇನು ಮಾತುಗಳನ್ನು ಹೇಳಬೇಕೆಂದು ಮೆಲುಕು ಹಾಕತೊಡಗಿದ

ಇವನ ಮಾತುಗಳನ್ನು ಕೇಳಿದ ಕ್ಷಣವೇ ಬಸವಯ್ಯ ಕಣಕಿದ ಸರ್ಪದಂತಾದ. ಕ್ಷಣಮಾತ್ರದಲ್ಲಿ ಎದ್ದು ನಿಂತು ಪಂಚಾಯಿತರನ್ನುದ್ದೇಶಿಸಿ " ಎಲ್ಲರೂ ಕಂಡೂ ಕಂಡೂ ಹೇಡಿಗಳಂತೆ ಬಾಯಿಗೆ ಬೀಗ ಹಾಕಿಕೊಂಡು ಕುಳಿತಿದ್ದೀರಿ ಅಯೋಗ್ಯನಾದ ಒಬ್ಬ ಮನುಷ್ಯನ ಐಶ್ವರ್ಯ ಅಧಿಕಾರಕ್ಕೆ ಹೆದರಿ ಅವನು ಏನು ನೀಚ ಕೆಲಸ ಮಾಡಿದರೂ ನೀವೆಲ್ಲರೂ ಬೆಂಬಲ ಕೊಡುತ್ತೀರಿ ನಿಮ್ಮಂಥ ಹೇಡಿಗಳ ಬೆಂಬಲ ಅವನು ಮಾಡುವ ಇಂಥ ಹೀನ ಕೆಲಸಗಳಿಗೆ ಉತ್ತೇಜಕವಾಗಿ, ಈಗ ಊರಿಗೇ ದೊಡ್ಡ ಅವಮಾನವಾಗಿದೆ ಮನುಷ್ಯ ಸದಾಕಾಲದಲ್ಲೂ ನ್ಯಾಯಬದ್ಧನಾಗಿರಬೇಕು. ಅಯೋಗ್ಯತನ, ಅಧರ್ಮ, ಅಸತ್ಯಗಳನ್ನು ಖಂಡಿಸಬೇಕು ಅವುಗಳ ಪೋಷಕರನ್ನು ಮೊದಲು ಮಟ್ಟಹಾಕಬೇಕು ಅದರಿಂದ ಎಷ್ಟು ಕಷ್ಟ ಪರಂಪರೆಗಳು ಬಂದರೂ ಧೈರ್ಯವೆಂಬ ಆಯುಧದಿಂದ ಅಸತ್ಯವನ್ನು ಕತ್ತರಿಸಿ ನ್ಯಾಯವನ್ನು ಸ್ಥಿರಪಡಿಸಬೇಕು. ಈ ದಿವಸ ಒಬ್ಬರಿಗೆ ಒಂದು ವಿಧವಾಗಿ ತೊಂದರೆ ಕೊಡುತ್ತಾನೆ ನಾಳೆ ದಿನ ಅನೇಕರಿಗೆ ಅನೇಕ

ವಿಧವಾಗಿ ತೊಂದರೆ ಕೊಡುತ್ತಾನೆ. ಈ ಅಯೋಗ್ಯನನ್ನು ಮಟ್ಟಿ ಹಾಕದೆ ಇದುವರೆಗೂ ಬಿಟ್ಟಿದ್ದು ನಮ್ಮ ತಪ್ಪು. ನಾವೆಲ್ಲರೂ ಒಂದಾದರೆ ಈ ಬಡಪ್ರಾಣಿ ಏನು ಮಾಡುತ್ತಾನೆ? ಬೇಕಾದ್ದಾಗಲಿ. ಇವನನ್ನು ಶಿಕ್ಷಿಸಲೇ ಬೇಕು" ಎಂದು ತೀಕ್ಷ್ಣವಾದ ದನಿಯಲ್ಲಿ ಹೇಳಿ ಕುಳಿತುಕೊಂಡ. ಹೊನ್ನಯ್ಯನಿಗೆ ಕೋಪ ಉಕ್ಕಿ ಉಕ್ಕಿ ಬರುತ್ತಿತ್ತು. ಬಸವಯ್ಯನನ್ನು ಅಲ್ಲೇ ನುಂಗಿ ಬಿಡಲೇ ಎನ್ನುವಷ್ಟು ಸಿಟ್ಟು ಬಂದಿತ್ತು. ಆದರೂ ಇದು ಪಂಚಾಯಿತಿ. ಉಪಾಯದಿಂದ ಕಾರ್ಯಸಾಧನೆ ಮಾಡಬೇಕೆಂಬುದನ್ನು ಆತ ಮರೆಯಲಿಲ್ಲ ತನ್ನ ಕೋಪವನ್ನು ತಾನೇ ನುಂಗಿಕೊಂಡ

"ಹೊನ್ನಯ್ಯನವರೇ! ಬಸವಯ್ಯ ಹೇಳಿದ್ದನ್ನು ಕೇಳಿದಿರಾ? ಈ ರೀತಿ ಮಾಡಿದರೆ ನಮ್ಮ ಗ್ರಾಮಕ್ಕೇ ಅವಮಾನವಾಗುತ್ತದೆ ನೀವು ಹೆಣ್ಣು ಕೊಡಲು ಒಪ್ಪದಿದ್ದುದಕ್ಕೂ ಸಿದ್ದಮ್ಮ ನಿಮ್ಮ ಮಾತನ್ನು ಮೀರಿ ಈ ರೀತಿ ಲಗ್ನಕ್ಕೆ ಏರ್ಪಡಿಸಿರುವುದಕ್ಕೂ ರುಜುವಾತು ಕೊಡಬೇಕು. ಇಲ್ಲದಿದ್ದರೆ ನೀವು ಮಾಡಿರುವ ಅನ್ಯಾಯ ಪ್ರಚಾರವಾಗಿ ನಮ್ಮ ಊರಿನವರಿಗೆ ಕುಡಿಯುವುದಕ್ಕೆ ಪರಗ್ರಾಮಗಳಲ್ಲಿ ಒಂದು ತೊಟ್ಟು ನೀರೂ ಸಿಕ್ಕುವುದಿಲ್ಲ" ಎಂದರು ಪಂಚಾಯಿತರು ಹೊನ್ನಯ್ಯ ಗರ್ವದ ಧ್ವನಿಯಿಂದ "ಸಾಕ್ಷಿಯಾರು? ನಮ್ಮ ಮನೆಯವರೇ ಸಾಕ್ಷಿ" ಎಂದ ಇಂಥ ಸಂದರ್ಭದಲ್ಲಿ ತನ್ನ ಹೆಂಡತಿಯೂ ತಾಯಿಯೂ ಅವರ ಮನಸ್ಸಿನ ಅಭಿಪ್ರಾಯವೇನೇ ಇರಲಿ, ತನ್ನ ಪರ ಹೇಳುವರೆಂದು ನಂಬಿ ಹೊನ್ನಯ್ಯ ಹಾಗೆ ಹೇಳಿದ ಅವನ ನಂಬಿಕೆ ಆಧಾರವಿಲ್ಲದ್ದೆಂದು ಆ ಸಿಟ್ಟಿನ ಉರಿಯಲ್ಲಿ ಅವನು ಮರೆತ.

"ಹಾಗಾದರೆ, ನಿಮ್ಮ ಹೆಂಡತಿಯನ್ನೂ ತಾಯಿಯನ್ನೂ ದಯವಿಟ್ಟು ಕರೆಸಿ, ಸಾಕ್ಷಿ ಹೇಳಿಸಿ ಇದು ದೊಡ್ಡ ಸಭೆ ಒಬ್ಬರಿಗೂ ಅನ್ಯಾಯ ಬೇಕಿಲ್ಲ" ಎಂದು ಪಂಚಾಯಿತರು ಸಮಾಧಾನದಿಂದಲೇ ಹೇಳಿದರು ಇವನನ್ನು ಮತ್ತಷ್ಟು ಕೆಣಕಿದರೆ ಕೆಲಸ ಕೆಟ್ಟು ಹೋದೀತೆಂದು ತಾಳ್ಮೆಯಿಂದಲೇ ಅವನಿಗೆ ಹೇಳುತ್ತಿದ್ದರು

"ಚೆನ್ನಾಗಿ ಹೇಳಿದಿರಿ ಇನ್ನು ಹೆಂಗಸರು ಬಂದು ಸಾಕ್ಷಿ ಹೇಳಬೇಕೆ? ನಿಮಗೇ ಗೊತ್ತಿದೆ ಸಮಾಚಾರ ಹೆಂಗಸರ ಮಾತಿನಲ್ಲಿರುವ ನಂಬಿಕೆ ನನ್ನ

ಮಾತಿನಲ್ಲಿಲ್ಲವೆ, ನಿಮಗೆ ?" ಎಂದು ಹೊನ್ನಯ್ಯ ಬಿರುಸಿನಿಂದ ಹೇಳಿದ.

"ಆ ಒರಟು ನ್ಯಾಯ ಬೇಡಿ ಹೊನ್ನಯ್ಯನವರೆ !, ಇದು ನ್ಯಾಯ ಸ್ಥಾನ ಮತ್ತು ದೇವಸ್ಥಾನ '

" ಬೇಕಾದರೆ ನೀವೇ ಕರೆಸಿಕೊಳ್ಳಿ."

ಅಲ್ಲೇ ಪಕ್ಕದಲ್ಲಿ ನಿಂತಿದ್ದ ತಿಮ್ಮಕ್ಕ ಧೈರ್ಯ ತಂದುಕೊಂಡು ಒಣಗಿದ್ದ ನಾಲಿಗೆಯಿಂದ ನುಂಗಿನುಂಗಿ ಮಾತನಾಡತೊಡಗಿದಳು

"ಬಲವಂತವೇನನ್ನೂ ನಮ್ಮ ಅತ್ತಿಗೆಯವರು ಮಾಡಿಲ್ಲ ನಮ್ಮ ಯಜಮಾನರು, ನಮ್ಮ ಅತ್ತೆಯೋರು ಮತ್ತು ನಮ್ಮ ಅತ್ತಿಗೆಯವರು ಜೊತೇಯಲ್ಲೇ ಜೋಯಿಸರಲ್ಲಿ ಹೋಗಿ ಪಂಚಾಂಗ ತೆಗೆಸಿ ಲಗ್ನ ಕಟ್ಟಿಸಿದರು. ಬಸವಯ್ಯನವರೇ ಇದಕ್ಕೆ ಸಾಕ್ಷಿ ನಾನು ಮಾತ್ರ ಸುಳ್ಳು ಹೇಳಲಾರೆ ನಮ್ಮ ಯಜಮಾನರು ದೂರದ ದೇಶಕ್ಕೆ ಮಗಳನ್ನು ಕೊಡ ಬೇಕಲ್ಲ ಅಂತ ಹೀಗೆ ಕುತಂತ್ರ ಹುಡುಕವರೆ. ನಮ್ಮ ಅತ್ತೆಯವರನ್ನು ಕೇಳಿ" ಎಂದಳು ಆಕೆಯ ಮನದಲ್ಲಿ ಒಮ್ಮೆಲೆ ಯಾವುದೊ ಭೀತಿ ಆವರಿಸಿತು. 'ಏನೋ ಹೇಳಿಬಿಟ್ಟೆನಲ್ಲ! ಇನ್ನು ಗತಿ ? ಆಗಬೇಕಾದ್ದೆಲ್ಲಾ ಆಗೆ ಹೋಗಲಿ' ಎಂದು ಎದೆಯನ್ನು ಕಲ್ಲುಮಾಡಿಕೊಂಡಳು

"ಅದು ನ್ಯಾಯ" ಎಂದರು ಪಂಚಾಯಿತರು

ಪಕ್ಕದಲ್ಲೇ ಕುಳಿತಿದ್ದ ಕರಿಹೊನ್ನಮ್ಮ ಅಷ್ಟರಲ್ಲಿ ಎದ್ದುನಿಂತು ಕೈ ಜೋಡಿಸಿಕೊಂಡು "ಇದು ದೇವಸಭೆ ಇದ್ದಂಗದೆ ನೀವು ಹಾಲು ಅನ್ನ ಉಂಡವರು ಮಗನೆಂದು ಮರೆಸಿಕೊಂಡು ಈ ಸಭೆಯಲ್ಲಿ ನಾನು ಸುಳ್ಳು ಹೇಳಲಾರೆ ನನ್ನ ಸೊಸೆ ಹೇಳಿದ್ದೆಲ್ಲಾ ನಿಜ ಇಷ್ಟೇ ನನ್ನ ಮಾತು" ಎಂದು ಹೇಳಿ ಕೈಮುಗಿದು ಕುಳಿತುಕೊಂಡಳು 'ಮಗ ಅಂತ ಸುಳ್ಳು ಹೇಳಲಾರೆ ನಾನು ? ನಾನು ಹೆತ್ತು ಸಾಕಿದ ಮಗ ಏನು ಮಾಡಿಯಾನು? ಮಾಡಬಾರದ್ದೇ ಮಾಡ್ತೋದು !' ಎಂದು ತನ್ನಲ್ಲೇ ತನ್ನ ಮಾತಿಗಾಗಿ ಸಮಾಧಾನ ಹೊಂದುತ್ತಿದ್ದಳು. ಇವರು ಹೇಳುತ್ತಿದ್ದ ಹಾಗೆಯೇ ಹೊನ್ನಯ್ಯ ಹಲ್ಲುಮಸೆಯುತ್ತಾ ಕಿಡಿಕಿಡಿಯಾದ ಕಣ್ಣುಗಳನ್ನು ಅರಳಿಸಿ, ತುಟಿ ಕಚ್ಚಿ ಹಲ್ಲುಗಳನ್ನು ಕಡಿಯುತ್ತಾ "ನಿಮ್ಮನ್ನು ಕರೆಸಿದವರು ಯಾರು ? ನಾನು ಹೇಳಿದೆನೆ, ಸಾಕ್ಷಿ ಹೇಳಿ ಬನ್ನಿ ಎಂದು. ಈ

ಘಳಿಗೆಯಿಂದ ನೀವು ನನ್ನ ಮನೆಯಲ್ಲಿರಕೂಡದು. ನನ್ನ ಮನೆಗೆ ಕಾಲಿಟ್ಟಿದ್ದೀ ಆದರೆ ನಿಮಗೆ ತಕ್ಕ ಪ್ರಾಯಶ್ಚಿತ್ತ ಮಾಡುತ್ತೇನೆ ಇಲ್ಲಿಂದ ತೊಲಗಿ, ಹುಂ, ಹೊರಡಿ.'' ಎಂದು ಅರ್ಭಟಿಸಿದ

"ಹೊನ್ನಯ್ಯನವರೇ ಸಭೆಯಲ್ಲಿ ಕೆಟ್ಟಮಾತುಗಳನ್ನಾಡಬಾರದು ನೀವು ಅವರನ್ನು ಕೋರಿದ್ದಕ್ಕೆ ಅವರು ಮಾತನಾಡಿದರೇ ವಿನಃ ಅನ್ಯಥಾ ಇಲ್ಲ. ಇದಕ್ಕೇಕೆ ಇಷ್ಟೊಂದು ಕೋಪ ತಾಳ್ಮೆಯಿಂದ ಮಾತನಾಡಿ'' ಎಂದು ಪಂಚಾಯಿತರೆಲ್ಲರೂ ಸಮಾಧಾನ ಹೇಳಿದರು ಅವರ ಸಮಾಧಾನದ ಮಾತುಗಳೊಂದೂ ಕಲಕಿಹೋಗಿದ್ದ ಅವನ ಮನಸ್ಸನ್ನು ಮುಟ್ಟುತ್ತಲೇ ಇರಲಿಲ್ಲ ಯಾರ ಮಾತನ್ನೂ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ ಬಸವಯ್ಯ ಪುನಃ ಮೇಲಕ್ಕೆದ್ದು ಪಂಚಾಯಿತರನ್ನುದ್ದೇಶಿಸಿ ಹೇಳಿದ

''ನೋಡಿ, ಇವನ ಯೋಗ್ಯತೆಯು ನಿಮಗೆ ಹೊಸದಲ್ಲ ಇವನನ್ನು ಈ ದಿವಸ ದಂಡಿಸದೆ ಬಿಟ್ಟರೆ ನಾಳೆ, 'ನನ್ನನ್ನು ಏನು ಮಾಡಿದಿರೋ ನೀವೆಲ್ಲ'' ಎಂದು ಮೀಸ ತಿರುಗಿಸುತ್ತಾನೆ. ಈಗ ಇಲಿಯಂತೆ ಸದ್ದುಮಾಡದೆ ಕುಳಿತಿದ್ದಾನೆ. ನಾಳೆ ಹುಲಿಯಂತೆ ವರ್ತಿಸುತ್ತಾನೆ'' ಎಂದ.

''ಹೊನ್ನಯ್ಯನವರೇ, ನೀವು ಮಾಡಿರುವುದು ಅನ್ಯಾಯ. ಇಷ್ಟು ಖರ್ಚುಮಾಡಿಸಿ ನಾಳೆ ಆಗಬೇಕಾದ ಲಗ್ನವನ್ನು ತಡೆಯುವುದು ಧರ್ಮವಲ್ಲ. ಸುಖವಾಗಿ ಬದುಕುವ ಮಗಳಿಗೆ ಪ್ರಾರಂಭದಲ್ಲೇ ಇಂಥ ವಿಘ್ನಗಳನ್ನು ತಂದೊಡ್ಡಬಾರದು ಯಾರ್ಯಾರ ಅದೃಷ್ಟ ಹೇಗಿದೆಯೋ ಯಾರಿಗೆ ಗೊತ್ತು ಅದಕ್ಕೆ ಯಾರೂ ಹೊಣೆಯಲ್ಲ. ನೀವು ದೊಡ್ಡ ಮನಸ್ಸು ಮಾಡಿ ನಮ್ಮ ಪಂಚಾಯಿತಿಗೆ ಬೆಲೆ ಕೊಟ್ಟು ನಿಮ್ಮ ಮಗಳನ್ನು ರಂಗಯ್ಯನಿಗೆ ಮದುವೆ ಮಾಡಿಬಿಡಿ ಲಗ್ನ ಮುರಿಯಬಾರದು. ಇದೇ ತೀರ್ಮಾನ'' ಎಂದರು ಕೊನೆಗೆ ಪಂಚಾಯಿತರೆಲ್ಲರೂ ಧೈರ್ಯಮಾಡಿ

''ಇದು ಎಂದಿಗೂ ಸಾಧ್ಯವಿಲ್ಲ ಬಸವಯ್ಯನೂ ನನ್ನ ತಂಗಿಯೂ ನಿಮಗೆಲ್ಲಾ ದುಡ್ಡು ಕೊಡುತ್ತೇವೆಂದು ಪ್ರೋತ್ಸಾಹಿಸಿರ

ಬೇಕು. ಆದ್ದರಿಂದಲೇ ನನ್ನ ಮೇಲೆ ತಪ್ಪು ಹೊರಿಸುತ್ತೀರಿ. ನಾನು ಯಾರಿಗೂ ಜಗ್ಗುವುದಿಲ್ಲ. ನಾನು ನಿಮ್ಮಲ್ಲಿ ನ್ಯಾಯ ಕಲಿತುಕೊಳ್ಳುವುದಕ್ಕೆ ಬಂದಿಲ್ಲ. ಹೆಣ್ಣಿನ ತಂದೆ ನಾನು. ನನ್ನ ಮಗಳ ಶ್ರೇಯಸ್ಸಿಗೆ ಏನು ಮಾಡಬೇಕೆಂಬುದು ನನಗೆ ಗೊತ್ತು. ಪರರಿಗೆ ಈ ವಿಚಾರ ಏಕೆ? ನನ್ನಲ್ಲಿ ತೆಗೆದುಕೊಂಡಿರುವ ಸಾಲವನ್ನು ಮೊದಲು ಇಟ್ಟು ಅನಂತರ ಮಾತನಾಡಿ. ಅಂಬಲಿ ಗಂಜಿಗೆ ಗತಿ ಇಲ್ಲದವರೆಲ್ಲ ನನಗೆ ನ್ಯಾಯ ಕಲಿಸುವುದಕ್ಕೆ ಬರುತ್ತೀರ?'' ಎಂದು ಹೊನ್ನಯ್ಯ ತಲೆ ಒದರಿಕೊಂಡು ಗರ್ಜಿಸಿದ. ಇವನಅಹಂಕಾರದ ಮಾತಿಗೆ ಸಿದ್ದಮ್ಮನ ಊರಿನವರು ಕೆರಳಿ ''ನಿನ್ನ ಮನೆಯನ್ನು ಈಗಲೇ ಸುಟ್ಟುಹಾಕುತೇವೆ. ನಿನ್ನ ಐಶ್ವರ್ಯ ಬಂದು ನಮ್ಮನ್ನು ಏನುಮಾಡುತದೆ ನೋಡುತೇವೆ ಪುಂಡಾಟ ಆಡ್ತೀಯಾ, ಬಾ ಹೊರಗೆ ಗೊತ್ತಾಗುತದೆ'' ಎಂದು ಮುಷ್ಟಿಯುದ್ಧಕ್ಕೆ ಪ್ರಾರಂಭಮಾಡುವುದರಲ್ಲಿದ್ದರು ಪಂಚಾಯಿತರಲ್ಲಿ ಕೆಲವರುಎದ್ದುಬಂದು ''ಹೊನ್ನಯ್ಯನವರು ಕೋಪ ಮಾಡಿಕೊಂಡರೂ ಚಿಂತೆ ಇಲ್ಲ ನಾವೂ ನೀವೂ ಶಾಂತಿಯನ್ನು ಕಳೆದುಕೊಳ್ಳಬಾರದು ಇದು ಪಂಚಾಯಿತಿ ತಪ್ಪು ಮಾಡಿದವನು ಮನಸ್ಸಿಗೆ ಶಾಂತಿ ಇಲ್ಲದೆ ಹೀಗೆ ಸಿಕ್ಕಾಬಟ್ಟೆ ಮಾತನಾಡುವುದು ನಿಜ ಸ್ವಲ್ಪ ಶಾಂತಿಯಿಂದಿರಿ''ಎಂದು ಅವರನ್ನು ಸಮಾಧಾನಪಡಿಸಿದರು.

''ಹೊನ್ನಯ್ಯನವರೇ, ಈಗ ಒಂದು ಕಟ್ಟಕಡೇ ತೀರ್ಮಾನ ಹೇಳುತ್ತೀವೆ. ಅದರಂತೆ ದಯವಿಟ್ಟು ಕೇಳಬೇಕು" ಎಂದರು ಪಂಚಾಯಿತರು.

''ಹೆಣ್ಣು ಕೊಡಬೇಕೆಂದು ತೀರ್ಮಾನಿಸಿದರೆ ಮಾತ್ರ ಒಪ್ಪುವುದಿಲ್ಲ. ಬೇರೆ ಯಾವುದು ಬೇಕಾದರೂ ಹೇಳಿ ಯೋಚನೆಮಾಡಿ ನೋಡುತ್ತೇನೆ." ಎಂದು ಅವನು ಆರ್ಭಟಿಸುತ್ತಲೇ ಹೇಳಿದ.

''ನಿಮ್ಮ ಮಗಳ ಅಭಿಪ್ರಾಯವನ್ನು ಕೇಳೋಣ ಸಣ್ಣವಳೆಂದು ಉದಾಶೀನಮಾಡಬಾರದು. ಹುಡುಗಿಯು ರಂಗಯ್ಯನನ್ನು ಮದುವೆಯಾಗಲು ಒಪ್ಪಿದರೆ ಲಗ್ನ ಮಾಡಿಬಿಡಿ''

ಹೆಂಗಸರ ಗುಂಪಿನಲ್ಲಿ ಪಿಸುಗುಟ್ಟುವ ಗದ್ದಲ ಹೆಚ್ಚಾಯಿತು ಆ ಗದ್ದಲದಲ್ಲಿ ಆದಾಗಬಹುದೆಂಬ ಮಾತುಗಳು ಪಂಚಾಯಿತರಿಗೆ ಕೇಳಿಸು

ತ್ತಿದ್ದವು. ಹೊನ್ನಯ್ಯ ತನ್ನ ಮಗಳು ಸಮ್ಮತಿಸುವುದಿಲ್ಲವೆಂಬ ದೃಢ ನಂಬಿಕೆಯಿಂದ 'ಹುಂ' ಎಂದ. ಮನೆಯಲ್ಲಿ ಮಕ್ಕಳನ್ನು ಆಡಿಸುತ್ತಾ ಕುಳಿತಿದ್ದ ಲಿಂಗಿಯನ್ನು ಕರೆದುಕೊಂಡು ಬಂದರು. ಹುಡುಗಿಯು ಎಂದೂ ಇಂಥ ಪಂಚಾಯಿತಿಯ ಮಧ್ಯೆ ಬಂದಿಲ್ಲದ್ದರಿಂದ ಬೆದರಿದ ಜಿಂಕೆಯಂತೆ ಕಣ್ಣು ಬಿಡುತ್ತಾ ಸಿದ್ದಮ್ಮನ ಹತ್ತಿರ ಬಂದು ನಿಂತಳು. ಕೆಲವು ಹೆಂಗಸರು ಹುಡುಗಿಯ ಗದ್ದವನ್ನು ಹಿಡಿದು ಮುದ್ದಿಸುತ್ತಾ "ರಂಗಯ್ಯ ಮಾವನನ್ನು ಮದುವೆಯಾಗುತೀನೆ' ಎಂದು ಹೇಳು, ಹೆದರಬೇಡ" ಎಂದರು ಪಂಚಾಯಿತರಲ್ಲಿ ಒಬ್ಬನು ಎದ್ದು ನಿಂತು, "ತಾಯಿ, ಲಿಂಗಮ್ಮ ನಿಮ್ಮ ಮಾವಯ್ಯನನ್ನು ಮದುವೆಯಾಗಲು ನಿನಗೆ ಇಷ್ಟ ಇದೆಯೆ? ನಿನ್ನ ಮನಸ್ಸಿನಲ್ಲಿರುವುದನ್ನು ಧೈರ್ಯವಾಗಿ ಹೇಳಮ್ಮ" ಎಂದ

ಹುಡುಗಿಯು ಭಯದಿಂದಲೂ ನಾಚಿಕೆಯಿಂದಲೂ ತುಂಬಿದ ಮನಸ್ಸಿನಿಂದ ತಲೆಬಗ್ಗಿಸಿಕೊಂಡು ಮೌನವನ್ನು ತಾಳಿದಳು ಆ ಕ್ಷಣದಲ್ಲೇ ಹೊನ್ನಯ್ಯ, "ನೋಡಿದಿರಾ, ಮಾತನಾಡೋದಿಲ್ಲ ಅವಳಿಗೆ ಇಷ್ಟವಿಲ್ಲ ನಾನು ಮೊದಲೇ ಹೇಳಲಿಲ್ಲವೇ? ನಮ್ಮ ದೇವರಸತ್ಯ ನನಗೆ ಗೊತ್ತಿಲ್ಲವೆ? ಇನ್ನು ನಡೆಯಿರಿ" ಎಂದು ಮೇಲಕ್ಕೆದ್ದ

"ಸ್ವಲ್ಪ ನಿಲ್ಲಿ, ಹೊನ್ನಪ್ಪ ಹುಡುಗಿಯ ಬಾಯಿಂದ ಬಂದ ಹೊರತು ನಾವು ಒಪ್ಪುವುದಿಲ್ಲ" ಎಂದರು ಪಂಚಾಯಿತರು

ಪಂಚಾಯಿತರು ಪುನಃ ಹುಡುಗಿಯನ್ನು ಒತ್ತಿ ಕೇಳಿದರು ಹುಡುಗಿಯು ತಲೆಯನ್ನು ಮೇಲಕ್ಕೆತ್ತಲೇ ಇಲ್ಲ. ಹನಿಗೂಡಿದ ಕಣ್ಣುಗಳನ್ನು ಆಗಾಗ್ಗೆ ಒರಸಿಕೊಳ್ಳುತ್ತಾ ಕೊನೆಗೆ "ಆಗಲಿ" ಎಂದು ಮೆಲ್ಲನೆ ಒಂದು ಮಾತು ಬಾಯಿಂದ ಹೊರಗೆಡಹಿದಳು ಹೆಂಗಸರ ಗುಂಪಿನಿಂದ ನಗೆಯು ಉಸಿರೊಂದು ಹೊರಟಿತು ಪಂಚಾಯಿತರು 'ಭಲೆ' ಎಂದುಕೊಳ್ಳುತ್ತಾ "ಹೊನ್ನಯ್ಯನವರೆ ಈ ಲಗ್ನವನ್ನು ತಡೆಯಬೇಡಿ. ಇದು ನ್ಯಾಯವಲ್ಲ. ಇನ್ನು ಹೊರಡೋಣ" ಎಂದರು. ಹೊನ್ನಯ್ಯನಿಗೆ ಮಗಳ ಮೇಲೆ ಹಿಡಿಸಲಾರದಷ್ಟು ಸಿಟ್ಟು ಬಂದು ಮೇಲಕ್ಕೆ ದಢಾರನೆ ಎದ್ದು "ಇದು ಮಾತ್ರ ನನ್ನಿಂದ ಸಾಧ್ಯವಿಲ್ಲ" ಎಂದು ಹೇಳುತ್ತಾ ಅಲ್ಲಿಂದ ಹೊರಟೇ

ಹೋದ ಪಂಚಾಯಿತರೆಲ್ಲರೂ ಭಗ್ನಮನಸ್ಕರಾಗಿ "ಸಿದ್ದಮ್ಮ ಈ ಮೂರ್ಖನ ಹತ್ತಿರ ನಾವು ಏನೂ ಮಾಡುವುದಕ್ಕಾಗುವುದಿಲ್ಲ ನಿನ್ನ ಇಷ್ಟ ಬಂದಂತೆ ಮಾಡಮ್ಮ'' ಎಂದು ಹೇಳುತ್ತಾ ಒಬ್ಬೊಬ್ಬರಾಗಿ ಹೊರಟೇಹೋದರು. ಅಲ್ಲಿ ಸೇರಿದ್ದ ಹೆಂಗಸರೆಲ್ಲರೂ ಕೈ ಕೈ ಹಿಸಿಕಿಕೊಳ್ಳುತ್ತಾ ಒಳಗೊಳಗೆ ಶಪಿಸುತ್ತಾ ಅಶಾಂತ ಮನಸ್ಸಿನಿಂದ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು ಬಸವಯ್ಯನಿಗೆ ಹಿಡಿಸಲಾರದಷ್ಟು ಕೋಪ ಶರೀರದಲ್ಲಿ ಉಕ್ಕುತ್ತಿತ್ತು. ಏನುಮಾಡುವುದೆಂದು ಹಲ್ಲು ಹಲ್ಲು ಕಡಿಯುತ್ತಾ "ಈ ಮೂರ್ಖನಿಗೆ ಏನು ಮಾಡಿದರೂ ತೀರದು ಬಾ ಸಿದ್ದಮ್ಮ, ಸದ್ದುಮಾಡದೆ ಈಗ ಹುಡುಗಿಯನ್ನು ಕರೆದುಕೊಂಡು ಹೋಗಿ ಮದುವೆ ಮಾಡು ಇದಕ್ಕೆ ನಾವೆಲ್ಲರೂ ತಕ್ಕ ಏರ್ಪಾಡು ಮಾಡುತ್ತೇವೆ ದಾರಿತಪ್ಪಿಸಿ ಕಾಡುಹಾದಿಯಲ್ಲಿ ನಾಲ್ಕೈದು ಜನರ ಸಂಗಡ ಹೊರಟುಬಿಡೋಣ ಬೆಳಗಾಗುವುದರೊಳಗೆ ನಿಮ್ಮ ಊರನ್ನು ತಲುಪಿದರೆ ಅಲ್ಲಿಗೆ ತೀರಿತು. ಇವನ ಬೆಂಬಲಕ್ಕೆ ಯಾರು ಬರುತ್ತಾರೆ? ಆ ಮೇಲೆ ಮೂಗು ಮುರಿದವನಂತೆ ತೆಪ್ಪನಾಗುತ್ತಾನೆ" ಎಂದ ಬಸವಯ್ಯ ಕೋಪದಿಂದ ದುಡುಕುತ್ತಿದ್ದಾನೆಂಬುದನ್ನು .ಸಿದ್ದಮ್ಮನು ಅರಿತು ''ಇದೆಲ್ಲಾ ನ್ಯಾಯುವಲ್ಲ ಬಸವಯ್ಯ ಹುಡುಗಿಗೆ ಪ್ರಾಪ್ತ ವಯಸ್ಸಾಗಿಲ್ಲ ಅದೂ ಅಲ್ಲದ ಜನರ ದೂಷಣೆಗೆ ಗುರಿಯಾಗ ಬೇಕಾಗುತದೆ ಈ ಸಮಯದಲ್ಲಿ ದುಡುಕಿ ಹಾಗೆ ಮಾಡಬಾರದು ನಮ್ಮ ಅದೃಷ್ಟವೇ ಇಷ್ಟೆಂದು ಕಾಣುತದೆ" ಎಂದಳು ಅವಳ ಮಾತಿನ ತೆರೆಯಲ್ಲಿ ದುಃಖದ ಬೇನೆ ಅಡಗಿತ್ತು, ಜ್ಞಾನದ ಆಳ ಕಾಣಿಸುತ್ತಿತ್ತು. ಬಸವಯ್ಯನ ಮನಸ್ಸಿನ ಮೇಲೆ ಸಿದ್ದಮ್ಮನ ಮಾತುಗಳ ಪರಿಣಾಮ ವಾಯಿತು. ಉಕ್ಕುತ್ತಿದ್ದ ಕೋಪ ಅವನಿಂದ ದೂರ ಸರಿಯು ತೊಡಗಿತು ಬಸವಯ್ಯ "ಏನು ಅದೃಷ್ಟವೋ" ಎಂದು ಯೋಚಿಸುತ್ತಾ ಸಿದ್ದಮ್ಮನ ಊರಿನವರನ್ನು ಕರೆದುಕೊಂಡು ಮನೆಗೆ ಹೊರಟ.

ಹೊನ್ನಯ್ಯ ಮನೆಗೆ ಬಂದ ಒಡನೆ ತನ್ನ ಹೆಂಡತಿಯನ್ನೂ ತಾಯಿಯನ್ನೂ ಮತ್ತು ಮಗಳನ್ನೂ ಬಾಯಿಗೆ ಬಂದಂತೆ ಬೈದು ಕೊನೆಗೆ ಗಾಡಿ ಹೊಡೆಯುವ ಬಾರುಗೋಲಿನಿಂದ ಹೆಂಡತಿಗೆ ನಾಲ್ಕು ಏಟನ್ನು

ಬಲವಾಗಿ ' ಫಟಾರ್, ಫಟಾರ್ 'ನೆ ಬಿಗಿದನು ಮಗಳನ್ನು ಕರೆದು "ನೋಡು, ನಾಳೆ ನಿನಗೆ ಮದುವೆ ನಿಮ್ಮಪ್ಪನ ಮಾತು ಕೇಳಿದರೆ, ನನ್ನ ಕೈಯಲ್ಲಿರುವುದನ್ನು ನೋಡು. ಒಂದು ಗೇಣುದ್ದ ಬೆಳೆಯಲಿಲ್ಲ; ಆಗಲೇ ನಿನ್ನ ಕೈ ಗುಣ ತೋರುತ್ತೀಯ? ತಂದೆ ಹೇಳಿದಂತೆ ಕೇಳ ಬೇಕು ಹೆಣ್ಣು ಮಕ್ಕಳು ಹುಂ, ಇನ್ನೂ ಚಿಕ್ಕವಳು ಅಂತ ಬಿಟ್ಟಿ ದ್ದೇನೆ. ಜೋಕೆ." ಎಂದು ಬೆದರಿಸಿದ ಲಿಂಗಿ ತಂದೆಯ ಮಾತಿನ ಉರಿಯಲ್ಲಿ ಸಿಕ್ಕಿ ಬೆಂಡಿನಂತಾದಳು ಬೆದರಿ ಮಿಟಿಮಿಟನೆ ಕಣ್ಣು ಬಿಡುತ್ತಾ ಉಸಿರನ್ನೂ ಗಟ್ಟಿಯಾಗಿ ಹೊಯ್ಯಲಿಲ್ಲ

ಬಸವಯ್ಯನ ಮನೆಯಲ್ಲಿ ಎಲ್ಲರೂ ಈ ಅಪಮಾನದ ಚಿಂತೆ ಯಿಂದ ಪೀಡಿತರಾಗಿದ್ದರು ಸಿದ್ದಮ್ಮ ನಿಟ್ಟುಸಿರುಬಿಡುತ್ತಾ " ಈ ನೀಚನು ಯಾರಿಗೂ ಬಗ್ಗುವುದಿಲ್ಲ. ತೀರ ಮುಳುಗಿದವನಿಗೆ ಛಳಿ ಏನು, ಮಳೆ ಏನು? ಎಲ್ಲಾ ಒಂದೆ ಈಗ ಬೆಳಗಾಗುತ್ತಾ ಬಂತು. ಇಬ್ಬರು ಮೊದಲು ಊರಿಗೆ ಹೋಗಿ, ರಂಗಯ್ಯನಿಗೂ, ನೆಂಟರುಗಳಿಗೂ ಇಲ್ಲಿ ನಡೆದ ಸಮಾಚಾರವನ್ನು ತಿಳಿಸಿ ಇನ್ನು ಹೊರಡಿ. ಏನೋ ನಮ್ಮ ಗ್ರಹಚಾರ. ರಂಗಯ್ಯನಿಗೆ ಸ್ವಲ್ಪ ಸಮಾಧಾನ ಹೇಳಿರಪ್ಪಾ ಅಷ್ಟರಲ್ಲಿ ನಾವೂ ಬಂದುಬಿಡುತ್ತೇವೆ" ಎಂದು ಧೈರ್ಯದಿಂದ ಹೇಳಿದಳು

ಬಂದಿದ್ದವರಲ್ಲಿ ಇಬ್ಬರು ಸಿದ್ದಮ್ಮನ ಊರಿಗೆ ಮೋಟಾರಿನಲ್ಲಿ ಪ್ರಯಾಣ ಮಾಡಿ ಮಧ್ಯಾಹ್ನದ ವೇಳೆಗೆ ಊರನ್ನು ಸಮೀಪಿಸಿದರು ಊರಿನ ಜನರಿಗೆ ಹೇಗೆ ವಿಷಯವನ್ನು ತಿಳಿಸುವುದೆಂದುಕೊಂಡು ಇಬ್ಬರೂ ಒಳಗೊಳಗೆ ಕೊರಗುತ್ತಿದ್ದರು. ರಂಗಯ್ಯ ಊರಿನಲ್ಲಿ ಮನೆಯ ಮುಂದೆ ಹಸುರು ಚಪ್ಪರವನ್ನು ಹಾಕಿಸುತ್ತಿದ್ದ ಚಪ್ಪರವನ್ನು ತಳಿರು ತೋರಣಗಳಿಂದಲೂ ನಾನಾ ರಂಗಿನ ಪುಷ್ಪಗಳಿಂದಲೂ, ಆಗತಾನೆ ಬಂದಿದ್ದ ತನ್ನ ಕಾಲೇಜು ಗೆಳೆಯರ ಹೇಳಿಕೆಯಂತೆ ಶೃಂಗಾರ ಮಾಡಿ ಸುತ್ತಿದ್ದ. 'ಬಾಳೆಯ ಕಂದನ್ನು ಅಲ್ಲಿ ಕಟ್ಟಬೇಕು ಈ ಜಾಲದ ಹೂ ಗೊಂಚಲನ್ನು ಇಲ್ಲಿ ಸಿಕ್ಕಿಸಿದರೆ ಚಂದ' ಎಂದು ಹೇಳಿ ಕಟ್ಟಿಸುತ್ತಿದ್ದ. ಅವನ ಮತ್ತು ಗೆಳೆಯರ ಸಂಭ್ರಮ ಸಂತೋಷಗಳು ಮೇರೆ ಮೀರಿದ್ದವು. ಅದೊಂದು ಆನಂದದ ಜೀವನದಲ್ಲಿ ಜೇನುಸವಿಗಿಂತಲೂ ಸಿಹಿಯಾದ

ದಿನದಂತೆ ರಂಗಯ್ಯನ ಮನಸ್ಸಿಗೆ ಅನ್ನಿಸಿದೆ ಹೊರಗಣ ಲೋಕವನ್ನೇ ಮರೆತು ತನ್ನ ಮದುವೆಯ ದಿವ್ಯ ದೃಶ್ಯವನ್ನು ಕಣ್ಣುಮುಂದೆ ಕಾಣು ತ್ತಿದ್ದಾನ ದೂರದ ಬಂಧುಗಳು ಆಗಲೇ ಲಗ್ನಕ್ಕಾಗಿ ಬಂದಿದ್ದರು. ಪ್ರತಿಯೊಂದು ಚಪ್ಪರದ ಕಂಬಕ್ಕೂ ಬಾಳೆಯಗೊನೆ ಮತ್ತು ಎಳನೀರು ಕಟ್ಟಿಸಿ, ದೇವರ ಚಿತ್ರಪಟಗಳನ್ನು ನೇತುಹಾಕಿಸುತ್ತಿದ್ದ. ಹೆಣ್ಣಿನ ಕಡೆ ಯವರು ಇಳಿದುಕೊಳ್ಳುವ ಮನೆಗೂ ಕೂಡ ತೋರಣಗಳಿಂದಲೂ, ಚಿತ್ರ ಪಟಗಳಿಂದಲೂ ಶೃಂಗಾರ ಮಾಡಿಸುತ್ತಿದ್ದ. ಹೆಣ್ಣಿನವರು ನಾಜೋಕಾ ಗಿದ್ದರೆ ತನ್ನನ್ನು ಹೊಗಳುವರೆಂದೇ ಅವನ ಭಾವನೆ, ಆಶೆ. ರಾಮನಗರ ದಿಂದ ಬರುತ್ತಿದ್ದ ಇಬ್ಬರನ್ನು ಕೆಲವರು ದೂರದಿಂದಲೇ ಗುರುತಿಸಿ.

"ರಂಗಯ್ಯನವರೇ, ಅಲ್ಲಿ ನೋಡಿ! ಹೆಣ್ಣು ಬರುವ ಸಮಾ ಚಾರವನ್ನು ತರುತ್ತಿದ್ದಾರೆ ಜಾಗ್ರತೆ ಪಾನಕ, ಪನ್ನೀರು ಸಿದ್ಧ ಮಾಡಿಸಿ, ಬಿಸಿಲಿನಲ್ಲಿ ಬಂದಿದ್ದಾರೆ." ಎಂದರು

ರಂಗಯ್ಯ ಆನಂದದಿಂದ ಹಕ್ಕಿ ಹಾರಿದಂತೆ ಅಡಿಗೆ ಮನೆಗೆ ಹಾರಿಹೋದ.

"ಪಾನಕ ಪನ್ನೀರು ಜಾಗ್ರತೆ ಸಿದ್ಧಮಾಡಿಕೊಳ್ಳಿ. ಹೆಣ್ಣಿನ ಕಡೆ ಯವರಿಗೆಲ್ಲಾ ಕೊಡಿ. ಹುಂ ಏಳಿ ಏಳಿ ಬಿಸಿಲಿನಲ್ಲಿ ಬರುತ್ತಿದ್ದಾರೆ" ಎಂದು ಅಡಿಗೆ ಮನೆಯಲ್ಲಿದ್ದವರಿಗೆ ಅರಳಿದ ಮುಖದಿಂದ ತಿಳಿಸಿದ. ರಂಗಯ್ಯನಿಗೆ ಸ್ವರ್ಗವೇ ಅಂಗೈಯಮೇಲೆ ಬಿದ್ದಷ್ಟು ಆನಂದವಾಯಿತು. ಅಡಿಗೆಯವರು ಬೇಗಬೇಗ ಪಾನಕ ಸಿದ್ಧಮಾಡುತ್ತಿದ್ದರು. ರಂಗಯ್ಯ ತನ್ನ ಗೆಳೆಯರ ಕೂಡ ತನ್ನ ಆಪ್ತಮಿತ್ರರಾದ ಬಸವಯ್ಯನವರು ಹೆಣ್ಣಿನ ಕಡೆಯವರ ಜೊತೆಯಲ್ಲಿ ಬಂದಿದ್ದಾರೆಂದೂ, ಈ ಹುಡುಗಿಯನ್ನು ತನಗೆ ಮದುವೆ ಮಾಡಿಸಲು ಬಹಳ ಶ್ರಮಪಟ್ಟವರೆಂದೂ, ಬಹಳ ಗುಣಶಾಲಿ ಗಳೆಂದೂ, ಅವರ ಸ್ನೇಹವಾದದ್ದು ತನ್ನ ಅದೃಷ್ಟವೆಂದೂ ಅವರನ್ನು ಹೊಗಳುತ್ತಿದ್ದ ಬರುತ್ತಿದ್ದವರು ಸಮೀಪಿಸಿದಂತೆಲ್ಲಾ ಅವರ ಮುಖವು ಹೆಚ್ಚುಹೆಚ್ಚು ಪೆಚ್ಚಾಗಿ ವ್ಯಸನದಿಂದ ಕೂಡಿದ್ದುದು ವ್ಯಕ್ತವಾಯಿತು. ಅವರಿಬ್ಬರು ಏನಃ ಮತ್ತಾರ ಸುಳಿವೂ ಕಾಣಿಸಲಿಲ್ಲ. ರಂಗಯ್ಯ ದೃಷ್ಟಿಸಿ ನೋಡಿದ. ಬಹಳ ಹೊತ್ತಿನವರೆಗೆ ಕಣ್ಣು ರೆಪ್ಪೆಗಳು ಒಂದ

ನ್ನೊಂದು ತಾಕಲಿಲ್ಲ. ಅವರು ಎಳೆದುಕೊಂಡು ಬರುತ್ತಿದ್ದ ಕಾಲು ಗಳಿಂದಲೂ ಮತ್ತು ಮುಖಗಳಿಂದಲೂ ಆಶಾಭಂಗದ ಸೂಚನೆ ಕಂಡು ಬರುತ್ತಿತ್ತು ರಂಗಯ್ಯನ ಅಂತರಾಳದಲ್ಲಿ ನಿಜವು ಕ್ಷಣಮಾತ್ರದಲ್ಲಿ ಹೊಳೆದು ಮಿಂಚಿನ ವೇಗದಲ್ಲಿ ಹಾರಿಹೋಯಿತು ಎದೆಗೆ ಸಿಡಿಲು ಬಡಿದಂತಾಯಿತು ಮನಸ್ಸು ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತಾ ಯಿತು ಮುಖ ವೈ ವಿವರತೊಡಗಿತು ಸಮೀಪಕ್ಕೆ ಬಂದವರನ್ನು ಏನಾಯಿತೆಂದು ಕೇಳಲು ಬಾಯಿ ಬರಲಿಲ್ಲ. ಕೇಳಬೇಕೆಂಬ ಮನಸ್ಸಾ ದರೂ ಮಾತು ಗಂಟಲಿನಲ್ಲೇ ತಗುಲಿಕೊಂಡಂತಾಯಿತು.

ಬಂದವರೂ ಕೂಡ ಮಾತನಾಡಲಾರದೆ ಬೆಪ್ಪು ಹಿಡಿದವರಂತೆ ರಂಗಯ್ಯನ ಪಕ್ಕದಲ್ಲಿ ಕುಳಿತರು. ರಂಗಯ್ಯನ ಹೃದಯ ಡಬಡಬನೆ ಹೊಡೆದುಕೊಳ್ಳಲಾರಂಭಿಸಿತು. ತುಟಿಗಳು ಅದುರುತ್ತಿರಲು ಆತನು ಬಂದವರನ್ನು "ಏಕೆ? ಏನಾಯಿತು? ತಡಮಾಡದೆ ಹೇಳಿ" ಎಂದು ತಡೆದು ತಡೆದು ಮಾತನಾಡಿದ. ನಡೆದ ಕಥೆಯನ್ನೆಲ್ಲಾ ಇಬ್ಬರೂ ಚಾಚೂ ತಪ್ಪದೆ ಹೇಳಿದರು ರಂಗಯ್ಯನ ಸ್ನೇಹಿತರೂ ಬಂಧುಗಳೂ ಗುಂಪುಕೂಡಿಕೊಂಡು ಬಹಳ ವಿಷಾದದಿಂದ ಕೇಳುತ್ತಿದ್ದರು ಸ್ನೇಹಿತ ರೆಲ್ಲರೂ ತಲೆತಗ್ಗಿಸಿಕೊಂಡು ವ್ಯಸನದಿಂದ ಏನೂ ತೋಚದೆ ಕುಳಿತರು. ಚಿಂತೆ, ನಿರಾಶೆ, ಉದ್ವೇಗ ರಂಗಯ್ಯನ ಮನಸ್ಸನ್ನು ಕವಿಯಿತು. ತನ್ನ ಲ್ಲಿಯೇ ಯೋಚಿಸತೊಡಗಿದ 'ಈ ಜಗತ್ತು ಮಾಯಾಜಾಲದಿಂದ ತುಂಬಿದೆ. ಜೀವನವೆಲ್ಲವೂ ಬರಿಯ ಕನಸು ನಮಗೆ ಬೇಕಾದ್ದು ಸಿಕ್ಕದು, ಬೇಡವಾದದ್ದು ಬೇಕಾದಷ್ಟಿದೆ ಕೈಗೆ ಬಂದ ತುತ್ತು ಬಾಯಿಗೆ ಬಾರದಂತೆ ಮಾಡುವುದೇ ಈ ಪ್ರಪಂಚದ ವಿಚಿತ್ರ ಹೀಗಿರುವ ಪ್ರಪಂಚ ದಲ್ಲಿ ಜೀವಿಸಿ ಪ್ರಯೋಜನವೇನು? ಮದುವೆಯಾಗುವ ಆಶೆಯೇ ಈ ದುಃಖವನ್ನು ತಂದದ್ದು. ಲಿಂಗಿಯ ಮೇಲಿನ ಪ್ರೀತಿಯೇ ಈ ಮದುವೆಗೆ ಕಾರಣವಾದದ್ದು ಜೀವಿಸಿರುವುದರಿಂದಲ್ಲವೇ ಆಸೆಯು ಹುಟ್ಟಿ ಬಣ್ಣ ಬಣ್ಣದ ಬಲೆಯನ್ನೊಡ್ಡಿ ಅದರಲ್ಲಿ ಮಾನವನನ್ನು ಕೆಡಹುವುದು?' ಚಿಂತೆಯೆಂಬ ಚಿತೆ ಅವನ ದೇಹವನ್ನು ಸುಡತೊಡಗಿತು. ಸ್ನೇಹಿತ ರೆಲ್ಲರೂ ಒಬ್ಬೊಬ್ಬರಾಗಿ ರಂಗಯ್ಯನನ್ನು ಸಮಾಧಾನ ಪಡಿಸುತ್ತಿದ್ದರು.

ಅವರ ಬೋಧನೆಗಳೊಂದೂ ಅವನ ಮನಸ್ಸಿಗೆ ನಾಟಲಿಲ್ಲ ಒಂದೊಂದು
ಸಾರಿ ಹೃದಯದಿಂದ ರೋಷ ಉಕ್ಕಿಬರುತ್ತಿತ್ತು, "ಆ ನೀಚನಿಗೆ ಏನು
ಮಾಡಲಿ ಈಗಲೇ ಹೋಗಿ ಅವನಿಗೆ ಸರಿಯಾಗಿ ಬುದ್ಧಿ ಕಲಿ
ಸಲೆ?" ಎಂದು ಹೊನ್ನಯ್ಯನ ಮೇಲೆ ಕಿಡಿಕಾರತೊಡಗಿದ ಏನು
ಬುದ್ದಿ ಕಲಿಸುವುದು ? ತನ್ನ ರೋದನ ಮರುಳುಗಾಡಿನಲ್ಲಿ ಗೋಳಿಟ್ಟಂತೆ
ಎಂದು ಒಂದು ಮನಸ್ಸು ಹೇಳುತ್ತಿತ್ತು. ಕಣ್ಣೇ ಕಾಣಿಸದಂತಾಯಿತು.

ಸಡಗರದಿಂದ ತುಂಬಿದ್ದ ಮದುವೆಮನೆ ನಿರ್ಜನವಾಯಿತು.
ತಳಿರು ತೋರಣಗಳಿಂದ ಅಲಂಕೃತವಾದ ಮದುವೆಯ ಮಂಟಪ ಬಾಡಿ
ಹೋದಂತೆ ಕಾಣಿಸಿತು ಹಿರಿಯ ಸ್ನೇಹಿತರೊಬ್ಬರು—

"ರಂಗಯ್ಯನವರೇ, ಋಣವಿದ್ದರೆ ಇದೇ ಹುಡುಗಿ ನಿಮ್ಮ ಕೈ ಹಿಡಿ
ಯುತ್ತಿದ್ದಳು. ಈ ಹೆಣ್ಣಿಗೂ ನಿಮಗೂ ದಾಂಪತ್ಯಜೀವನದ ಋಣಾನು
ಬಂಧವಿಲ್ಲವೆಂದು ದೇವರ ಇಚ್ಛೆ ಇರುವಾಗ ಅದಕ್ಕೆ ಪ್ರತಿಯಾಗಿ ನಡೆ
ಯಲು ಮಾನವರಾರಿಂದಲೂ ಸಾಧ್ಯವಿಲ್ಲ ಹೆಣ್ಣು, ಮಣ್ಣು, ಹೊನ್ನು
ಇವು ಮೂರು ಋಣವಿದ್ದರೆ ಮಾತ್ರ ಲಭಿಸುತ್ತವೆ ನಿಮ್ಮ ಸೋದರ
ಮಾವನೇ ಮೋಸ ಮಾಡಿದನೆಂದು ಜನರು ದೂಷಿಸುವುದು ಪ್ರಪಂಚದ
ವಾಡಿಕೆಯಾಗಿದೆ ಮನುಷ್ಯನು ಕರ್ಮಕ್ಕೆ ಅಧಿಕಾರಿಯೇ ಹೊರತು
ಅದರ ಫಲಕ್ಕಲ್ಲ ಒಂದು ತೊಡಕನ್ನೇ ಚಿತ್ರಿಸಿಕೊಂಡು ಅದರ ಮೇಲೆ
ಮೆಲಕು ಹಾಕುತ್ತಾ ಕೊರಗುವುದು ಒಳ್ಳೆಯದಲ್ಲ ಇದೆಲ್ಲವೂ ಜ್ಞಾನ
ಶೂನ್ಯರು ಮಾಡುವ ಕೆಲಸ ನೀವು ವಿದ್ಯಾವಂತರು. ನಾನು ಹೇಳಿ
ದ್ದನ್ನು ಯೋಚಿಸಿ ನೋಡಿ" ಎಂದರು. ಬಿರುಗಾಳಿಯ ಹೊಡತದಿಂದ ಕಲಕಿ
ಹೋದ ಸಾಗರದಂತಿತ್ತು ರಂಗಯ್ಯನ ಮನಸ್ಸು. ಅವರ ಸಮಾಧಾನದ
ನುಡಿಗಳೊಂದೂ ಅವನ ಕಿವಿಯ ಮೇಲೆ ಬೀಳುತ್ತಿರಲಿಲ್ಲ ಶರೀರ ಬೆವರಿ
ಬೆಂಡಾದಂತಾಗಿ ಕಿವಿಗಳೂ ಗ್ರಹಣಶಕ್ತಿಯನ್ನು ಕಳೆದುಕೊಂಡಂತಾಗಿ
ದ್ದವು. ಕೊನೆಗೊಮ್ಮೆ ನಿಟ್ಟುಸಿರು ಬಿಟ್ಟು "ನಮ್ಮ ತಾಯಿ ಬರಲಿಲ್ಲವೇ?
ಎಂದ. ರಾಮನಗರದಿಂದ ಬಂದವರು ಅವರು ಹಿಂದೆ ಬರುವರೆಂದರು.

ರಾಮನಗರದಲ್ಲಿ ಸಿದ್ದಮ್ಮ ಬಸವಯ್ಯ ಮತ್ತು ಸಿದ್ದಮ್ಮನ ಕಡೆ
ಯವರು ಊರಿನ ಕೆಲವು ಮುಖಂಡರುಗಳ ಮುಖಾಂತರ ಹೊನ್ನಯ್ಯ

ನಿಗೆ ನಾನಾ ವಿಧವಾಗಿ ಪುನಃ ಬೋಧಿಸಿದರು, ಬೇಡಿಕೊಂಡರು ಆದರೆ ಆತ ತನ್ನ ಹಟವನ್ನು ಬಿಡಲಿಲ್ಲ ತಾನು ಏರ್ಪಡಿಸಿದ್ದಂತೆ ಲಗ್ನ ಮಾಡಲು ತನಗೆ ಬೇಕಾದ ಕೆಲವು ಜನರನ್ನು ವಧುವಿನ ಜೊತೆಯಲ್ಲಿ ಕರೆದುಕೊಂಡು ನವಲೂರಿಗೆ ಬಿರುಸಾಗಿ ಹೊರಟ

ಸಿದ್ದಮ್ಮ 'ಆದದ್ದಾಯಿತು ಮುಂದೆ ದೇವರು ಮಾಡಿದಂತಾಗಲಿ' ಎಂದು ಮನಸ್ಸನ್ನು ಬಿಗಿಹಿಡಿದುಕೊಂಡು ಬಸವಯ್ಯನವರ ಮನೆಗೆ ಅತ್ತಿಗೆಯನ್ನೂ ತನ್ನ ತಾಯಿಯನ್ನೂ ಕರೆಸಿಕೊಂಡು, "ಇನ್ನು ನಾವು ಊರಿಗೆ ಹೊರಡುತ್ತೇವೆ ರಂಗಯ್ಯ ಎಲ್ಲಿ ಚಿಂತೆ ಮಾಡುತ್ತಾ ಕುಳಿತಿದ್ದಾನೆಯೊ! ಅವನನ್ನು ಸಮಾಧಾನಪಡಿಸುವುದೇ ನನಗೆ ಒಂದು ಕಷ್ಟವಾಗಿದೆ ತಕ್ಷಣದಲ್ಲಿಯೇ ಬೇರೆ ಯಾವುದಾದರೊಂದು ಹುಡುಗೀನ ನೋಡಿ ಲಗ್ನ ಮಾಡಬೇಕು ಈಗ ಸಿದ್ಧಪಡಿಸಿರುವ ಸಾಮಾನೆಲ್ಲಾ ಹಾಳಾಗುತ್ತದೆ" ಎಂದು ಹನಿಗಣ್ಣಿನಿಂದ ಹೇಳಿದಳು ತಿಮ್ಮಕ್ಕ ಉಕ್ಕಿ ಬಂದ ದುಃಖದಿಂದ "ಹೀಗೆ, ನಾನಿನ್ನು ಭೂಮಿಯ ಮೇಲೆ ಬದುಕಬಾರದು. ನಿಮ್ಮ ಅಣ್ಣನವರ ಮಕ್ಕಳ ಬಾಳಿಗೆ ಮಣ್ಣು ಹಾಕಿದರು" ಎಂದು ಸೆರಗಿನಿಂದ ಮುಖವನ್ನು ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು ಸಿದ್ದಮ್ಮ ಅವರನ್ನು ನಾನಾ ವಿಧವಾಗಿ ಸಂತೈಸಿ,

"ಇಷ್ಟಕ್ಕೆಲ್ಲಾ ಯಾಕೆ ಜೀವನದಲ್ಲಿ ಬೇಸರಗೊಂಡರೆ ಹೇಗೆ? ನಾವು ಇನ್ನೆಷ್ಟು ತಾನೆ ಶ್ರಮ ಪಡುತ್ತೇವು? ಇದನ್ನು ಯಾರು ಮುರಿದರೋ ಅವರು ನಮಗಿಂತಲೂ ಹೆಚ್ಚಿನ ದುಃಖವನ್ನು ಮುಂದೆ ಅನುಭವಿಸುತ್ತಾರೆ ನೀನು ಎಳ್ಳಷ್ಟೂ ಚಿಂತೆ ಮಾಡಬೇಡ" ಎಂದಳು

"ನಾವೂ ಬೇಕಾದ ಪ್ರಯತ್ನ ಮಾಡಿದೆವು. ಏನೂ ಪ್ರಯೋಜನವಾಗಲಿಲ್ಲ ಇಷ್ಟರ ಮೇಲೆ ಅದೃಷ್ಟವಿದ್ದಂತಾಗುತದೆ ತಕ್ಷಣ ಊರಿಗೆ ಹೋಗಿ ರಂಗಯ್ಯನನ್ನು ಸಮಾಧಾನ ಮಾಡು ನಾಳೆಯೋ ಬೇರೆ ಕಡೆ ಒಳ್ಳೆ ಹುಡುಗೀನ ನೋಡಿ ಮದುವ ಮಾಡಬೇಕವ್ವ ಜೋಕೆ, ನಿದಾನ ಮಾಡಿಬಿಟ್ಟೀಯೆ! ಈಗ ಒದಗಿರುವ ಸಾಮಾನೆಲ್ಲಾ ಕಾಡುಪಾಲಾಗುತದೆ" ಎಂದು ವಿವೇಕ ಹೇಳಿದಳು ಕರಿಹೊನ್ನಮ್ಮ

ಬಹಳ ದುಃಖದಿಂದ ಮೌನವಾಗಿಯೇ ಒಬ್ಬರನ್ನೊಬ್ಬರು ಬೀಳ್ಕೊ

ಟ್ಟರು ಬಸವಯ್ಯ ಸಿದ್ದಮ್ಮನ ಜೊತೆಯಲ್ಲೇ ಹೊರಟ ಇಬ್ಬರೂ ಸಂಜೆಗೆ ಊರನ್ನು ತಲುಪಿದರು ಬಂದವರು ರಂಗಯ್ಯನ ಅವಸ್ಥೆಯನ್ನು ನೋಡಿ ತಲೆಯ ಮೇಲೆ ಕೈ ಇಟ್ಟುಕೊಂಡು ಕುಳಿತರು

"ರಂಗಯ್ಯನವರೇ, ಈಗ ಚಿಂತಿಸುತ್ತಾ ಕುಳಿತಿರುವುದಕ್ಕೆ ಸಮಯವಿಲ್ಲ ಬೇರೆ ಹೆಣ್ಣನ್ನು ಹುಡುಕಿ ತಕ್ಷಣದಲ್ಲೇ ಲಗ್ನ ಮಾಡುವುದು ಒಳ್ಳೆಯದು. ಲಿಂಗಿಯ ಹಂಬಲ ಮುಗಿಯಿತು ಅವಳಿಗೆ ಈ ದಿನ ನವಲೂರಿನಲ್ಲಿ ಬೇರೆ ವರನೊಡನೆ ಲಗ್ನವಾಯಿತು ನಿಮಗೆ ತಿಳಿದಿರುವ ಸ್ಥಳಗಳಿಗೆ ಹೋಗಿ ಬೇರೆ ಹುಡುಗಿಯನ್ನು ನೋಡೋಣ ಏಳಿ" ಎಂದು ಸಮಾಧಾನಪಡಿಸಿದ ಬಸವಯ್ಯ

"ಬಸವಯ್ಯನವರೇ, ಏನು ? ನಿಮ್ಮ ಮಾತು ವಿಚಿತ್ರವಾಗಿದೆ. ನನಗೆ ಇನ್ನು ಮದುವೆಯೆ ? ಅದರ ವಿಚಾರ ಮಾತ್ರ ಹೇಳಬೇಡಿ ನನಗೆ ಬಾಳು ಬೇಸರವಾಗಿದ" ಎಂದ ರಂಗಯ್ಯ "

ನ[illegible]ದಿಂದ ಹೊರಬಿದ್ದ ಸ್ನೇಹಿತನ ಮಾತನ್ನು ಕೇಳಿ ಬಸವಯ್ಯ ಒಳಗೆ [illegible]ತ್ತಾ ಸಕ್ಕವಸಂತೆ ನಟಿಸಿ—

"ಏನು ಹುಚ್ಚು ಮಾತು ಇದು ? ಯಾವನೋ ಒಬ್ಬ ಅವಿವೇಕಿ ಹೆಣ್ಣು ಕೊಡದೇ ಹೋದರೆ ಮದುವೆಯೇ ಬೇಕಿಲ್ಲವೆನ್ನುತ್ತೀರಿ ! ವಿದ್ಯಾವಂತರಾಗಿ ಈ ರೀತಿ ಹೇಳುತ್ತೀರಲ್ಲಾ !"

"ಹೆಣ್ಣು ಕೊಡದ ಮಾತಲ್ಲ ಬಸವಯ್ಯನವರೇ, ನನ್ನ ಹೃದಯ ವೇದನೆಯನ್ನು ಅರಿತಿದ್ದರೆ ನೀವು ಈ ರೀತಿ ಹೇಳುತ್ತಿರಲಿಲ್ಲ ನನ್ನನ್ನು ಎಂಥಾ ಸಂಕಟಕ್ಕೆ ಗುರಿ ಮಾಡಿದ ಆತ, ಆ ನೀಚನ ಹೆಸರನ್ನೂ ಕೂಡ ಬಾಯಿಯಿಂದ ಹೇಳಬಾರದು ಅವನೇನು ಮಾಡಿಯಾನು ? ನಮ್ಮ ಊರಿನವರಿರಲಿಲ್ಲವೆ ? ಒಂದು ಕೈ ನೋಡಿಯೇ ಬಿಡಬೇಕಾಗಿತ್ತು ಅಥವಾ ನನಗೇ ಹೇಳಿಕಳುಹಿಸಬೇಕಾಗಿತ್ತು."

"ನಾನು ಚೆನ್ನಾಗಿ ಅರಿತಿದ್ದೇನೆ. ಈಗ ಬೇರೆ ಹುಡುಗಿಯನ್ನು ಹುಡುಕಿ ಲಗ್ನ ಮಾಡಿಯೇ ತೀರಬೇಕು. ಕಾಲವಿಳಂಬ ಮಾಡಿದರೆ ಫಲವಿಲ್ಲ. ಜೀವನದಲ್ಲಿ ಅಂಥ ಸಮಸ್ಯೆಗಳು ಎಷ್ಟೋ ಬಂದೊದಗುತ್ತವೆ. ಅವುಗಳಲ್ಲಿ ಇದು ಒಂದು ಎಂದು ಭಾವಿಸಿ ತಳ್ಳಿಹಾಕಬೇಕು. ಅವನಿಗೆ

ಏನೇನು ಅನ್ನಬೇಕೋ ಅದೆಲ್ಲಾ ಅಂದದ್ದಾಯಿತು ಮಾನ ಕಳೆದು ಕೊಂಡಿರುವ ಮನುಷ್ಯ ಆತ. ಏನು ಮಾಡುವುದು ?".

"ನನ್ನ ಹೃದಯದಲ್ಲಿ ಉಂಟಾಗಿರುವ ಗಾಯದ ಯಾತನೆಯ ಜೊತೆಗೆ ಮತ್ತಷ್ಟು ಯಾತನೆಯನ್ನು ಮಾಡಲು ಹೊರಟಿದ್ದೀರಿ ತಿರುಗಿ ಅವನನ್ನು ಮನುಷ್ಯ ಅನ್ನುತ್ತೀರಲ್ಲಾ !"

"ನಿಮ್ಮ ಹೃದಯದಲ್ಲುಂಟಾಗಿರುವ ಗಾಯಕ್ಕೆ ಔಷಧವನ್ನು ಪತ್ತೆ ಮಾಡಿ ಅದನ್ನು ಮಾಯಿಸಲು ಹೊರಟಿದ್ದೇನೆ. ಅವನ ವಿಚಾರ ಮರೆತು ಬಿಡಿ ಈಗ. ಮುಂದ ನೋಡುವ."

"ಆ ಗಾಯಕ್ಕ ಜಗತ್ತಿನಲ್ಲಿ ಯಾವ ಔಷಧವೂ ಇಲ್ಲ ಈ ಜೀವ ವಿರುವವರೆಗೆ ಆದನ್ನು ಮಾಯಿಸಲು ಯಾರಿಂದಲೂ ಸಾಧ್ಯವಿಲ್ಲ. ವೃಥಾ ಶ್ರಮ ಇದೆಲ್ಲಾ ."

"ನೀವು ಹೇಳುವುದು ವೈರಾಗ್ಯ. ಸತ್ತವರ ಸಂಬಂಧಿಗಳು ಶವ ವನ್ನು ನೋಡುತ್ತಾ, ತಾವೂ ಆ ಸಮಯದಲ್ಲಿ ಪ್ರಪಂಚವನ್ನೇ ಮರೆತು ಪ್ರಾಣವನ್ನು ತೊರೆದುಕೊಳ್ಳುವಷ್ಟಕ್ಕೂ ಮನಸ್ಸು ಮಾಡುತ್ತಾರೆ. ಕಾಲ ಕಳೆದಂತೆಲ್ಲಾ ಸತ್ತವರ ಯೋಚನೆಯು ಮಾಯವಾಗುತ್ತದೆ ನಿಮ್ಮದೂ ಹಾಗೆಯೇ. ಶ್ರಮವಿಲ್ಲದೆ ಬಾಳು ಸಾಗುತ್ತದೆಯೆ ? "

"ಇದು ಚಿರವೈರಾಗ್ಯ ಕಾಲಗಳಾಗಲಿ, ಸನ್ನಿವೇಶಗಳಾಗಲಿ ಬದ ಲಾಯಿಸಲಾಗದ ವೈರಾಗ್ಯ ಬಸವಯ್ಯನವರೇ. ನೀವು ಏನೇ ಹೇಳಿ,ಒಂದು ವ್ಯಕ್ತಿಯ ಎಳೆಯ ಹೃದಯದಮೇಲೆ ಬಿದ್ದ ಮೊದಲ ಬರೆಯನ್ನು ಸಾಯುವ ತನಕ ಅವನ ಸ್ಮೃತಿಪಥದಿಂದ ಅಳಿಸಲಾಗದು "

"ನೀವು ಹೇಳುವುದೆಲ್ಲವೂ ಸರಿ. ಆದರೂ ನಮ್ಮ ಮಾತನ್ನು ದಯವಿಟ್ಟು ಕೇಳಿ ನಿಮ್ಮ ತಾಯಿಯವರೂ ಕೂಡ ನಿಮಗಿಂತ ಹೆಚ್ಚಾಗಿ ವ್ಯಥೆಪಡುತ್ತಿದ್ದಾರೆ; ನೀವು ಲಗ್ನ ಮಾಡಿಕೊಂಡರೆ ಅವರಿಗೂ ಒಂದು ತೆರನಾದ ಸಂತೋಷವಾಗಿ ಚಿಂತೆಯನ್ನು ಬಿಡುತ್ತಾರೆ. ಇಲ್ಲದಿದ್ದರೆ ಅವರಿಗೆ ಇದೇ ಮನೋರೋಗವಾಗಿ ಪರಿಣಮಿಸುತ್ತದೆ. ತಾಯ ಮನ ಸ್ಸಿನ ಶಾಂತಿಗಾದರೂ ಲಗ್ನ ಮಾಡಿಕೊಳ್ಳಬೇಕು. ನಮಗೇನು ವ್ಯಸನ ವಿಲ್ಲವೆಂದು ತಿಳಿದಿದ್ದೀರಾ ? ಏನೋ, ಆಗಬೇಕಾಗಿತ್ತು. ಹಡಗು

ದಡ ಸೇರುವಾಗ ಮುಳುಗಿದಂತಾಯಿತು ”

“ ನನ್ನನ್ನು ಒಳ್ಳೇ ಇಕ್ಕಟ್ಟಿಗೆ ಸಿಕ್ಕಿಸುತ್ತೀರಲ್ಲಾ ! ನನಗೊಂದೂ ತೋಚದು ಎಲ್ಲವೂ ನಿಮ್ಮಿಷ್ಟ ಕೊನೆಗೆ ಅನುಭವಿಸುವನು ನಾನೇ. ಏನು ಮಾಡುತ್ತೀರೊ ನಾನು ಕಾಣೆ

ಬಸವಯ್ಯನೂ ಇತರ ಸ್ನೇಹಿತರೂ ಹರ್ಷಚಿತ್ತರಾದರು ಸಿದ್ದಮ್ಮನಿಗೆ ತನ್ನ ಮಗ ಲಗ್ನವಾಗುವುದಕ್ಕೆ ಒಪ್ಪಿದ ಸಮಾಚಾರವನ್ನು ತಿಳಿಸಿದರು ಆದರೂ ಸಿದ್ದಮ್ಮನ ಮನಸ್ಸನ್ನು ಮುತ್ತಿದ್ದ ಚಿಂತೆ ಸಂಪೂರ್ಣವಾಗಿ ಸರಿಯಲಿಲ್ಲ. ಎಲ್ಲೊ ಮುಂಗಾರು ಮುಗಿಲಿನಿಂದ ಮುತ್ತಿದ್ದ ತಿಂಗಳು ಒಂದು ಅರೆಗಳಿಗೆ ಕಾಣಿಸಿಕೊಂಡು ಬೆಳಕನ್ನು ಚಲ್ಲಿದಂತಾಯಿತು ಮನಸ್ಸಿಗೆ. ಏನಾದರೂ ಮಾಡಿ ಈ ಮಂಗಳಕಾರ್ಯ ಪೂರೈಸಿರಪ್ಪ ಎಂದು ಮಗನ ಮಿತ್ರರನ್ನು ಆಕೆ ಬೇಡಿದಳು

ಮಾರನೆ ದಿನ ಬೆಳಗಾಗುವುದರೊಳಗೆ ಗೆಳೆಯರು ರಂಗಯ್ಯನನ್ನು ಕರೆದುಕೊಂಡು ವಧುವನ್ನು ಹುಡುಕಲು ಹೊರಟರು. ಮದುವೆಗೆ ತಕ್ಕ ವಯಸ್ಸಿನ ಹುಡುಗಿ ಇರುವ ಕೆಲವು ಹಳ್ಳಿಗಳನ್ನು ರಂಗಯ್ಯನಿಂದಲೇ ತಿಳಿದುಕೊಂಡರು. ಬಸವಯ್ಯ “ ರಂಗಯ್ಯನವರೇ, ಹುಡುಗಿಯನ್ನು ನೀವು ಒಪ್ಪಿದರೆ, ತಾಯಿ ತಂದೆಗಳ ಜೊತೆಯಲ್ಲಿ ನಾವು ಮಾತನಾಡಿ ತೀರ್ಮಾನಿಸುತ್ತೇವೆ ನಿಮ್ಮ ಅಭಿಪ್ರಾಯವೇನು ? ” ಎಂದ

ರಂಗಯ್ಯ ಕುಗ್ಗಿದ ಧ್ವನಿಯಿಂದ “ ನಾನು ಮೊದಲೇ ಹೇಳಲಿಲ್ಲವೆ? ನೀವು ಗೊತ್ತುಮಾಡಿದ ಹುಡುಗಿಯನ್ನು ಮದುವೆಯಾಗುತ್ತೇನೆ’’ಎಂದು. ಸ್ನೇಹಿತರೆಲ್ಲರೂ ತಮ್ಮ ತಮ್ಮಲ್ಲೇ ಮಾತನಾಡಿಕೊಂಡು ಹೊರಟರು. ಊರಿನ ಕೆಲವು ಮುಖಂಡರನ್ನೂ ಸಿದ್ದಮ್ಮನನ್ನೂ ಸಂಗಡ ಕರೆದುಕೊಂಡರು. ಸಿದ್ದಮ್ಮನ ಮಾತಿನಂತೆ ಒಂದೆರಡು ಊರುಗಳನ್ನು ಹೊಕ್ಕರು. ಕೊನೆಗೆ ಶಿವನಹಳ್ಳಿ ದಾಸಪ್ಪನ ಮಗಳಿಗೆ ಮದುವೆಯ ವಯಸ್ಸಾಗಿದೆ. ರೂಪವತಿಯೂ ಹೌದು ಎಂದು ತಿಳಿಯಿತು. ನೇರವಾಗಿ ಉರಿಬಿಸಿಲಿನಲ್ಲೇ ಎಲ್ಲರೊಡನೆ ಶಿವನಹಳ್ಳಿಯನ್ನು ತಲುಪಿ ದಾಸಪ್ಪನ ಮನೆಹೊಕ್ಕರು. ಅಥಿತಿ ಸತ್ಕಾರವೂ ಆಯಿತು ಲಕ್ಷ್ಮಿಯನ್ನು ಕರೆಸಿ ನೋಡಿಯೂ ಆಯಿತು. ಒಳ್ಳೆ ರೂಪವತಿ, ರೂಪಕ್ಕೆ ತಕ್ಕ ಗುಣವೂ

ಇದ್ದಂತೆ ಹುಡುಗಿಯ ಮುಖ ಚರ್ಯೆಯಿಂದ ಭಾಸವಾಗುತ್ತಿತ್ತು. ಸ್ನೇಹಿತರೂ ಸಿದ್ದಮ್ಮನೂ ಕನ್ಯೆಯನ್ನು ತಂದುಕೊಳ್ಳುವುದರಲ್ಲಿ ತಮ್ಮ ಒಪ್ಪಿಗೆಯನ್ನು ವ್ಯಕ್ತಪಡಿಸಿದರು ಮಾತಾಪಿತೃಗಳ ಸಂಗಡ ಎಲ್ಲವನ್ನೂ ನಿಷ್ಕರ್ಷಿಸಿ ಲಗ್ನ ಕಟ್ಟಿಸಿಯೇ ಬಂದರು. ಲಗ್ನಪತ್ರಿಕೆಯನ್ನು ಸ್ನೇಹಿತರೆಲ್ಲರೂ ನೇರಿ ಹಸ್ತಾಕ್ಷರದಲ್ಲೇ ಬರೆದು, ನೆಂಟರಿಷ್ಟರಿಗೆಲ್ಲಾ ಕಳುಹಿಸಿದರು. ಮದುವೆಯ ಚಪ್ಪರವನ್ನು ಸ್ನೇಹಿತರೆಲ್ಲರೂ ತಳಿರು ತೋರಣಗಳಿಂದ ಶೃಂಗರಿಸಿದರು ಅವರನ್ನು ಮುತ್ತಿದ್ದ ಚಿಂತೆ ಸಂಪೂರ್ಣವಾಗಿ ಬಿಟ್ಟಂತೆ ಮಾತ್ರ ಕಾಣುತ್ತಿರಲಿಲ್ಲ

ರಂಗಯ್ಯ ಯಾವ ಕಾರ್ಯಕ್ಕೂ ಕೈ ಹಾಕಲಿಲ್ಲ. ಬೆಪ್ಪು ಹಿಡಿದವನಂತೆ ಒಂದು ಕೋಣೆಯಲ್ಲಿ ಕುಳಿತಿದ್ದ ಮನಸ್ಸು ನಾನಾ ವಿಧವಾಗಿ ಗರಿಗೆದರಿ ಹಾರಾಡುತ್ತಿದೆ ಲಿಂಗಿಯ ಆಕೃತಿ, ಹುಡುಗಿ ತನ್ನ ಸಂಗಡ ಆಡುತ್ತಿದ್ದ ಮುದ್ದು ಮಾತುಗಳು ಮನಸ್ಸಿನ ಕಣ್ಣಮುಂದೆ ಕಾಣುತ್ತಲೇ ಇವೆ ಮದುವೆ ವಿಜೃಂಭಣೆಯಿಂದ ಜರುಗಿತು

ಮದುವೆ ಮುಗಿದ ನಂತರ ಬಂಧು ಮಿತ್ರರು ರಂಗಯ್ಯನಿಗೂ ಆತನ ತಾಯಿಗೂ ಹೇಳಿ ಹೊರಟುಹೋದರು. ಬಸವಯ್ಯ ಹೋಗುವುದಾಗಿ ತಿಳಿಸಲು ರಂಗಯ್ಯನು ಕೆಲವು ದಿನಗಳಾದರೂ ಇದ್ದು ಹೋಗಬೇಕೆಂದು ಕೇಳಿಕೊಂಡ.

"ನಾನು ಒಬ್ಬಂಟಿಗ ನಾನು ಈಗಲೇ ಹೊರಡುತ್ತೇನೆ ನೀವು ಯಾವ ಯೋಚನೆಯನ್ನೂ ಮನಸ್ಸಿಗೆ ಹಚ್ಚಿಕೊಳ್ಳಬೇಡಿ" ಎಂದ ಬಸವಯ್ಯ.

"ಹಾಗಾದರೆ ನೀವು ಹೊರಡಿ ಇನ್ನು ಕೆಲವು ದಿನಗಳು ಬಿಟ್ಟು ಬನ್ನಿ."

ಬಸವಯ್ಯ ಸಿದ್ದಮ್ಮನಿಗೆ ಹೇಳಿ ಹೊರಟ. ಆಕೆಯು ಮೌನದಿಂದ ಕಣ್ಣೀರು ಸುರಿಸುತ್ತಾ ತಲೆಯಲ್ಲಾಡಿಸುವ ಸಂಜ್ಞೆಯಿಂದಲೇ 'ಹೋಗಿ ಬಾರಪ್ಪ' ಎಂದು ಬೀಳ್ಕೊಟ್ಟಳು.

ರಂಗಯ್ಯ ತಾನೊಬ್ಬನೇ ಉಳಿದುದರಿಂದ ಹೃದಯದ ಆಳದಲ್ಲಿ ಅಡಗಿದ್ದ ಚಿಂತೆ ಮೆಲ್ಲನೆ ತಲೆ ಎತ್ತಿತು. ಸದಾ ಇಲ್ಲದಿದ್ದರೂ ಒಮ್ಮೊಮ್ಮೆ

ಇದ್ದಕ್ಕಿದ್ದ ಹಾಗೆ ಲಿಂಗಿಯ ದೃಶ್ಯವೂ ರಾಮನಗರದ ಪ್ರಕೃತಿಸೌಂದರ್ಯವೂ ಗೋಚರಿಸಿ ಮನಸ್ಸಿಗೆ ಅಶಾಂತಿಯನ್ನುಂಟುಮಾಡುತ್ತಿತ್ತು 'ಬಾಳು ಮೊಳಕೆಯಲ್ಲೇ ಇಷ್ಟು ಕಠಿಣವಾಗಿದೆಯಲ್ಲಾ ! ಇನ್ನು ಮುಂದೆ ಸಾಗಿದರೆ ಇನ್ನೆಷ್ಟು ತೊಡರುಗಳು ಜೀವನದಲ್ಲಿ ಅಡ್ಡಬರಬಹುದು ?' ಎಂದು ಚಿಂತಿಸುತ್ತಿದ್ದ ಆ ದಿನ ರಾತ್ರೆ ನಿದ್ರೆ ಹತ್ತಲಿಲ್ಲ ಮನೆಯಿಂದ ತುಸು ದೂರ ಹೊರಟ. ಜಗತ್ತೇ ನಿದ್ರಿಸುತ್ತಿತ್ತು. ಗಾಳಿ ನಿಶ್ಯಬ್ದವಾಗಿ ಬೀಸುತ್ತಿತ್ತು ರಂಗಯ್ಯ ಊರ ಬಯಲಿನಲ್ಲಿ ಕುಳಿತು ಹಾಗೆಯೇ ಅನಂತವಾಗಿ ಹಬ್ಬಿರುವ ನೀಲಾಕಾಶವನ್ನು ನೋಡಿದ ಚಂದ್ರನು ರಾರಾಜಿಸುತ್ತಿದ್ದ. ಮಿನುಗುಟ್ಟುವ ಕೋಟ್ಯಾನುಕೋಟಿ ತಾರೆಗಳನ್ನು ಎವೆಇಕ್ಕದೆ ನೋಡುತ್ತಿರಲು, ಇದ್ದಕ್ಕಿದ್ದಹಾಗೆ ಒಂದು ನಕ್ಷತ್ರ ನೀಲಾಕಾಶದಿಂದ ಕಳಚಿ, ಬೆಂಕಿಯನ್ನು ಎರಚುತ್ತಾ, ಬಹುದೂರ ಹರಿಯುತ್ತಾ ಹೊರಟು, ಎಲ್ಲಿಯೋ ಭೂಮಿಯಮೇಲೆ ಬಿದ್ದುಹೋದಂತೆ ಕಂಡಿತು. ಈ ವಿಚಿತ್ರವನ್ನು ನೋಡುತ್ತಾ ಸ್ವಲ್ಪ ಹೊತ್ತು ಚಿಂತೆಯನ್ನು ಮರೆತ ರಂಗಯ್ಯ ಬೆಳಕನ್ನು ಎರಚುತ್ತಿದ್ದ ಚಂದ್ರನನ್ನು ಆಗಾಗ್ಗೆ ತುಂಡು ಮೋಡಗಳು ಮುಸುಕಿ ಕಾಂತಿಹೀನನನ್ನಾಗಿ ಮಾಡುತ್ತಿದ್ದುವು. ಮರದಲ್ಲಿ ಕುಳಿತಿದ್ದ ಹಕ್ಕಿಯೊಂದು ಪಟಪಟನೆ ರೆಕ್ಕೆಯನ್ನೊದರಿ ಆ ರಾತ್ರಿಯ ಶಾಂತಿಯನ್ನು ಕದಡುತ್ತಿತ್ತು. ರಂಗಯ್ಯನು ಬೆಚ್ಚಿಬಿದ್ದು ಮೇಲೆದ್ದು ಮನೆಗೆ ಹೋಗಿ ಹಾಸಿಗೆಯ ಮೇಲೆ ಮಲಗಿಕೊಂಡನು.

೩

ಹೊನ್ನಯ್ಯ ಬಲವಂತದಿಂದ ಮಗಳಿಗೆ ಮದುವೆ ಮಾಡಿಸಿ ನೂತನ ವಧೂವರರನ್ನು ರಾಮನಗರಕ್ಕೆ ಕರೆತಂದ. ಆತನ ಹೆಂಡತಿಯೂ ತಾಯಿಯೂ ಚಿಂತೆಯಿಂದ ಮೌನವನ್ನು ತಾಳಿದ್ದರು ಗಂಡನ ಆಜ್ಞೆಯಂತೆ ತಿಮ್ಮಕ್ಕ ಮನೆಯ ಕೆಲಸಗಳನ್ನು ಮಾಡುತ್ತಿದ್ದಳೇ ಹೊರತು ಮೊದಲಿನಂತೆ ಸ್ವೇಚ್ಛೆಯಾಗಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ತನ್ನ ಭವಿಷ್ಯದ ಬಾಳಿನಲ್ಲಿ ಆಕೆಗೆ ಯಾವ ಆಶಾದೀಪವೂ ಕಾಣಲಿಲ್ಲ. ಆಕೆ ಮನೆಗೆ ಬಂದ ಅಳಿಯನನ್ನು ಅಸಡ್ಡೆಯಿಂದ ಕಾಣುತ್ತಿದ್ದಳು.

ಲಜ್ಜಾಸ್ವಭಾವದ ಲಿಂಗಿಗೆ ಅಪರಿಚಿತನಾದ ಗಂಡನಲ್ಲಿ ಸರಳತೆಯಿಂದ ನಡೆದುಕೊಳ್ಳುವುದು ಸಾಧ್ಯವಾಗಲಿಲ್ಲ ಗಂಡನ ಮನೆಗೆ ಹೋಗುವ ಸಂಭವ ಬಂದರೆ ಮೂರು ದಿನಗಳಿಗೆ ಮುಂಚೆಯೇ ಆಕೆಯ ಗೋಳು ಪ್ರಾರಂಭವಾಗುತ್ತಿತ್ತು "ಅವ್ವ ನಾನು ಇನ್ನು ಮೂರು ದಿನ ಬಿಟ್ಟು ಹೋಗುವೆ ಅಪ್ಪನಿಗೆ ಹೇಳಬೇಕು" ಎಂದು ತಾಯಿಗೆ ಒತ್ತಾಯಪಡಿಸುತ್ತಿದ್ದಳು ಮೂರು ದಿನ ಬಿಟ್ಟು ಬನ್ನಿ ಎಂದು ಬೀಗನಿಗೆ ಉಪಚಾರದ ಒಂದೆರಡು ಮಾತುಗಳನ್ನಾಡಿ ಕಳಹಿಸುತ್ತಿದ್ದ ಹೊನ್ನಯ್ಯ ಬೀಗನು ಮನಸ್ಸಿಲ್ಲದ ಮನಸ್ಸಿನಿಂದ ನವಿಲೂರ ಕಡೆ ಕಾಲು ತಿರುಗಿಸುತ್ತಿದ್ದ

ಬಸಮ್ಮ ತಾನೇ ಒಂದು ದಿನ ಸೊಸೆಯನ್ನು ಕರೆತರಲುಹೋದಳು. ಹೊನ್ನಯ್ಯ ಏನೋ ಮಗಳ ವೈಗೆಹುಷಾರಿಲ್ಲ. ಇನ್ನೊಂದು ವಾರ ಬಿಟ್ಟು ಬನ್ನಿ ಎಂದು ಸಬೂಬು ಹೇಳಿದ್ದು ಕೇಳಿ ಆಕೆ ನಿರಾಶಳಾದಳು. ಬರುವಾಗ ಹೊನ್ನಯ್ಯನಿಗೆ "ಏನಿದು, ನೀವು ಹಣವಂತರೆಂತಲೇ, ಕಂಡವರ ಮನೆ ಗಂಟು ತಂದು ನಾವು ಮದುವೆ ಮಾಡಿಲ್ಲವೆ? ಹಿರಿ ಸೊಸೆ ಮನೆಗೆ ಬಂದು ಉದ್ಧಾರ ಮಾಡುತಾಳೆ ಅಂತ ನಾವು ಆಶೆ ಇಟ್ಟುಕೊಂಡಿದ್ದರೆ, ನಿಮ್ಮ ಮಗಳು ಬೇರೆ ಏನೇನೊ ನೆವ ತೆಗೆದು ಮೊಂಡಾಟ ಹೂಡುತಾಳೆ. [ಸ್ವಲ್ಪ ವಿವೇಕ ಹೇಳಿ, ಗಂಡನ ಮನೆಯಲ್ಲಿ ನ್ಯಾಯವಾಗಿ ಬಾಳಲಿ" ಎಂದು ಸಿಡುಕಿ ಉಪವಾಸ ವ್ರತಹಿಡಿದು ಹೋದುದುಂಟು ಹೊನ್ನಯ್ಯ ಸಿಡುಕಾಗಲಿಲ್ಲ ತನ್ನ ತಪ್ಪು ತನಗೇ ಮೂಲವಾಯಿತೆಂದು ಅರಿತ ಬೀಗಿತ್ತಿ ಊರ ಹೆಬ್ಬಾಗಿಲನ್ನು ಬಿಟ್ಟಮೇಲೆ ಮನೆಗೆ ಬಂದು ಮಗಳಿಗೆ "ಏನು ತಾಯಿ, ಗಂಡನ ಮನೆ ಅಂದರೆ ನಿಮ್ಮ ಮನೆ ಅಲ್ಲವೇನಮ್ಮ? ಹೀಗೆ ಹೋಗದೆ ಹಟಮಾಡಿದರೆ ಹೇಗೆ" ಎಂದು ಭೋಧಿಸುತ್ತಲೇ ಇದ್ದ. ಇವನ ಭೋಧನೆಯ ಮಾತುಗಳು ಲಿಂಗಮ್ಮನ ಮನಸ್ಸನ್ನು ಮುಟ್ಟುತ್ತಲೇ ಇರಲಿಲ್ಲ ಲಿಂಗಮ್ಮ ಮನಬಿಚ್ಚಿ ತಂದೆಯ ಸಂಗಡ ಮಾತನಾಡುವುದನ್ನೇ ಬಿಟ್ಟಳು. ಹಾಗೆ ತಂದೆ ಹೇಳಿದಾಗ ಮೌನವ್ರತ ತಾಳಿ ತನ್ನ ಪಾಡಿಗೆ ತಾನು ದನಕರುಗಳಿಗೆ ಹುಲ್ಲು ಹಾಕುವುದು, ಕೊಟ್ಟಿಗೆಯಿಂದ ಕಸ ಬಾಚಿ ತಿಪ್ಪೆಗೆ ಸಾಗಿಸುವುದರಲ್ಲಿ ತೊಡಗುತ್ತಿದ್ದಳು ಆಟಪಾಟವಾಡಿಕೊಂಡು ಸ್ವೇಚ್ಛೆಯಾಗಿದ್ದ ಲಿಂಗಿಗೆ ಗಂಡನ ಮನೆ ಸೆರೆಮನೆಯಂತೆ

ಕಾಣುತ್ತಿತ್ತು.

ಲಿಂಗಿಗೆ ವಯಸ್ಸಾದಂತೆಲ್ಲಾ ತಾನು ಗಂಡನ ಮನೆಗೆ ಹೋಗು ವುದಿಲ್ಲವೆಂದು ಹಟಮಾಡಲು ಆರಂಭಿಸಿದಳು ಕೊನೆಕೊನೆಗೆ ಧೈರ್ಯ ತಂದುಕೊಂಡು, ಇಷ್ಟವಿಲ್ಲದ ಮದುವೆಯನ್ನು ಬಲವಂತವಾಗಿ ಮಾಡಿದ್ದು ತಪ್ಪೆಂದು ತಂದೆಯಸಂಗಡ ವಾದಿಸುತ್ತಿದ್ದಳು.ವಯಸ್ಸಾದ ಮಗಳ ವಿವೇ ಕಯುತವಾದ ವಾದವನ್ನು ಕೇಳಿದಾಗ ತಂದೆ ಬಾಯಿಗೆ ಬೀಗ ಹಾಕಿಕೊ ಳ್ಳುತ್ತಿದ್ದ ಬೇರೆ ಮಾರ್ಗವಿಲ್ಲದೆ ಆಕೆಯನ್ನು ಉಪಾಯದಿಂದ ಸಂತೈಸಿ, ಗಂಡನಮನೆಗೆ ತಾನೇ ಜೊತೆಯಲ್ಲಿ ಬಹಳ ದಿನಕ್ಕೊಮ್ಮೆ ಕರೆದುಕೊಂಡು ಹೋಗಿ ಬಿಟ್ಟು ಬರುತ್ತಿದ್ದ ತೌರುಮನೆಯಿಂದ ಹೊರಡುವಾಗಲೇ ಅಶಾಂತಿ ಯನ್ನು ಮಡಲಿಗೆ ತುಂಬಿಕೊಂಡೇ ಹೋಗುತ್ತಿದ್ದಳು ಲಿಂಗಮ್ಮ ತಂದೆ ಯು ಹಿಂದಿರುಗಿ ಬರುವಾಗ " ಅಪ್ಪ ನಾಳಿದ್ದು ಖಂಡಿತ ಬಂದು ಕರೆದು ಕೊಂಡು ಹೋಗಬೇಕು—ಇಲ್ಲದಿದ್ದರೆ ನೋಡು " ಎಂಬ ಮಾತು ಪ್ರತಿ ಸಲವೂ ಲಿಂಗಿಯ ಬಾಯಿಂದ ತಪ್ಪುತ್ತಿರಲಿಲ್ಲ ಹೊನ್ನಯ್ಯನೂ ಕೂಡ ನಾಲ್ಕೈದು ದಿನಗಳು ಬಿಟ್ಟು ಹೋಗಿ ಮತ್ತೆ ಮಗಳನ್ನು ಕರೆದುಕೊಂಡು ಬರುತ್ತಲೇ ಇದ್ದ. ಲಿಂಗಿ ತನ್ನ ಗಂಡನ ಮನೆಯಲ್ಲಿ ಬೇಡನ ಬಲೆಗೆ ಸಿಕ್ಕಿಬಿದ್ದ ಪಾರಿವಾಳದಂತೆ ನಾಲ್ಕೈದು ದಿನಗಳನ್ನು ನಾಲ್ಕೈದು ಯುಗ ಗಳಂತೆ ಕಳೆಯುತ್ತಿದ್ದಳು.

ಮುಂಜಾನೆಯಾಗುತ್ತಲೆ ಬಸಮ್ಮ ಸೊಸೆಯನ್ನು ನಿದ್ದೆಯಿಂದ ಎಚ್ಚರಿಸಿ " ನೋಡು, ಗೋವುಗಳನೆಲ್ಲಾ ಆಚೆ ಕೊಟ್ಟಿಗೆಗೆ ಕಟ್ಟು-ಸೆಗಣಿ ಯನ್ನೆಲ್ಲಾ ಬಾಚಿ ತಿಪ್ಪೆಗೆ ಹಾಕು- ಆ ಕುಳ್ಳ ಹಸುವಿನ ಹಾಲು ಹಿಂಡು, ತಣಿಗೆ ತಪ್ಪಲೆ ಎಲ್ಲಾ ಹುಣಿಸೆ ಹುಳಿ ಹಾಕಿ ಫಳಫಳ ಅನ್ನುವಂಗೆ ತಿಕ್ಕಿ ಬೆಳಗು '' ಎಂದು ಆಜ್ಞೆ ಮಾಡುತ್ತಿದ್ದಳು ಲಿಂಗಮ್ಮ ಅತ್ತೆಯ ಮಾತಿನ ದರ್ಪಕ್ಕೂ ರೀವಿಗೂ ಬೆದರಿ ದಡಬಡನೆ ಚಾಪೆಯಿಂದೆದ್ದು ದನಕರುಗಳ ನ್ನೆಲ್ಲಾ ಕೊಟ್ಟಿಗೆಗೆ ಕಟ್ಟುತ್ತಿದ್ದಳು ನಂತರ ಪರಕೆಯನ್ನು ಕೈಯಲ್ಲಿ ಹಿಡಿದು ದನಗಳ ಕೊಟ್ಟಿಗೆ ಕಸವನ್ನು ಬಾಚಿ ಮಕ್ಕರಿಗೆ ತುಂಬಿ ತುಂಬಿ ಊರಹೊರಗಿದ್ದ ತಿಪ್ಪೆಗೆ ಹೊತ್ತು ಸುರಿದು ಬರುತ್ತಿದ್ದಳು ತಂದೆ ಮನೆ ಯಲ್ಲಿ ಇಂಥ ಕಷ್ಟದ, ಬೆನ್ನು ನೋಯುವ ಕೆಲಸವನ್ನೆಂದೂ ಆಕೆ

ಮಾಡಿರಲಿಲ್ಲ ಇದು ಗಂಡನ ಮನೆ, ಹೇಳಿದ ಹಾಗೆ ಕೇಳಬೇಕೆನ್ನುವ ಭೀತಿ ಬೇರೆ ಅವಳ ಮನದಲ್ಲಿ ನಾಟಿ, ತನಗೆ ಸಾಕಾಯಿತೆನ್ನದೆ ಮೈಯ ಶಕ್ತಿ ಮೀರಿ ದುಡಿಯುತ್ತಿದ್ದಳು. ಹತ್ತು ಮಕ್ಕರಿ ಕಸವನ್ನು ಹೊತ್ತು ಬೆನ್ನುಮೂಳೆ ನೋಯುತ್ತಿದ್ದರೂ ಕಣ್ಣೀರು ತಂದುಕೊಂಡವಳಲ್ಲ ದನಗಳ ಹಾಲು ಹಿಂಡಿ ಅತ್ತಮ್ಮನ ಕೈಗೆ ಹಾಲು ತುಂಬಿದ ಚೆಂಬನ್ನು ಕೊಟ್ಟಾಗ "ಏನೆ ಇದು? ನೀನು ದನದ ಕೆಚ್ಚಲಿಗೆ ಕೈಹಾಕಿದರೆ ಹಾಲು ಇಂಗಿ ಹೋಗ್ತಾ ಇದೆ" ಎಂದು ದಿನವೂ ಬಸಮ್ಮ ಗೊಣಗುತ್ತಲೆ ಇದ್ದಳು ಬಸಮ್ಮ ರೊಟ್ಟಿ ಹಾಕಿ ಮೊಸರು ಹೊಯ್ದು ತನ್ನ ಗಂಡು ಮಕ್ಕಳಿಗೆ ಬೆಳಗಿನಲ್ಲಿ ಉಣಿಸಿ ಹೊಲಗದ್ದೆಯ ಕೆಲಸಕ್ಕೆ ಕಳುಹಿಸುತ್ತಿದ್ದಳು ಮುತ್ತಣ್ಣ ಸೊಸೆಯ ದುಡಿಮೆಯನ್ನು ಕಂಡು ಒಂದೊಂದು ದಿನ ಮರುಗಿ 'ಪಾಪ ಇನ್ನೂ ಬಲ ಸಾಲದು ಈ ಒರಟು ಕೆಲಸ ಮಾಡಲಿಕ್ಕೆ' ಅಂದುಕೊಳ್ಳುತ್ತಿದ್ದ. ಒಂದು ದಿನ ಲಿಂಗಮ್ಮ ಕಲಸದಲ್ಲಿ ತೊಡಗಿದ್ದಾಗ "ಅಮ್ಮ ನೀನೂ ಏನಾದರು ಹೊಟ್ಟೆಗೆ ನೋಡಿಕೊಂಡು ಕೆಲಸ ಮಾಡು" ಎಂದ ಕೋಣೆ ಒಳಗೆ ಅಕ್ಕಿ ಬೇಯಿಸುತ್ತಿದ್ದ ಬಸಮ್ಮನ ಕಿವಿಯ ಮೇಲೆ ಗಂಡನ ಮಾತುಗಳು ಬಿದ್ದವು—ಅಕ್ಕಿ ಕೊತಕೊತನೆ ಬೇಯುತ್ತಿತ್ತು ಆಕೆಗೆ ಮಾತು ಅಸ್ಪಷ್ಟವಾಗಿ ಕೇಳಿಸಿತ್ತು 'ನೋಡಿದ, ಸೊಸೆಯಮೇಲೆ ಎಷ್ಟು ಪ್ರೀತಿ. ತಡಿ ಅದೇನು ಕೇಳ್ತೀನಿ' ಎಂದು ಅನ್ನ ಕಲಕಲು ಹಿಡಿದಿದ್ದ ಸೌಟನ್ನೇ ಹಿಡಿದು ಲಿಂಗಮ್ಮನ ಹತ್ತಿರ ಬಂದು "ಅದೇನೆ ನಿಮ್ಮ ಮಾವ ಬಲು ಮರುಕ ಪಡುತಿದ್ದರು ನಿನ್ನ ನೋಡಿ? ಪಾಪ, ಎಳೆಮಗು, ಬಾಳೆಹಣ್ಣಿನ ಗುಡಾಣದಲ್ಲಿ ಬೆಳೆದದ್ದು— 'ಕೆಲಸ ಮಾಡಬೇಡ' ಅಂದರೆ?" ಎಂದು ಸಿಡಿದು ಕೇಳಿದಳು. ಲಿಂಗಮ್ಮ ಪಾತ್ರೆಗಳನ್ನು ತೆಂಗಿನ ಚಗರೆಯಿಂದ ಉಜ್ಜುತ್ತಾ ಬಾಯಿ ಬಿಡಲಿಲ್ಲ "ಲಿಂಗಿ, ಯಾರನೆ ನಾನು ಕೇಳುತಾ ಇರೋದು?" ಎಂದು ಪುನಃ ಆರ್ಭಟಿಸಿದಳು ಅತ್ತೆಯ ಅವತಾರ ನೋಡಿ ಲಿಂಗಮ್ಮ 'ಇವಳಿಗೇನು ದೆವ್ವ ಹಿಡಿದಿದೆಯೆ?' ಎಂದು ಮನದಲ್ಲಿ ಗೊಣಗಿದಳು. ಉತ್ತರ ಕೊಟ್ಟರೆ ಇನ್ನೇನು ಮೈಮೇಲೆ ಬೀಳಬಹುದೋ ಏನೋ ಎಂದು ಮನಸ್ಸು ತಲ್ಲಣಿಸಿತು. ಅತ್ತೆಯು ನಿಂತಿದ್ದ ತರಹ ಲಿಂಗಮ್ಮನ ಕಣ್ಣಿಗೆ ಭಯವನ್ನು

ಕಟ್ಟುತಿತ್ತು. ತಡೆದು ತಡೆದು, ಉತ್ತರಿಸಿದಳು "ಏನಾದರೂ ಹೊಟ್ಟೆಗೆ ನೋಡಿಕೊಂಡು ಕೆಲಸ ಮಾಡು" ಎಂದರು' ಎಂದು.

ಬಸಮ್ಮ ಮೈಯನ್ನು ಒದರಿಕೊಂಡು "ನಿನ್ನನ್ನು ಯಾರೇ ತಿನ್ನ ಬೇಡ, ಉಣ್ಣಬೇಡ ಎಂದವರು? ನಿಮ್ಮಪ್ಪನ ಮನೇಲಿ ಗೂಳಿ ಕೂಗು ವುದರಲ್ಲೇ ಹಾಲು ಮೊಸರು ತಿನ್ನುತಿದ್ದಯೋನೊ! ಹೋಗಲಿ ಬಾ ನೀನೊಂದು ತುತ್ತು ತಿಂದು ಹೊಲಕ್ಕೆಹೋಗಿ ಸತ್ತೆ ಗಿತ್ತೆ ಆಯ್ದು ಹಸನು ಮಾಡು ಹೊಲ ಉಳುಮೆ ಮಾಡುತಾ ಇದಾರೆ ಗಂಡಸರು" ಎಂದಳು ಲಿಂಗಮ್ಮ ಬಾಯಿಬಿಡಲಿಲ್ಲ ರೊಟ್ಟಿ ತಿನ್ನಲಿಕ್ಕೆ ಹೋಗದ ಹೋದರೆ ಮತ್ತೆಲ್ಲಿ ಸಿಡಿದುಬಿದ್ದಾಳೆಂದು ಬಗೆದು ಮುಖ ಕೈಕಾಲು ತೊಳೆದು ಕೊಂಡು ಮನೆಗೆ ಹೋದಳು. ಬಸಮ್ಮ ಒಂದು ರೊಟ್ಟಿಯನ್ನು ಸೊಸೆಯ ಕೈಗಿಟ್ಟು "ಗಬಗಬನೆ ತಿಂದು ಓಡೆ ಹೊಲಕ್ಕೆ" ಎಂದು ಬೆದರಿಕೆಯ ನುಡಿಯನ್ನೇ ಆಡಿದಳು

ಲಿಂಗಮ್ಮ ರೊಟ್ಟಿಯಲ್ಲಿ ಒಂದು ಚೂರು ತಿಂದು ನೀರು ಕುಡಿದು ಹೊಲಕ್ಕೆ ಹೋಗಿ ಮಧ್ಯಾಹ್ನ ತಿರುಗುವವರೆಗೂ ಆ ಉರಿಬಿಸಿಲಿನಲ್ಲಿ ಸತ್ತೆ ಸದೆ ಆಯ್ದು ಸುರಿದು ಸಾಕಾಗಿ ಹೋದಳು. ತನ್ನನ್ನು ಇಂಥಾ ಅವಸ್ಥೆಗೆ ತನ್ನ ಅಪ್ಪ ಸಿಕ್ಕಿಸಿದನಲ್ಲಾ ಎಂದು ಉತ್ತಿದ್ದ ಮಣ್ಣಿಗೆ ಒಂದೆ ರಡು ತೊಟ್ಟು ಕಣ್ಣೀರನ್ನು ಬೆರಸಿದಳು ಉಳುತ್ತಿದ್ದ ನಾಗಯ್ಯ ಬಿಸಿಲಿಗೆ ಬಾಡಿಹೋಗಿದ್ದ ಹೆಂಡತಿಯ ಮುಖವನ್ನು ಆಗಾಗ್ಗೆ ನೋಡಿ ತನ್ನೊಳಗೆ ಮರುಗುತ್ತಿದ್ದ. ತಾನೇನು ಮಾಡಿಯಾನು? ಎಲ್ಲಾ ಅವ್ವನ ಕಾರಬಾರು. ಎಳೆ ಪ್ರಾಯದ ಗಂಡ ಹೆಂಡಿರು ತಂದೆ ತಾಯಿಯರ ಆಧೀನದಲ್ಲಿ ತಾವಿರಬೇಕಾಗಿರುವುದೆಂಬುದನ್ನು ಮನಗಂಡು ಮೂಕ ನಂತಿದ್ದ. ಸಂಜೆಯಾಯಿತೆಂದರೆ ಎಳೆಗರುಗಳನ್ನು ಹಿಡಿದು ಕೊಟ್ಟಿಗೆಗೆ ಬಿಗಿಯುವುದು, ಹಾಲುಕೊಡುವ ದನಗಳಿಗೆ ಹುರುಳಿ ನುಚ್ಚು ರುಬ್ಬಿ ತಿನ್ನಿಸುವುದು,— ಆವಕ್ಕೆಲ್ಲಾ ನೀರು ತೋರುವುದು, ಹುಲ್ಲು ತಂದು ಹಾಕುವುದು ಈ ಕೆಲಸಗಳು ಲಿಂಗಮ್ಮನ ಕತ್ತಿಗೆ ಕಟ್ಟಿದ್ದವು ಕೆಲಸ ಮಾಡಿಶರೀರ ನೊಂದಾಗ ತನ್ನಪ್ಪ ಬರಲಿಲ್ಲವಲ್ಲ,ಯಾರಿಂದಲಾದರೂ ಹೇಳಿ ಕಳುಹಿಸುವ ಎಂದರೆ ತವರ್ಮ್ಮರ ಕಡೆಯವರ ಸುಳಿವೇ ಕಾಣಲಿಲ್ಲವಲ್ಲ

ಎಂದು ಅವಳು ಒಮ್ಮೊಮ್ಮೆ ನಿಟ್ಟುಸಿರು ಬಿಡುತ್ತಿದ್ದಳು.

ಆಷಾಢಮಾಸ ಬಂತು. ಹೊಲ ಗದ್ದೆಗಳ ಉಳುಮೆ ಕೆಲಸ ಭರದಿಂದ ಸಾಗುತ್ತಿದೆ–ಬಿತ್ತನೆ ಕಾಲ ಸಮೀಪಿಸಿತು–ಲಿಂಗಮ್ಮ ಬೆಳಗಿನಿಂದ ಬೈಗಿನವರೆಗೆ ನೆತ್ತಿ ಕೊರೆಯುತ್ತಿರುವ ಬಿಸಿಲಿನಲ್ಲಿ ಮೂಕ ಪ್ರಾಣಿಯಂತೆ ಕೆಲಸ ಮಾಡತೊಡಗಿದಳು. ಸೊಸೆಯ ದುಡಿಮೆ ನೋಡಿ ಮುತ್ತಣ್ಣನ ಮನ ಮರುಕಗೊಂಡಿತ್ತು. ಆದರೂ ಸುಮ್ಮನೆ ಕುಳಿತಿರಮ್ಮ ಅನ್ನುವ ಹಾಗಿರಲಿಲ್ಲ. ಒಳ್ಳೆ ಅದ್ದೂರಿ ಕೆಲಸ ಅಕ್ಕಪಕ್ಕದ ಒಕ್ಕಲು ಮಾಡುತ್ತಿದ್ದಾರೆ ಹೆಂಡತಿ ತಾನೆ ಹಾಗೆಂದರೆ ತೆಪ್ಪನಿದ್ದಾಳೆ? ಎಂದು ಆತ ಹೊರಗೆ ತೋರ್ಪಡಿಸಿಕೊಳ್ಳದಿದ್ದರೂ ಒಳಗೊಳಗೆ ಹೆಂಡತಿಯ ಬಿರು ನುಡಿಗಳಿಗೆ ಅಂಜಿ ತೆಪ್ಪನಿರುತ್ತಿದ್ದ

ಇದ್ದಕ್ಕಿದ್ದ ಹಾಗೆ ಹೊನ್ನಯ್ಯ ಒಂದು ದಿನ ನವಿಲೂರಿಗೆ ಬಂದ. ಬಂದವನೆ ಹೊರಜಗುಲಿಯ ಮೇಲೆ ಕುಳಿತ. ಬಸಮ್ಮ 'ಊರಿಂದ ಬಂದಿರಾ?' ಎಂದು ನೀರುಕೊಟ್ಟು ಒಂದು ಚಾಪೆಯನ್ನು ಹಾಸಿ ಕೂಡಿಸಿದಳು—"ನಮ್ಮ ತಾಯಿ ಎಲ್ಲಿ? ಕಾಣಲಿಲ್ಲವಲ್ಲ!" ಎಂದು ಕೇಳಿದ, ಬೀಗನಿಗೆ 'ಎಲ್ಲಿ ಹೋದಾಳು, ಬರ್‍ತಾಳೆ' ಎಂಬ ಗಡುಸಿನ ದನಿಯ ಉತ್ತರ ಬಂತು ಬೀಗಿತಿಯಿಂದ ಬಸಮ್ಮನ ಬಿಗುಮಾನದ ಉತ್ತರಕ್ಕೆ ಹೊನ್ನಯ್ಯನ ಮುಖ ಚಿಕ್ಕದಾಗದೆ ಇರಲಿಲ್ಲ ಬೀಗರ ಮನೆ, ತನ್ನ ಮಗಳ ಭವಿಷ್ಯದ ಮನೆಯವರು, ಮಗಳು ಅಲ್ಲಿ ಸುಖವಾಗಿ ಬಾಳಬೇಕಾದರೆ ಅಲ್ಲಿ ತನ್ನ ಅಂತರಂಗವನ್ನು ಬಿಚ್ಚುವಹಾಗಿಲ್ಲ ಎಂದು ಮಾತನ್ನು ನುಂಗಿಕೊಂಡು ಸುಮ್ಮನಾದ ಕೋಣೆ ಒಳಗೆ 'ಆಗಲೇ ಮಗಳನ್ನು ಕರೆದೊಯ್ಯಲಿಕ್ಕೆ ಅಪ್ಪನ ಸವಾರಿ ಬಂದದೆ. ಹೇಳುವರು ಕೇಳುವರೇ ಇಲ್ಲ ಈ ಮನೇಲಿ' ಎಂದು ಬಸಮ್ಮ ಗೊಣಗುಟ್ಟುತ್ತಿದ್ದುದನ್ನು ಹೊನ್ನಯ್ಯ ಆಲಿಸಿ ಕಿವಿ ನೆಟ್ಟಗೆ ಮಾಡಿಕೊಂಡು ಕೇಳುತ್ತಿದ್ದ. ಅಷ್ಟರಲ್ಲಿ ಲಿಂಗಮ್ಮ ಕಬ್ಬಿನ ಗದ್ದೆಯಿಂದ ಕೂಳೆಯನ್ನು ಚೆಚ್ಚಿ ಅಂಟಿದ್ದ ಮಣ್ಣನ್ನೆಲ್ಲಾ ಒದರಿ ಉರಿಸಲು ಮಕ್ಕರಿ ತುಂಬ ಪಿಣ್ಣಗೆ ಕಬ್ಬಿನ ಕೂಳೆಯನ್ನು ಹೊತ್ತು ತಂದು ಅಂಗಳದಲ್ಲಿ ರಪ್ಪನೆ ಸುರಿದು "ಅಪ್ಪಾ" ಎಂದು ಬೆವರು ಹರಿಯುತ್ತಿದ್ದ ಮುಖವನ್ನು ಸೆರಗಿನ ತುದಿಯಿಂದ ಒರಸಿಕೊಳ್ಳುತ್ತಾ ಬಂದಳು. ಮಗಳ

ಮುಖ ಬಿಸಿಲಿಗೆ ಬಾಡಿ ಕಾಂತಿಹೀನವಾಗಿತ್ತು, ತಾರುಣ್ಯದ ಕಳೆ ಮಾಯ ವಾಗಿತ್ತು. ಎಣ್ಣೆಕಾಣದ ಗುಂಗುರು ತಲೆ ಮುಖದ ಚಲುವಿಗೆ ಮಸಿ ಬಳಿದಂತಿತ್ತು ಎಲ್ಲವನ್ನು ನೋಡಿ ಹೊನ್ನಯ್ಯನಲ್ಲಿ ಒಮ್ಮೆಲೇ ಸಿಟ್ಟಿದ್ದಿತು ಲಿಂಗಮ್ಮನ ಮುಖವನ್ನು ಅರಗಳಿಗೆ ದಿಟ್ಟಿಸಿ ನೋಡಿದ ತಾನು ಮಾಡಿದ ತಪ್ಪೆಲ್ಲಾ ಮನಸ್ಸಿನಲ್ಲಿ ತೆರೆ ತೆರೆಯಾಗಿ ಮಿಂಚಿದಂತಾಯಿತು. "ನಡಿಯಮ್ಮ ಊರಿಗೆ. ನಾಳೆ ಉಪವಾಸದ ಹಬ್ಬ" ಎಂದ ಲಿಂಗಮ್ಮ ಮೌನವಾಗಿಯೇ ಕೋಣೆಯ ಕಡೆ ಕೈ ತೋರಿದಳು. ಅವಳ ಮೌನ ನೊಂದ ಆ ಹೃದಯದ ಸಂಕಟವನ್ನು ಹೊನ್ನಯ್ಯನ ಒಳ ಮನಸ್ಸಿಗೆ ಬಿಚ್ಚಿ ತೋರಿದಂತಿತ್ತು. ಅತ್ತೆಯೆಂದರೆ ಹಾವು ಕಂಡಂತೆ ಹೆದರಿ ಹಾಗೆ ಸನ್ನೆಯಿಂದ ಅತ್ತೆಯ ಅಪ್ಪಣೆ ಬೇಕೆಂದು ಬಾಯಿ ಬಿಡದೆ ಸಂಜ್ಞೆಮಾಡಿದ ಮಗಳ ಸ್ಥಿತಿಗಾಗಿ ಅವನ ಹೃದಯ ಕನಿಕರದಿಂದ ಮಿಡಿಯಿತು ಬಸಮ್ಮನನ್ನು ಕರೆದು ಲಿಂಗಮ್ಮನನ್ನು ಕರೆದುಕೊಂಡು ಹೋಗುವುದಾಗಿ ಹೇಳಿದ. ಆ ಕಾರ್ಯಾರ್ಥವಾಗಿಯೇ ಬೀಗನ ಸವಾರಿ ದಯಮಾಡಿಸಿದೆಯೆಂದು ಮೊದಲೇ ತಿಳಿದ ಬಸಮ್ಮ ಇನ್ನು ಬೇಡವೆಂದರೆ ಅದು ನಡೆಯದ ಕೆಲಸ ವೆಂದು ಬಗೆದು ಉಪಚಾರಕ್ಕಾಗಿ ಹೇಳಿದಳು

"ಗಂಡಸರು ಬರಲಿ. ಊಟಮಾಡಿಕೊಂಡು ಹೋಗಬಹುದಲ್ಲಾ ಅವಳು ಮೀಯಲಿಲ್ಲ—ಬಟ್ಟೆಬರೆ ಒಗೆಯಲಿಲ್ಲ" ಎಂದು.

"ಹೇಗೂ ನಾಳೆ ಹಬ್ಬ. ಮೀಯಲಿಕ್ಕೆ ರಾಮನಗರದಲ್ಲೇನು ನೀರಿಲ್ಲವೇ? ಅಲ್ಲೇ ಮಿಂದರಾಯಿತು ಅವಳಿಗಾಗಿ ಹೊಸ ಕುಪ್ಪಸ, ಸೀರೆಯನ್ನು ಶನಿವಾರದ ಸಂತೆಯಲ್ಲಿ ತೆಗೆದು ಇರಿಸಿದ್ದೇನೆ ಗಂಡಸರು ಕೆಲಸದಿಂದ ಬಂದಮೇಲೆ ನೀವು ಹೇಳಿದರೆ ಮುಗಿಯಿತು" ಎಂದು ಹೊನ್ನಯ್ಯ ಉಪಚಾರದ ಮಾತನಾಡಿದ

"ಹಾಗಾದರೆ ಸೊಸೆಯನ್ನು ಹಸಿದು ಕಳುಹಿಸಿದಳೆಂದು ನಮ್ಮ ಯಜಮಾನರು ರೇಗುತಾರೆ ಒಂದಷ್ಟು ರೊಟ್ಟಿ ಮೊಸರು ಉಂಡು ಹೋಗಿ" ಎಂದು ಗಂಗಳವನ್ನು ಹೊನ್ನಯ್ಯನ ಮುಂದೆ ಇರಿಸಿ ಬಡಿಸಿದಳು ಹೊನ್ನಯ್ಯನಿಗೆ ಉಣ್ಣಲು ಮನಸ್ಸಿಲ್ಲ ಇನ್ನು ಆಕೆಯ ಮನಸ್ಸು ಮುರಿದು ಸಿಟ್ಟಿಗೆ ಎಡೆಯಾದೀತೆಂದು ಉಂಡವನಂತೆ ಒಂದೆರಡು ಚೂರು

ರೊಟ್ಟಿ ತಿಂದು ಮೇಲೆದ್ದ. ಲಿಂಗಮ್ಮನಿಗೂ ಬಡಿಸಿದಳು ಬಸಮ್ಮ. ಲಿಂಗಮ್ಮ ಬಾಯಿಗೆ ತುತ್ತು ಇರಿಸಿದಳೋ ಇಲ್ಲವೋ ತೌರುಮನ ಕಾಣುವ ಸಂಭ್ರಮದಲ್ಲಿ ಮೇಲೆದ್ದು ಎಂಜಲು ತೆಗೆದು ಅಪ್ಪನ ಮುಖ ನೋಡಿ ದಳು. ಇನ್ನು ಹೋಗುತ್ತೇವೆಂದು ಹೊನ್ನಯ್ಯ ಬಸಮ್ಮನಿಗೆ ಹೇಳಿ ಮಗಳನ್ನು ಕರೆದುಕೊಂಡು ಹೊರಗೆ ಹೊರಟ. ಬಸಮ್ಮ ಬೀಗನ ಕೈಗೆ ವೀಳ್ಯ ಇತ್ತು "ಜಾಗ್ರತ ಕಳಿಸಿಬಿಡಿ. ಇಲ್ಲಿ ತುರುತು ಕೆಲಸದ ಕಾಲ" ಎಂದು ಆಜ್ಞೆ ಮಾಡುವುದನ್ನೂ ಮರೆಯಲಿಲ್ಲ. "ಹೂಂ, ನೋಡುವ ಇನ್ನು ಹೋಗ್ತೇವೆ' ಎಂದು ತಿರಸ್ಕಾರದ ಮಾತನಾಡಿಯೇ ಹೊನ್ನಯ್ಯ ಹೊರಟ. ದಾರಿಯುದ್ದಕ್ಕೂ ಮಗಳನ್ನು ಪ್ರಶ್ನಿಸುತ್ತಲೇ ಇದ್ದ ಹೊನ್ನಯ್ಯ, "ಯಾಕಮ್ಮ, ಬಹಳ ಕಂಗೆಟ್ಟಿದ್ದೀಯಲ್ಲಾ?" ಎಂದು. 'ಏನೊ ಒಂದಷ್ಟು ಕೆಲಸದ ಕಾಲ' ಎಂದಷ್ಟೆ ಮಗಳ ಉತ್ತರ ಬರು ತ್ತಿತ್ತು. ಲಿಂಗಮ್ಮನ [illegible] ಅವಳ ಸ್ಥಿತಿಯನ್ನು ಹೇಳುತ್ತಿ ತ್ತಾದ್ದರಿಂದ ಪುನಃ ಆ [illegible] ಹೊನ್ನಯ್ಯ ಮಾತು ತೆಗೆಯಲಿಲ್ಲ. 'ನಮ್ಮ ತೋಟ ಸಿಕ್ಕಿತು, ಗದ್ದೆ ಸಿಕ್ಕಿತು' ಎಂದು ಲಿಂಗಮ್ಮ ಊರು ಸೇರುವ ಹಂಬಲದಲ್ಲೇ ದಾರಿಯನ್ನು ಸಾಗಿಸಿದಳು. ಹೊತ್ತು ಕಂತುವು ದರೊಳಗಾಗಿ ತಂದೆಯೂ ಮಗಳೂ ಮನೆಯನ್ನು ಸೇರಿದರು.

ಹುಟ್ಟಿದ ಮನೆಯನ್ನು ಹೊಕ್ಕಾಗಲೇ ಎಲ್ಲಿಲ್ಲದ ಆನಂದ ಲಿಂಗಮ್ಮ ನನ್ನು ಆವರಿಸಿತು. 'ಈ ದಿನ ಅಕ್ಕ ಬರುತ್ತಾಳೆ. ಈಗ ಬರುತ್ತಿದ್ದಾರೆ ಇಷ್ಟರಲ್ಲಿ ಕೆಂಗಲ್ಲುಗುಡ್ಡೆ ದಾಟಿದ್ದಾರೆ' ಎಂದು ಮಗ ಶಿವಪ್ಪನಿಗೆ ತಿಮ್ಮಕ್ಕ ಆ ದಿನ ಹೇಳುತ್ತಲೇ ಇದ್ದಳು. ಮಗಳು ಬಂದಾಗ ಮೌನ ವಾಗಿಯೇ ಹತ್ತಿರ ಬಂದು "ಬಾಯಿ" ಎಂದು ಅಂದುದಷ್ಟೆ. ಆ ಮಾತಿನ ಹಿಂದೆ ಮರುಕ ಅಡಗಿತ್ತು. ಮಗಳಿಗಾಗಿ ಮಿಡಿದ ಕಣ್ಣೀರಿನ ಆಳ ಕಾಣು ತ್ತಿತ್ತು. ಬಡಕಲಾಗಿದ್ದ ಮಗಳನ್ನು ಬಹಳ ಹೊತ್ತು ಚಿಂತೆ ತುಂಬಿದ ಶೂನ್ಯದೃಷ್ಟಿಯಿಂದ ನೋಡಿದಳು. ಮತ್ತೇನು ಕೇಳುವಳು? ಎಲ್ಲಾ ಮಗಳ ಮಾಸಿದ ಮೈಯೇ ಹೇಳುತ್ತಿತ್ತು. 'ಹುಂ ಮಾಡಿದವರು ಮಾಡಿ ದರು. ಅನುಭವಿಸುವುದು ಅವಳ ಹಣೆಯಲ್ಲಿ ಬರೆದಿದೆ' ಎಂದು ತೆಪ್ಪ ನಾಗಿ ಅಟ್ಟದಮೇಲಿಂದ ಒಂದು ಕೊಬರಿ ತೆಗೆದು ಒಡೆದು, ಬೆಲ್ಲದ

ಚೂರನ್ನು ಕೊಬರಿಯನ್ನು ಲಿಂಗಮ್ಮನ ಮಡಿಲಲ್ಲಿ ಹಾಕಿ 'ತಿನ್ನಮ್ಮ' ಎಂದಷ್ಟೆ ಹೇಳಿ ಕೋಣೆ ಹೊಕ್ಕಳು ತಿಮ್ಮಕ್ಕ ಏ.ೀಯ ಲಿಕ್ಕ ನೀರುಒಲೆಗೆ ಉರಿಹಾಕಿದಳು ಅಷ್ಟರಲ್ಲಿ ಕರಿ ಹೊನ್ನಮ್ಮ ಬಂದು ಮನ್ಮೊಗಳನ್ನು ನೋಡಿ ಬಾಯಿಬಿಡಲಿಲ್ಲ ಸೊಸೆಗೆ 'ತಿಮ್ಮಿ ಲಿಂಗವ್ವನ ತಲೆಗೆ ಮೊದಲು ಒಂದಷ್ಟು ಎಣ್ಣೆ ಕಾಣಿಸು' ಎಂದು ನಿಟ್ಟುಸಿರು ಬಿಟ್ಟು ಹಜಾರದಲ್ಲಿ ಕುಳಿತಳು ಲಿಂಗಮ್ಮನ ಅಜ್ಜಿಯನ್ನು ಮಾತನಾಡಿಸತೊಡಗಿದಳು. 'ಯಾಕಮ್ಮ, ಸಪ್ಪಗೆ ಮುಖಮಾಡಿಕೊಂಡಿದ್ದೀಯೆ? ಎಲ್ಲಿ ಹೋಗಿದ್ದ, ತೋಟಕ್ಕೆ ಏನು?' ಎಂದು. 'ಸಪ್ಪಗಿರದೆ ಇನ್ನೇನು ಮಾಡಲವ್ವ ನಿಮ್ಮಪ್ಪ ಮಾಡಿದ್ದಕ್ಕೆ? ಈಗ ಉಣ್ಣಲಿ ಸುಖವ. ಈಗೇನು ಕಂಡ, ಇನ್ನು ಮುಂದೆ ಯಾವಾವ ಬುತ್ತಿ ಕಟ್ಟಿದೆಯೊ! ನಿನ್ನ ಹಣೆಯಲ್ಲಿ ಏನು ಬರದನ ಆ ಜವರಾಯ. ಅವನ ಮನೆ ಹಾಳಾಯ್ತು"

"ಯಾಕಮ್ಮ ಹಾಗೆಲ್ಲಾ ದೂಷಣೆ ಮಾಡತಿ. ಬ್ರಹ್ಮ ಏನು ಮಾಡಾನು? ಹಾಗಲ್ಲಾ ಬೈಯಬಾರದು".

"ಬ್ರ ಗರ ನನ್ನನ್ನೇನು ಮಾಡಾನು? ನಾನು ಮುದುಕಿ ಹೇಗಿದ್ದರೂ ಒಂದು ದಿನ ಕಂತ ಒಪ್ಪಿಸಬೇಕು ಅವನಿಗೆ ಕೋಪ ಬಂದರೆ ಈಗಲೇ ಕೊಂಡೋಗಲೇಳು ಯಾವ ಸಂಪತ್ತು ಬಿಟ್ಟು ಹೋಗಲಾರೆ?'

ಹೊರಜಗುಲಿಯ ಮೇಲೆ ಕುಳಿತಿದ್ದ ಹೊನ್ನಯ್ಯ "ಹೋಗಲಿ ಬಿಡಮ್ಮ ಆ ಸುದ್ದಿಯ" ಎಂದು ತಾಯಿಗೆ ಉಪಚಾರದ ಮಾತನಾಡಿದ ಮಗಳನ್ನು ತಾನು ಇಂಥ ಹಿಂಸೆಗೆ ಸಿಕ್ಕಿಸಿದೆನಲ್ಲಾ ಎಂದು ಒಳಗೊಳಗೆ ನೊಂದುಕೊಳ್ಳುತ್ತಿದ್ದ ಅದೇ ಒಂದು ಕೊರತ ಅವನ ಮನಸ್ಸನ್ನು ನಾಟಿ ಸದಾ ಗುಪ್ತವಾಗಿ ಕಾಡತೊಡಗಿತು. ಹಿಂದ ಮನೆಯವರ ಮೇಲೆ ಮಾತುಮಾತಿಗೂ ಉರಿದು ಬೀಳುತ್ತಿದ್ದ ಅವನು ಈಚೀಚೆಗೆ ಬಾಯಿಗೆ ಬೀಗ ಹಾಕಿಕೊಂಡು ತೆಪ್ಪನಾಗಿರುವುದು ಕರಿಹೊನ್ನಮ್ಮನಿಗೂ ತಿಮ್ಮಕ್ಕನಿಗೂ ಆಶ್ಚರ್ಯವನ್ನುಂಟುಮಾಡಲಿಲ್ಲ ಕಾರಣ ಅವರ ಮನಸ್ಸಿಗೂ ಹೊಳೆದಿತ್ತು.

ಉಪವಾಸದ ಹಬ್ಬ ಹೊನ್ನಯ್ಯನ ಮನೆಯಲ್ಲಿ ಸಂಭ್ರಮದಿಂದಲೇ

ನಡೆಯುತ್ತಿದೆ ಲಿಂಗಮ್ಮ ತಾಯಿಗೆ ಕಾಯಿ ತುರಿಯುವುದಲ್ಲಿ, ಒಬ್ಬಟ್ಟಿಗೆ ಹೂರಣ ಮೆದ್ದಿಸುವುದರಲ್ಲಿ ಸಹಾಯಕಳಾಗಿದ್ದಾಳೆ ಮಗಳನ್ನು ನಾನಾ ವಿಧವಾಗಿ ಮಾತನಾಡಿಸುತ್ತಿದ್ದಾಳೆ ತಿಮ್ಮಕ್ಕ ಲಿಂಗಮ್ಮ ಯಾವುದೋ ಗೂಢಚಿಂತೆಯಲ್ಲಿ ಮುಳುಗಿ ಎಚ್ಚತ್ತಾಗಲೇ ತಾಯಿಯ ಮಾತಿಗೆ ಉತ್ತರ ಕೊಡುತ್ತಿದ್ದಳು ಒಬ್ಬಟ್ಟು ಸುಡುತ್ತಾ "ಒಂದನ್ನು ತಿಂದು ನೋಡು ತಾಯಿ, ಹೇಗಿದೆ" ಎಂದಳು ತಿಮ್ಮಕ್ಕ. ಲಿಂಗಮ್ಮ ಮಕ್ಕಳಿಗೆ ಕೊಡವ್ವ ನನಗೇನು ಅಂತ ಬವಣೆ' ಎಂದು ಒಬ್ಬಟ್ಟಿನ ಹೂರಣವನ್ನು ಬಾಳೆ ಎಲೆಯ ಮೇಲೆ ತಟ್ಟುತ್ತಾ ಏನನ್ನೋ ಚಿಂತಿಸುತ್ತಿದ್ದಳು ಮಗಳ ಗುಪ್ತ ಚಿಂತೆಯನ್ನು ಕದಲಿಸಬೇಕೆಂದು ತಿಮ್ಮಕ್ಕ "ಅಯ್ಯೋ, ರಂಗಪ್ಪನವರಿಗೆ ನಿನ್ನ ಮದುವೆ ಮಾಡಿದ್ದರೆ ಇಂಥ ಹಬ್ಬಗಳಿಗೆ ನಮ್ಮ ಮನೇಲೇ ಇರ್ತಾ ಇದ್ದರು" ಎಂದು ಮರುಕ ತುಂಬಿದ ದನಿಯಲ್ಲಿ ಅಂದಳು. ಆ ಸುದ್ದಿ ಈ ಬಿಸಿಲು ಹೊತ್ತಿನಲ್ಲಿ ಯಾಕವ್ವ' ಎಂದಳು ಲಿಂಗಮ್ಮ ತಾಯಿಗೆ ತನ್ನ ಅಂತರಂಗದ ವೇದನೆ ತಿಳಿದೀತೆಂದೇ ಲಿಂಗಮ್ಮ ಅದನ್ನು ಮರೆಮಾಚಿ ಬಾಯಿಮಾತಿಗೆ ಹಾಗಂದದ್ದು ಆಕೆ ಯೋಚಿಸುತ್ತಿದ್ದುದು ಅದೇ ವಿಷಯವಾಗಿ ಮನಸ್ಸೆಲ್ಲಾ ತನ್ನ ರಂಗಯ್ಯ ಮಾವನನ್ನು ಅರಸುತ್ತಿತ್ತು ದೇಹ ಕೋಣೆಯಲ್ಲಿದ್ದರೂ ಮನಸ್ಸು ರಾಮನಗರದ ರಂಗಯ್ಯನ ಮನೆ ಕೋಣೆ, ಸೋದರತ್ತೆ,ರಂಗಯ್ಯ-ಇವರ ಸುಳಿವನ್ನು ಕಾಣುತ್ತಿತ್ತು. 'ಹುಂ ಹೋಗಲಿ ಬಿಡವ್ವ, ಯಾರಾರು ಆ ನೆಂಟು ಮುರಿದರೊ ಅವರನ್ನು ದೇವರೇ ನೋಡ್ತಾನೆ'ಎಂದು ನಿಟ್ಟುಸಿರು ಬಿಟ್ಟಳು, ಲಿಂಗಮ್ಮ. ಮೆಲು ದನಿಯಲ್ಲಿ "ನನ್ನ ಗ್ರಹಚಾರಕ್ಕೆ ಯಾರೇನು ಮಾಡಿಯಾರು" ಎಂದು ತನ್ನ ಕೆಲಸದಲ್ಲಿ ತೊಡಗಿದಳು ತೌರುಮನೆಯಲ್ಲಿ ಆಕೆ ಎರಡು ತಿಂಗಳು ಗಳ ಕಾಲ ಸುಖವಾಗಿದ್ದಳು ಒಂದು ದಿನ ಋತುಮತಿಯಾದಳು. ತಿಮ್ಮಕ್ಕನಿಗೆ ಒಮ್ಮೆಲೇ ಮನಸ್ಸು ಜಗ್ಗಿತು, ಇನ್ನುಮೇಲೆ ಮಗಳನ್ನು ಗಂಡನ ಮನೆಗೇ ಸೇರಿಸಬೇಕಲ್ಲಾ, ನಾವು ಬಯಸಿದಾಗಲೆಲ್ಲಾ ಇಷ್ಟು ಸುಲಭವಾಗಿ ತೌರಿಗೆ ಕಳುಹಿಸುವುದುಂಟೆ ಎಂದು ನೆರೆಹೊರೆ ಹೆಣ್ಣು ಮಕ್ಕಳೂ ಹಾಗೆಯೆ ಎಂದು ತುಸು ಸಮಾಧಾನವನ್ನು ಹೊಂದಿದಳು. ಲಿಂಗಮ್ಮ ಮೈ ನೆರೆದ ಸುದ್ದಿಯನ್ನು ನವಲೂರಿಗೆ ಹೇಳಿ ಕಳುಹಿಸಿದರು.

ಬಸಮ್ಮ ಹಿಗ್ಗಿದಳು. 'ಇರಲಿ ಇನ್ನುಮೇಲೆ ಅವರಪ್ಪನಲ್ಲ ಅಪಲತ್ತಗಾರ ಬಂದರೂ ಕಳುಹಿಸೇನೆ' ಎಂದು ಮನಸ್ಸಿನಲ್ಲಿ ಹಠಸಾಧಿಸಿದಳು ಈಗಿನ ಸೇಡನ್ನು ತೀರಿಸಿಕೊಳ್ಳದೆ ಬಿಟ್ಟರೆ ನಾನಾರು ಎಂದು ಮತ್ತೊಂದು ಸಾರಿ ಅಂದುಕೊಂಡಳು ತನ್ನ ಯಜಮಾನನಿಗೆ ಹೇಳಿದಳು,

"ಈಗ ತರಾತುರಿ ಕೆಲಸದ ಕಾಲ, ಗೌರಿ ಹಬ್ಬದ ಹೊತ್ತಿಗೆ ಪ್ರಸ್ತ ಮಾಡಿಬಿಡಿ ಎಂದು ಸುದ್ದೀನ ಶನಿವಾರದ ಸಂತೆಗೆ ಬಂದವರ ಸಂಗಡ ಹೇಳಿಕಳುಹಿಸಿಬಿಡಿ" ಎಂದು ಮುತ್ತಣ್ಣ ಹೆಂಡತಿಯು ಮಾತಿನಂತೆ ಮಾರು ಶನಿವಾರದ ಸಂತೆಗೆ ಹೋಗಿ ರಾಮನಗರದವರ ಸಂಗಡ ಸಮಾಚಾರ ವನ್ನು ಕಳುಹಿಸಿಬಿಟ್ಟ

ಗೌರಿ ಹಬ್ಬವೂ ಸಮೀಪಿಸಿತು. ಒಂದು ದಿನ ಗಂಡ ಹೆಂಡಿರಿಬ್ಬರೂ ರಾಮನಗರಕ್ಕೆ ಹೋಗಿ ಪ್ರಸ್ತದ ದಿನವನ್ನೂ ಗೊತ್ತು ಮಾಡಿಬಂದರು ಹೊನ್ನಯ್ಯ ಮುಖ ತಿರುಗಿಸಬಹುದೆಂದು ಅವರು ಊಹಿಸಿದ್ದರು ಆದರೆ ಮಗಳ ಶೋಭನಪ್ರಸ್ತವಾದಮೇಲಾದರೂ ಮನಸ್ಸು ಮಣಿದು ಗಂಡನ ಸಂಗಡ ಸುಖವಾಗಿ ಬಾಳಿಯಾಳೆಂದು ಅರಿತು ಹೊನ್ನಯ್ಯ ತಾನೇ ಆತುರವಾಗಿ ಪ್ರಸ್ತಕ್ಕೆ ಒಡವೆ ವಸ್ತು ಎಲ್ಲಾ ಸಿದ್ಧ ಮಾಡಿದ. ತಿಮ್ಮಕ್ಕ ಮೂಗಿಯಾದಳು. ತಾನೇಕೆ ಅಡ್ಡಿಬರಬೇಕೆಂದು ಒಡವೆ ವಸ್ತುಗಳ ಪ್ರಸ್ತಾಪವನ್ನು ಎತ್ತಲಿಲ್ಲ. ಮಗಳನ್ನು ಪಟಿಂಗ ಅತ್ತೆ ಬಾಯಿಗೆ ತುರಕಬೇಕಲ್ಲಾ ಎಂಬೊಂದೇ ಚಿಂತೆಯಲ್ಲಿ ದಿನಗಳನ್ನು ನೂಕು ತ್ತಿದ್ದಳು. ಗೊತ್ತಾದ ದಿನ ಶುಭಕಾರ್ಯವನ್ನೂ ಮಾಡಿಯಾಯಿತು ಅಳಿ ಯುನನ್ನೂ ಮಗಳನ್ನೂ ನಾಲ್ಕು ದಿನ ಉ[illegible]ಸಿದರು. ಗಂಡನ ಮನೆಗೆ ಹೋಗ[illegible] ದಿನ ಲಿಂಗಮ್ಮ ಕೊಡಗಟ್ಟಲೆ ಕಣ್ಣೀರು ಕರೆದಳು. ಮಗಳ ದುಃಖ ತನ್ನ ಕಣ್ಣೀರು ನೋಡಿ ಇನ್ನೂ ಹೆಚ್ಚಾದೀತೆಂದು ತಿಮ್ಮಕ್ಕ ತನ್ನ ದುಃಖವನ್ನು ತಾನೇ ನುಂಗಿಕೊಂಡು ತೆಪ್ಪನಿದ್ದಳು. ಅಳಿಯುನನ್ನೂ ಮಗಳನ್ನೂ ಕಳುಹಿಸಲು ಬೇಕಾದ ತಿಂಡಿ ತೀರ್ಥಮಾಡಿ ಲಿಂಗಮ್ಮನನ್ನು ಸಂತೈಸಿ ಊಟಮಾಡಿಸಿದಳು. ದಂಪತಿಗಳು ಹೊರಟರು. ಬಹಳದೂರದ ವರೆಗೆ ಹೊನ್ನಯ್ಯನೂ ಹಿಂಬಾಲಿಸಿ ಅಳಿಯನಿಗೆ "ಜೋಕೆ ಅಪ್ಪಾ, ಪ್ರೀತಿ ಯಿಂದ ಸಾಕಿದ ಮಗಳು, ಚೆನ್ನಾಗಿ ಬಾಳಿಕೊಂಡು ಹೋಗಿ" ಎಂದು

ಹೇಳಿ ಮೌನವಾಗಿ ಹಿಂದಿರುಗಿದ. ಕರಿಹೊನ್ನಮ್ಮ ತಿಮ್ಮಕ್ಕರು ಬಹಳ ದೂರದವರೆಗೂ ಹೋಗಿ "ಇನ್ನೊಂದು ವಾರದಲ್ಲಿ ಬರುತ್ತೇವೆ ಅವರು ಹೇಳಿದ ಹಾಗೆ ಕೇಳಿಕೊಂಡು ನಮಗೂ ಒಂದು ಕೀರ್ತಿ ತರಬೇಕವ್ವ" ಎಂದು ವಿವೇಕ ಹೇಳಿ "ಇನ್ನು ಹೋಗಿ" ಎಂದು ಹನಿಗಣ್ಣಾಗಿ ಹೇಳಿ ಬೀಳ್ಕೊಟ್ಟರು ಲಿಂಗಮ್ಮ ಬೆಪ್ಪು ಹಿಡಿದವಳಂತೆ ತಾಯಿಯನ್ನೂ ಹೆತ್ತಮ್ಮನನ್ನೂ ಹಿಂದಿರುಗಿ ನೋಡುತ್ತಾ, ತೌರೂರನ್ನೂ ಒಮ್ಮೊಮ್ಮೆ ಹಿಂದಿರುಗಿ ಕಣ್ಣು ಅರಳಿಸಿ ನೋಡುತ್ತಾ, ಕಾಲು ಎಳೆದುಕೊಂಡು ಪತಿದೇವರ ಹಿಂದೆ ಸಾಗಿ, ಸಂಜೆಗೆ ನವಿಲೂರನ್ನು ಸೇರಿದಳು ಹೋದ ಕೂಡಲೇ ಮನೆಯವರೆಲ್ಲಾ ಸೇರಿದರು ಅಕ್ಕಪಕ್ಕದ ಮನೆಯ ಹೆಂಗಸರೂ ಬಂದು ಲಿಂಗಮ್ಮನ ಕ್ಷೇಮ ಸಮಾಚಾರ ವಿಚಾರಿಸಿ ಆಕೆ ಕೊಟ್ಟ ವೀಳ್ಯವನ್ನು ಸ್ವೀಕರಿಸಿ ಹೋದರು ಹುಡುಗಿ ತನ್ನ ಪಾಡಿಗೆ ತಾನು ತನ್ನ ನಿತ್ಯ ಕೆಲಸದಲ್ಲಿ ತೊಡಗಿದಳು.

ಗೌರಿ ತಿಂಗಳ ಜಡಿಮಳೆ. ಹೊಲದ ಪೈರು ಹಸುರು ಕಾಂತಿಯನ್ನು ಎರಚುತ್ತಾ ಮೇಲೇಳುತ್ತಿದೆ ನವಿಲೂರಿನ ಸುತ್ತಲೂ ಗದ್ದೆಗಳೆಲ್ಲಾ ಹಸುರು ಬಟ್ಟೆಯಿಂದ ಹೊದಿಸಿದಂತಿವೆ. ಹೊಲಗದ್ದೆಗಳಲ್ಲಿ ಕಳೆ ತೆಗೆಯಲು ಮುಂಜಾನೆಯೇ ಶುರುವಾಯಿತು ಬಸಮ್ಮನ ಅಪ್ಪಣೆ . ಗಂಡನ ಸಂಗಡ ಲಿಂಗಮ್ಮ ತುಸು ನಾಚಿಕೆಯಿಂದಲೇ ವರ್ತಿಸುತ್ತಿದ್ದಳು ಅತ್ತೆಯ ಭಯಕ್ಕೆ ಗಂಡನನ್ನು ಹಿಂಬಾಲಿಸಿ ಹೊಲಕ್ಕೆ ಹೋಗುತ್ತಿದ್ದಳು ನಾಗಯ್ಯ "ಹೀಗೆ ಕೀಳು, ಹುಲ್ಲು ಕಿತ್ತುಕೊ ಕರುಗಳಿಗೆ" ಎಂದು ಲಿಂಗಮ್ಮನಿಗೆ ಹೇಳುತ್ತಿದ್ದ ಆದರೆ ಆಕೆ ಮರುಮಾತನಾಡದೆ ಹೇಳಿದ ಕೆಲಸವನ್ನು ನಿರ್ವಹಿಸುತ್ತಿದ್ದಳು. ದನ ಕರು ಮೇಯಿಸುವ ಕೆಲಸವೂ ಲಿಂಗಮ್ಮನ ಪಾಲಿಗೆ ಬಿತ್ತು ಬಸಮ್ಮ ಮನೆಯಲ್ಲಿ ಅಡುಗೆ ಕೆಲಸ ಮುಗಿದ ಮೇಲೆ ಅಕ್ಕಪಕ್ಕದ ಮನೆಯ ಅಜ್ಜಿಯರ ಸಂಗಡ 'ಆ ಮುಂಡೇದು ಏನು ಕೊಟ್ಟಾತು ಅಳಿಯನಿಗೆ? ಬರಿ ಡೌಲು!' ಎಂದು ಬೀಗನ ವಿಚಾರವಾಗಿ ತೆಗಳಿ ಮಾತನಾಡುತ್ತಾ ಕಾಲತಳ್ಳುತ್ತಿದ್ದಳು

ಒಂದು ಬೆಳಗ್ಗೆ ಸೊಸೆಗೆ "ನೋಡು, ಮನೆಯಲ್ಲಿ ಒಂದು ಕಡ್ಡಿ ಇಲ್ಲ ಒಲೆಗೆ ಹಾಕಲಿಕ್ಕೆ. ಈ ದಿನ ಕಾಡಿಗೆ ಹೋಗಿ

ಒಂದಷ್ಟು ಚುಜ್ಜಲಿ ರೆಂಬೆ ಕಡಿದು ತರದಿದ್ದರೆ ಉಪವಾಸವೇ ಗತಿ'' ಎಂದಳು ಲಿಂಗಮ್ಮ ಮರುಮಾತನ್ನಾಡದೆ ಕುಡುಗೋಲು ಹಿಡಿದು ಹೊರಟಳು ನಾಗಯ್ಯ ''ಅವ್ವ, ಅವಳಿಗೂ ಒಂದಷ್ಟು ಏನಾದರೂ ಹೊಟ್ಟೆಗೆ ಕೊಡು ಒಬ್ಬಳೇ ಏಕೆ ಹೋಗಬೇಕು? ನಾನೂ ಹೋಗ್ತೇನೆ'' ಎಂದ. ಮಗ ಹೆಂಡತಿಯನ್ನು ವಹಿಸಿಕೊಂಡು ಮಾತಾಡಿದ್ದನ್ನು ಕೇಳಿ ಬಸಮ್ಮ ಬುಸುಗುಟ್ಟಿದಳು. ಎಲಾ, ಕಂಡೋರಮನೆ ಹೆಣ್ಣಿನ ಮೇಲೆ ಇಷ್ಟು ಪಿರೀತಿಯಾ! ನಾವಿರೋದು ಏಕೆ? ಕೇಮೆ ನೋಡು ಮದ್ಯಾಹ್ನ ಬಂದು ತಿನ್ನುತ್ತಾಳೆ. ಅವರಪ್ಪನ ಮನೇಲಿ ಹೀಗೇ ತಿನ್ನುತ್ತಿದ್ದಳೆ ?'' ಎಂದು ಮಗನ ಬಾಯಿ ಮುಚ್ಚಿಸಿದಳು ಲಿಂಗಮ್ಮನಿಗೆ ಏನೇನೊ ಹೇಳಬೇಕೆಂದು ಅನ್ನಿಸಿತು. ಮಾತುಗಳು ಬಾಯಿಯಲ್ಲೇ ನಿಂತವು ಕಣ್ಣಂಚಿನಲ್ಲಿ ಎರಡು ತೊಟ್ಟು ಹನಿಗಳು ಬಂದು ಕೊನೆಗೆ "ಅತ್ತಮ್ಮ,ನೀವು ಹೇಳಿದ್ದು ಮಾಡ್ತೇನೆ,ನಮ್ಮಪ್ಪನ ಮನೆ ಸುದ್ದಿ ಯಾತಕ್ಕೆ ಎತ್ತುತ್ತೀರಿ ?'' ಎಂದು ಹೇಳಿ ಮನೆಯಿಂದ ಹೊರಟಳು. ಅಕ್ಕಪಕ್ಕದ ಹೆಂಗಸರೂ ಲಿಂಗಮ್ಮನ ಜೊತೆಗೆ ಸೌದೆ ತರಲು ಹೊರಟರು. ಬಸಮ್ಮ ದುರದುರನೆ ಲಿಂಗಮ್ಮನನ್ನೇ ನೋಡುತ್ತಾ ''ನೋಡಿದೇನೊ, ಎಲ್ಲಿಗೆ ಬಂದಳು'' ಎಂದು ಮಗನಿಗೆ ಹೇಳಿ ಕೋಣೆಗೆ ಹೋದಳು ನಾಗಯ್ಯನಿಗೆ ಒಂದು ಚಿಂತೆ. ತನ್ನ ಹೆಂಡತಿ ಏಕೊ ಮಂಕು ಕವಿದ ಹಾಗಿದ್ದಾಳೆ, ನಗುತ್ತಾ ಮಾತನಾಡಿದ ದಿನವನ್ನೇ ಕಾಣೆನಲ್ಲ ಎಂದು

ಲಿಂಗಮ್ಮ ಕಾಲ ಕಳೆದಂತೆಲ್ಲಾ ಗಂಡನ ಸಂಗಡ ಮನಸ್ಸು ಕೊಟ್ಟು ಮಾತನಾಡಿದವಳಲ್ಲ ಈ ಗುಪ್ತ ಚಿಂತೆಗೆ ತುತ್ತಾದ ನಾಗಯ್ಯನೂ ತನ್ನ ಕೆಲಸಕಾರ್ಯಗಳಲ್ಲಿ ಅಸಡ್ಡೆಯಿಂದಲೇ ತೊಡಗುತ್ತಿದ್ದನು. ಮುತ್ತಣ್ಣ ಒಂದು ಸಾರಿ ಮಗನಿಗೆ ಬುದ್ಧಿ ಹೇಳಿದ. "ಹೀಗಾದರೆ ಹೇಗೆ ನಾಗಯ್ಯ, ಹೆಂಡತಿ ಬಂದು ವರ್ಷವೇ ಆಯಿತು ಇನ್ನು ಮಕ್ಕಳು ಮರಿ ಆದರೆ ಸಂಪಾದಿಸಿ ಹೊಟ್ಟೆ ಹೊರೆಯುವುದು ಕಷ್ಟದಕೆಲಸ. ಈಗಿನಿಂದ ಕಷ್ಟಪಟ್ಟು ದುಡಿಯಬೇಕಪ್ಪ" ಎಂದು ಗಂಡನು ಹೇಳುತ್ತಿದ್ದ ಮಾತನ್ನು ಬಸಮ್ಮ ಕೇಳಿಸಿಕೊಂಡು "ಹುಂ, ಆ ಮುಕ್ಕನಿಗೆ ಮಕ್ಕಳು ಬೇರೆ ಆಗ್ತವೆ, ಮುಸುಡಿ ನೋಡಿದ್ರೆ ತಿಳಿಯೋದಿಲ್ಲವೆ'' ಎಂದು ಮಗನ ಮನಸ್ಸಿನಲ್ಲೂ ವಿಷ ಬೀಜ

ಬಿತ್ತಲು ಪ್ರಾರಂಭಮಾಡಿದಳು. ತನ್ನ ಹೆಂಡತಿ ಗಂಡನ ಸಂಗಡ ಇರ ಬೇಕಾದ ತೆರದ ಮನಸ್ಸಿನಿಂದ ಇಲ್ಲವೆಂಬುದು ನಾಗಯ್ಯನಿಗೆ ಗೊತ್ತು. ತನಗೂ ಲಿಂಗವ್ವನಿಗೂ ಇರುವ ಪ್ರೀತಿ ಅಷ್ಟಕ್ಕಷ್ಟೆ ಎಂಬುದು ಯಾವಾ ಗಲೋ ತಿಳಿದಿತ್ತು. ಜನ ಆಡಿಕೊಂಡಾರೆಂದು ಲಿಂಗವ್ವ ತನ್ನ ಚಿಂತೆ ಯನ್ನು ಕುರಿತು ನೆರೆ ಹೊರೆಯ ಮನೆಯ ಸೊಸೆಯರ ಸಂಗಡಲೂ ಬಾಯಿಬಿಡುತ್ತಿರಲಿಲ್ಲ ಕತ್ತು ಮುರಿದು ಹೋಗುವಂತೆ ಅವಳು ಸೌದೆ ಹೊರೆಯನ್ನು ತಂದು ಮನೆಯ ಬಾಗಿಲ ಮುಂದೆ 'ದಪ್ಪನೆ' ಕೆಡಹಿದಳು. ಮುಖವೆಲ್ಲಾ ಬೆವರು ಕಂಗೆಟ್ಟಿತ್ತು ಬಸವ್ವ ಸದ್ದು ಕೇಳಿ ಮನೆಯಿಂದ ಹೊರಬಂದು 'ಏನು ಸೌದೆ ಇದು, ಈ ಹಸಿ ನೀರ ಮೊಟ್ಟೆಯ ಹೇಗೆ ಒಲೆಗೆ ಹಾಕೋದು?' ಎಂದು ಹೇಳಿ ಹೋದಳು. ತಾನು ಎಷ್ಟು ದುಡಿ ದರೂ ಗಂಡನಾಗಲಿ ಅತ್ತೆಯಾಗಲಿ ಮೆಚ್ಚಿ ತನ್ನ ಪರ ಮಾತನಾಡುವು ದಿಲ್ಲವಲ್ಲ ಎಂಬ ಕೊರಗು ಬೇರೆ ಲಿಂಗವ್ವನ ಮನಕ್ಕೆ ಅಂಟಿತು. ಕೈ ಕಾಲು ಮುಖ ತೊಳೆದು ಅತ್ತೆ ಬಡಿಸಿದ ಹಿಟ್ಟನ್ನೋ ಗಂಜಿಯನ್ನೊ ತಿಂದು ತುಸು ಹೊತ್ತು ಸುದಾರಿಸಿಕೊಳ್ಳಲು ಕುಳಿತಳು. ದನಕರುಗಳಿಗೆ ಮೇಯಲಿಕ್ಕೆ ಹೊತ್ತಾಯಿತು ಎಂಬ ಅಪ್ಪಣೆ ಬಸವ್ವನ ಬಾಯಿಯಿಂದ ಬರುತ್ತಿತ್ತು. ಲಿಂಗವ್ವ ಆಗಾಗ್ಗೆ ತನ್ನ ತಾಯಿಯನ್ನು ನೆನೆದು ಕಣ್ಣೀರು ಮಾಡಿಯುತ್ತಿದ್ದಳು ಮದ್ಯೆ ಮದ್ಯೆ ತನ್ನ ಮುರಿದ ಮದುವೆಯ ದೃಶ್ಯ ಬೇರೆ ಕಣ್ಣಿಗೆ ಕಟ್ಟುತ್ತಿತ್ತು ರಂಗಯ್ಯಮಾವನ ಕೈ ಹಿಡಿದಿದ್ದರೆ ತನ್ನ ಬಾಳು ಸುಖವಾಗುತ್ತಿತ್ತೆಂಬ ನೆನಹು ಆಕೆಯ ಮನಸ್ಸನ್ನು ಮುತ್ತದೆ ಬಿಡು ತ್ತಿರಲಿಲ್ಲ ಸರಿ, ಸ್ವಲ್ಪ ಹೊತ್ತು ಕುಳಿತಿದ್ದು ದನಕರುಗಳನ್ನು ಬೆಟ್ಟದ ಸೆರಗಿಗೆ ಹಿಡಿದುಕೊಂಡು ಮೇಯಿಸಲು ಹೋಗುತ್ತಿದ್ದಳು ಗಂಡನೂ ಒಂದೊಂದು ದಿನ ಗೋವುಗಳನ್ನು ಹಿಡಿದು ಆಕೆಯ ಸಂಗಡ ಬಂದುದ್ದೂ ಉಂಟು. ಎಂದೂ ದಂಪತಿಗಳು ಸರಸದ ಮಾತಿನಲ್ಲಿ ತೊಡಗಿರಲಿಲ್ಲ. ಇಂದು ನಾಗಯ್ಯ ಹೆಂಡತಿಯನ್ನು ಹಿಂಬಾಲಿಸಿ ತಾನೊಂದು ಹಸುವನ್ನು ಹಿಡಿದು ಹೋದ. ನಾಗಯ್ಯ 'ಏನು ಹೀಗೆ ಸಪ್ಪಗೆ ಇದ್ದೀಯಲ್ಲಾ, ಹೀಗಾ ದರೆ ಮುಂದೆ ಸಂಸಾರ ಸಾಗೀತೆ?'' ಎಂದು ಹೆಂಡತಿಯನ್ನು ಕೇಳಿದ. ಹೀಗೆ ಪತಿ ಕೇಳಿಯೇ ಕೇಳುತ್ತಾನೆಂದು ಲಿಂಗವ್ವ ಎಷ್ಟೋ ದಿನಗಳ

ಹಿಂದೆಯೇ ಎಣಿಸಿದ್ದಳು. ಆ ಮಾತು ಈಗ ಹೊರಬಿದ್ದಾಗ ಮೇಲು ಪಚಾರಕ್ಕಾಗಿ "ಸಪ್ಪನೆ ಏಕೆ ಇರಲಿ ? ಸಂಸಾರ ಸಾಗಿಸಲು ಅತ್ತೆಮ್ಮ ಇಲ್ಲವೆ? " ಎಂದಳು.

"ಅದು ಸರಿ, ಬೇರೆಯವರ ಹೆಂಡತಿಯರು ಸೊಸೆಯರು ನಿನ್ನ ಹಾಗೆ ಯಾವಾಗಲೂ ಅಳುತ್ತಾ ಇದ್ದಾರೆಯೆ ?"

"ನಾನೇನು ಸದಾ ಕಣ್ಣೀರು ಸುರಿಸುತ್ತಾ ಇದೇನೆಯೆ ? ಬೇರೆ ಯವರ ಕತೆ ನನಗೇಕೆ?"

ಹೆಂಡತಿಯ ಮಾತಿನಲ್ಲಿ ಅಡಗಿದ್ದ ಅರ್ಥ ನಾಗಯ್ಯನಿಗೆ ಹೊಳೆಯ ಲಿಲ್ಲ. "ಏನು ಹಾಗಂದರೆ ? ಬಹಳ ಬಿಗಿಯಿಂದ ಬಾಯಿ ಬಿಡುತ್ತಿ ಯಲ್ಲಾ" ಎಂದ

"ಬಿಗಿಯೆಂಥಾದ್ದು ಮಾತಿಗೆ ? ನನ್ನ ಹಣೆ ಬರಹ ನನ್ನದು, ಅಷ್ಟೆ "

"ಶಿವನಳ್ಳಿ ಜಾತ್ರೆ ಹತ್ತಿರವಾಯಿತು. ನಿಮ್ಮಪ್ಪ ಬರಬಹುದಲ್ಲವೆ?"

ಲಿಂಗವ್ವ ಬಾಯಿ ತೆರೆಯಲಿಲ್ಲ. ಪುನಃ ಕೇಳಿದ ನಾಗಯ್ಯ. 'ಏಕೆ ಮೂಗಿಯಾಗಿ ಬಿಟ್ಟೆಯಲ್ಲಾ?"

"ಬಂದರೆ ಬರಲಿ, ಬರದಿದ್ದರೆ ಬಿಡಲಿ. ಹೆಣ್ಣು ಮಕ್ಕಳನ್ನು ಗಂಡನ ಮನೆಗೆ ನೂಕಿಬಿಟ್ಟಮೇಲೆ ಇನ್ನೇಕೆ ಬರಬೇಕು ?" ಎಂದು ತಂದೆಯ ಮೇಲಿನ ಪ್ರೀತಿಯನ್ನು ತೋರೆದು ಮಾತನಾಡಿದಳು.

ಹೆಂಡತಿ ಹೀಗೆ ಮಾತನಾಡಿದ್ದು ನಾಗಯ್ಯನಲ್ಲಿ ವಿಸ್ಮಯ ವನ್ನುಂಟುಮಾಡದೆ ಇರಲಿಲ್ಲ ಹೀಗೇಕೆ ತಂದೆಯೆಂಬ ಅಭಿಮಾನ ವನ್ನು ತೊರೆದು ವರ್ತಿಸುತ್ತಿದ್ದಾಳೆಂದು ಆತ ಯೋಚಿಸಿದ ಯಾವ ಕಾರಣವೂ ಅವನಿಗೆ ಹೊಳೆಯಲಿಲ್ಲ ಈಚೀಚೆಗೆ ಹೆಂಡತಿಯ ನಡೆ ನುಡಿಯ ರೀತಿಯು ಒಂದು ತೆರನಾಗಿರುವುದನ್ನು ಕಾಣುತ್ತಿದ್ದ ಅವನ ಮನಸ್ಸು ಸಂಶಯ, ಕಳವಳಕ್ಕೀಡಾಯಿತು. ಆಕೆಯ ಶೀಲದಲ್ಲಿ ಮುಗ್ಗು ರಿಸಿದ ಸನ್ನಿವೇಶವೇನಾದರೂ ಇದೆಯೆ ಎಂದು ಮನಸ್ಸು ಆಕಯ ನಡೆ ನಡಿಗಳನ್ನು ಮೆಲಕು ಹಾಕಿತು. ತಾನು ಕಂಡ ಹಾಗೆ ಅಂಥ ಯಾವ ಸಂಗಕ್ಕೂ ಆಕೆ ಎಡೆಕೊಟ್ಟಿಲ್ಲ, ಹಾಗೆ ಯೋಚಿಸುವುದೇ ಅವಿವೇಕ

ಎಂದು ಸಮಾಧಾನವನ್ನು ತಂದುಕೊಂಡು ಪುನಃ ಕೇಳಿದ—

"ಯಾಕೆ, ಶಿವನಳ್ಳಿ ಜಾತ್ರೆ ಚಂದಲ್ಲವೆ ನೋಡಲಿಕ್ಕೆ ? ಕರೆದುಕೊಂಡು ಹೋಗೋಕೆ ಅಪ್ಪ ಅವ್ವ ಯಾರೂ ಬಂದಿಲ್ಲವೆ-ತಲ?''

"ಜಾತ್ರೆ ಚಂದವಲ್ಲದೆ ಏನು ಅವರ ಇಷ್ಟ ನನಗೆ ಮದುವೆ ಮಾಡಿಬಿಟ್ಟಿಬಿಟ್ಟಿದ್ದಾರಲ್ಲ, ಅವರ ಕೆಲಸ ಮುಗಿಯಿತು ನನ್ನ ಕಷ್ಟ ಸುಖ ಅವರಿಗೇಕೆ?'' ಎಂದು ದುಃಖದಿಂದ ಭಾರವಾಗಿದ್ದ ದನಿಯಲ್ಲಿ ಹೇಳಿದಳು. ನೊಂದ ಹೃದಯದಿಂದ ಬಂದ ಹೆಂಡತಿಯ ಮಾತುಗಳನ್ನು ಕೇಳಿ ನಾಗಯ್ಯನ ಹೃದಯದ ಮೂಲೆಯೊಂದರಿಂದ ಒಮ್ಮೆಲೆ ಕನಿಕರ ಮೂಡಿತು ತನ್ನ ಅತ್ತೆ ಮಾವಂದಿರು ಬಂದು ಬಹಳ ದಿನಗಳಾಗಿದ್ದುದು ನಿಜ ಹೆಂಡತಿಯ ಈ ತೆರನಾದ ವರ್ತನೆಗೆ ಅದೇ ಕಾರಣವಾಗಿರಬೇಕೆಂದು ಊಹಿಸಿದ ಅಷ್ಟರಲ್ಲಿ ಸೂರ್ಯನು ಪಶ್ಚಿಮ ದಿಗಂತದಲ್ಲಿ ಮುಳುಗಿದ ಸಂಜೆಯ ಕಡುಗೆಂಪಿನ ಬೆಳಕಿನಲ್ಲಿ ಯೌವನದ ಹೊಸ್ತಿಲನ್ನು ಮೆಟ್ಟಿದ್ದ ಹೆಂಡತಿಯ ಚಲುವನ್ನು ಬಿಟ್ಟ ಕಣ್ಣುಗಳಿಂದ ನೋಡಿ 'ನನ್ನ ಹೆಂಡತಿ ಬಲು ಚಲುವೆ' ಎಂದುಕೊಂಡ ಮನಸಿನಲ್ಲಿ ಕಿತ್ತಿದ್ದ ಹಸುರು ಹುಲ್ಲನ್ನು ಲಿಂಗಮ್ಮ ಹೊರೆಕಟ್ಟಿದಳು ನಾಗಯ್ಯ "ಇನ್ನು ಹೋಗುವ'' ಎಂದು ಹೇಳಿ ಲಿಂಗಮ್ಮನ ತಲೆಯ ಮೇಲೆ ಹುಲ್ಲು ಹೊರೆಯನ್ನು ಏರಿಸಿದ. ಸಂಜೆಗೆಂಪಿನ ಬೆಳಕಿನಲ್ಲಿ ಗೋವುಗಳನ್ನು ಹಿಡಿದು ದಂಪತಿಗಳಿಬ್ಬರೂ ಮೌನವಾಗಿ ಬಂದರು

ನಾಗಯ್ಯ ನಿರೀಕ್ಷಿಸುತ್ತಿದ್ದ ಹಾಗೆಯೇ ಹೊನ್ನಯ್ಯನು ಸಂಜೆಯ ವೇಳೆಗೆ ನವಲೂರಿಗೆ ಬಂದ ಬಹಳ ದಿನಗಳಾದ ಮೇಲೆ ಸುಳಿದ ಬೀಗನನ್ನು ಕಂಡು ಬಸಮ್ಮ 'ಇಳಿದ, ಮಗಳನ್ನು ಕರೆದುಕೊಂಡು ಹೋಗೋಕೆ' ಎಂದು ಗೊಣಗಿಕೊಂಡು ತನ್ನ ಅಸಮಾಧಾನವನ್ನು ಹೊರಗೆ ತೋರ್ಪಡಿಸಿಕೊಳ್ಳದೆ ಬೀಗನ ಎದುರು ಬಂದು, "ಏನು, ಅಪರೂಪವಾಗಿಬಿಟ್ಟರಲ್ಲ! ಮಗಳನ್ನಾದರೂ ನೋಡೋಕೆ ಆಗಾಗ್ಗೆ ಬರಬಾರದೆ?'' ಎಂದು ಹೇಳಿದಳು ಮುತ್ತಣ್ಣನೂ "ಬನ್ನಿ ಬನ್ನಿ'' ಎಂದು ಉಪಚಾರದ ಮಾತನ್ನಾಡಿದ "ಅಪ್ಪಾ ಬಂದೆಯಾ?" ಎಂದು ಲಿಂಗಮ್ಮ ಹೇಳಿ ಮನೆಯ ಒಳಗೆ ಹೋಗಿ ಒಂದು ಚಾಪೆಯನ್ನು ತಂದು ಹಜಾರ

ದಲ್ಲಿ ಬಿಡಿಸಿ "ಕಾತುಕೋವಪ್ಪಾ, ಅವ್ವ, ಅಮ್ಮ, ಶಿವಣ್ಣ ಎಲ್ಲಾ ಚೆನ್ನಾಗಿದ್ದಾರೆಯೆ ?" ಎಂದು ಪ್ರಶ್ನಿಸಿದಳು.

"ಚೆನ್ನಾಗಿದ್ದಾರವ್ವಾ ನಾಳೆ ಶಿವನಳ್ಳಿ ಜಾತ್ರೆ, ನಿಮ್ಮನ್ನು ಕರೆದು ಕೊಂಡು ಹೋಗಲು ಆತುರಾತುರವಾಗಿ ಬಂದೆ ಈಗ ತರಾತುರಿ ಕೆಲಸದ ಕಾಲ" ಎಂದು ಹೇಳಿದ ಬೀಗ ಬೀಗರು ಎದುರು ಬದರಿನಲ್ಲಿ ಕುಳಿತು ತಮ್ಮ ಹೊಲಗದ್ದೆಗಳು ಹುಲುಸಾಗಿ ಬೆಳೆದದ್ದರಿಂದ ಜೀವನಕ್ಕೇನೂ ತೊಂದರೆ ಇಲ್ಲವೆಂದು ಮಾತನಾಡುತ್ತಿದ್ದರು. ಲಿಂಗಮ್ಮನನ್ನು ನೋಡಿದಂದಿನಿಂದ ತನ್ನ ಮಗಳು ಇನ್ನೂ ತಾಯಿಯಾಗಲಿಲ್ಲವೆಂಬ ಚಿಂತೆ ಒಂದುಕಡೆ ಹೊನ್ನಯ್ಯನ ಮನಸ್ಸನ್ನು ಮುತ್ತುತ್ತಿತ್ತು. ಆ ರಾತ್ರಿ ಊಟ ಮುಗಿಯಿತು ಮುತ್ತಣ್ಣನೂ ಹೊನ್ನಯ್ಯನೂ ಹೊರ ಜಗುಲಿಯ ಮೇಲೆ ಕುಳಿತು ತಮ್ಮ ಊರಿನ ಮಾತುಕತೆಗಳಲ್ಲಿ ಮಗ್ನರಾಗಿದ್ದರು. ಬಸಮ್ಮ ಒಂದು ತಟ್ಟೆಯಲ್ಲಿ ವೀಳ್ಯವನ್ನು ತಂದು ಅವರಿಬ್ಬರ ಮುಂದಿರಿಸಿ ತಾನೂ ತುಸು ದೂರದಲ್ಲಿ ಗೋಡೆಯನ್ನು ಬೆನ್ನಿಗೆ ದಿಂಬುಮಾಡಿಕೊಂಡು ಕುಳಿತಳು ಲಿಂಗಮ್ಮನ ಮನಸ್ಸು ತನ್ನ ಊರಿನ ಜನರ ವಿಷಯವಾಗಿ ತಂದೆಯನ್ನು ಕೇಳಿ ತಿಳಿದುಕೊಳ್ಳಲು ಬಲು ತವಕ ಪಡುತ್ತಿತ್ತು. ಅತ್ತಮ್ಮ ಬೇರೆ ಪಕ್ಕದಲ್ಲೇ ಕುಳಿತಿದ್ದಾಳೆ ಅವರು ಮಾತಿನಲ್ಲಿ ತೊಡಗಿರುವಾಗ ತಾನು ಮಧ್ಯೆ ಬಾಯಿಹಾಕಿದರೆ ಎಲ್ಲಿ ಆಕೆ ಮೇಲೆ ಎರಗುವಳೋ, ಇನ್ನು ಶಿವನಳ್ಳಿ ಜಾತ್ರೆಯ ಮುಖ ಕಾಣದಂತೆ ಮಾಡಿಯಾಳೋ ಎಂದು ಅಂಜಿ ಒಳ ಮನೆಯ ಬಾಗಿಲನ್ನು ಒರಗಿ ಇವರ ಮಾತುಗಳನ್ನು ಕೇಳುತ್ತಾ ನಿಂತಳು ಮಾತು ಯಾವ ಯಾವದೋ ವಿಷಯವನ್ನು ಕುರಿತಾದುದಾಗಿದ್ದು ತನ್ನ ಬಂಜೆ ತನದ ವಿಷಯಕ್ಕೆ ಬಂದಿತು. ಹೊನ್ನಯ್ಯನೆಂದ

"ಮಗಳ ಹೊಟ್ಟೆಯಲ್ಲಿ ಎಂಥಾದ್ದಾದರು ಒಂದು ಹುಟ್ಟಿದ್ದರೆ ನಮಗೆಲ್ಲಾ ಎಷ್ಟು ಸಂತೋಷವಾಗುತಿತ್ತು ಕಳೆದ ವರ್ಷದ ಜಾತ್ರೆಯಲ್ಲಿ ಶಿವನಿಗೆ ಎಷ್ಟು ಹರಕೆ ಮಾಡಿದ್ದೆವು ಅಂತೀರ ಹಣ್ಣು ಕಾಯಿ ಹೊತ್ತಿದ್ದವು. ಏನು ಮಾಡುವುದು ? ಇನ್ನೂ ನಮ್ಮ ಲಿಂಗಮ್ಮನ ಮೇಲೆ ದೇವರು ಕಣ್ಣು ಬಿಟ್ಟಿಲ್ಲ. ಅದಕ್ಕೇ ಈ ವರ್ಷ ಒಂದು ದಿನ

ಉಪವಾಸ ಇರಿಸಿ ಬಹಳ ನಿಷ್ಠೆಯಿಂದ ಜಾತ್ರೆ ಮಾಡಬೇಕೊಂತ ನಮ್ಮ ಹೆಂಗಸು ಮನಸ್ಸು ಮಾಡಿದ್ದಾಳೆ".

ಬೀಗನ ಮಾತುಗಳನ್ನು ಮುತ್ತಣ್ಣನೇನೋ ಶಾಂತ ಮನಸ್ಸಿನಿಂದ ಕೇಳುತ್ತಿದ್ದ. ತನ್ನ ಸೊಸೆಯ ಬಂಜೆತನಕ್ಕಾಗಿ ಮನಸ್ಸಿನಲ್ಲಿ ಮರುಗಿದ-ಬಸವ್ಮನ ಮನಸ್ಸಿನಲ್ಲಿ ಹೊನ್ನಯ್ಯನಾಡುತ್ತಿದ್ದ ಮಾತು ಮಾತಿಗೂ ಬೆಂಕಿ ಉರಿ ಎದ್ದಹಾಗೆ ಕೋಪ ಏಳುತ್ತಿತ್ತು. ಓ, ಓ ! ಏನು ಮಗಳ ಮೈಮೇಲೆ ಒಂದೆರಡು ಸೇರು ಚಿನ್ನದ ಒಡವೆಗಳನ್ನು ಹಾಕಿರುವವನ ಹಾಗೆ ಮಾತಾಡುತ್ತಾನೆ, ಇರಲಿ ಇವನ ಮುಖ ಮುರಿಯಬೇಕೆಂದು ನಿರ್ಧರಿಸಿ "ಆ ಮಾತು ಬಿಡಿ, ಅವಳಿಗೆ ಮಕ್ಕಳಾಗುವುದು ಒಂದೇ, ನಮ್ಮೂರ ಕಬ್ಬಾಳಮ್ಮನ ಗುಡಿಯ ಮುಂದಿನ ಹೊನ್ನೆ ಮರದ ಸಿಡಿಕಂಬ ಚಿಗರುವುದೂ ಒಂದೆ" ಎಂದು ಹಂಗಿಸಿ ಮಾತನಾಡಿ, ಬೀಗನ ಮುಖ ಮುರಿದಳು ಇದರಿಂದ ಹೊನ್ನಯ್ಯನ ಮನಸ್ಸಿಗೆ ಚುಚ್ಚಿದಂತಾಯಿತು. ಲಿಂಗಮ್ಮನಿಗಂತೂ ಹೇಳತೀರದ ಸಂಕಟವಾಯಿತು. ಕಣ್ಣುಗಳು ಹನಿಗೂಡಿದವು "ಇದೂ ನನ್ನ ಕರ್ಮ! ನಾನು ತೆಪ್ಪನಿದ್ದರೂ ಇರಗೊಡಿಸುವುದಿಲ್ಲವಲ್ಲ ಈ ಅಮ್ಮ ದೇವರು ಇವಳಿಗೆ ಏನು ಬುದ್ಧಿ ಕೊಟ್ಟಿದ್ದಾನೆ' ಎಂದು ಮರುಗಿದಳು. ತಾನು ಬಂಜೆ ಎಂದು ಜನರು ಆಡಿಕೊಳ್ಳುತ್ತಾರೇನೊ ಎಂಬುದೊಂದೆ ಚಿಂತೆ ಮನದಲ್ಲಿ ಮನೆ ಮಾಡಿಕೊಂಡಿತು. ಆಕೆಗೆ ತನ್ನ ಗಂಡನ ಜೊತೆಯಲ್ಲಿ ಬೇರೆಯ ದಂಪತಿಗಳಂತೆ ಮನವೂ ಹೊಂದಿರಲಿಲ್ಲ, ದೇಹವೂ ಹೊಂದಿರಲಿಲ್ಲ ಏನೋ ಪತಿಯೆಂಬ ಭಯದಿಂದ ಅಷ್ಟಿಷ್ಟರಲ್ಲೇ ತನ್ನ ಗಂಡನ ಸಂಗಡ ವರ್ತಿಸುತ್ತಾ ಕಾಲ ನೂಕುತ್ತಿದ್ದಳು. ತನ್ನ ಪತಿಯ ಸಂಗಡ ಪ್ರೇಮದಿಂದಿರಬೇಕಾದ ಸಂದರ್ಭಗಳೊದಗಿದಾಗಲೂ ಮೈ ಕೈ ಕೊಟ್ಟು ಸರಸದಿಂದಿರಲು ಎಷ್ಟು ಮಾತ್ರಕ್ಕೂ ಮನಸ್ಸು ಒಗ್ಗದು. ತಾನು ಒಲಿಯದ ನಾರಿಯಾಗಿ ಗಂಡನ ಕಣ್ಣಿಗೆ ಮಾರಿಯಂತೆ ಕಾಣುತ್ತಿರುವುದನ್ನೂ ಆಕೆ ತಿಳಿಯದೆ ಇರಲಿಲ್ಲ.

ಬಸಮ್ಮ ಬೀರಿದ ಬಿರುನುಡಿಗಳಿಂದ ಎಲ್ಲರೂ ಸ್ತಬ್ಧರಾಗಿ ಕುಳಿತರು, ಸ್ವಲ್ಪ ಹೊತ್ತು. ಅನಂತರ ಮೌನವನ್ನು ಮುರಿದು ಹೊನ್ನಯ್ಯ ತುಸು ಕೋಪವನ್ನು ಬೀರುವ ದನಿಯಲ್ಲಿ "ಏನು ಮಾತು ನೀವು ಹೇಳು

ವುದು ? ಅವಳಿಗೇನು ತಲೆ ಕೂದಲು ನರೆತಿದೆಯೇ ಹೀಗೆಲ್ಲಾ ಮಾತಾ ಡುವುದಕ್ಕೆ ? ನಿನ್ನೆ ಮೊನ್ನೆ ಹುಟ್ಟಿದವಳು ಕೆಲವು ಹೆಣ್ಣು ಮಕ್ಕಳಿಗೆ ಬಹಳ ವರ್ಷಗಳ ನಂತರ ಮಕ್ಕಳಾಗುತ್ತವೆ ಸಂತಾನ ಯಾವಾಗ ಆಗಬೇಕೋ ಅದೆಲ್ಲಾ ಅವರವರ ಋಣ, ಪುಣ್ಯ" ಎಂದು ಬೀಗಿತ್ತಿಯು ಮಾತನ್ನು ತೇಲಿಸಿಬಿಟ್ಟ. ಮುತ್ತಣ್ಣ "ನೀವು ಹೇಳುವುದು ಸರಿ" ಎಂದು ಹೊನ್ನಯ್ಯನ ಮಾತಿಗೆ ಬೆಂಬಲವಿತ್ತ. ಇದರಿಂದ ಬಸಮ್ಮನಿಗೆ ಗಂಡನ ಮೇಲೆ ಕೋಪ ಕೆರಳಿತು ಸಿಡಿಮಿಡಿಗುಟ್ಟುತ್ತಾ, "ಇನ್ನು ಹೊತ್ತಾ ಯಿತು. ದೀಪ ಓಲಾಡುತ್ತಾ ಇದೆ ಮಲಗಿಕೊಳ್ಳಿ, ದಣಿದು ಬಂದಿದ್ದೀರಿ" ಎಂದು ಮೇಲೆದ್ದಳು. ಲಿಂಗಮ್ಮನ ಕಡೆ ತಿರುಗಿ "ಯಾಕಮ್ಮೀ ನಿಂತಿ ದ್ದೀಯೆ ? ನಿಮ್ಮಪ್ಪನಿಗೆ ಒಂದು ಒಳ್ಳೆ ಚಾಪೆ ತಂದು ಬಿಡಿಸಿ ತಲೆದಿಂಬು ಕೊಡು, ಮಲಗಲಿ" ಎಂದು ಹೇಳಿ ಹೋಗಿ ಚಾಪೆಯ ಮೇಲೆ ಮೈಚಾಚಿ ದಳು. ತನ್ನ ತಂದೆಗೆ ಒಂದು ಚಾಪೆಯನ್ನು ಹಾಸಿಕೊಟ್ಟಳು ಲಿಂಗಮ್ಮ. "ನಾಳೆ ಹೊತ್ತಿಗೆ ಮುಂಚೆ ಊರಿಗೆ ಹೋಗಬೇಕು. ನಿಮ್ಮ ಯಜಮಾನ ರಿಗೂ ಹೇಳಮ್ಮ" ಎಂದಷ್ಟು ಹೇಳಿ ಹೊನ್ನಯ್ಯ ನಿದ್ದೆಹೋದ. ಲಿಂಗಮ್ಮ ನಿಗೆ ತನ್ನ ತಂದೆ ಹೇಳಿದ ಮಾತನ್ನು ತನ್ನ ಗಂಡನಿಗೆ ಹೇಳಲು ಮನಸ್ಸು ಬರಲಿಲ್ಲ ಹೆಂಡತಿ ಮಲಗಲು ಬಂದಾಗ ಶಿವನಳ್ಳಿ ಜಾತ್ರೆಗೆ ಹೋಗುವುದೇ ಬೇಡವೆ ಎಂಬುದನ್ನು ನಿರ್ಧರಿಸಲು ನಾಗಯ್ಯ ಕಾತರನಾಗಿದ್ದ. ಕಣ್ಣು ಬಿಟ್ಟುಕೊಂಡೇ ಚಾಪೆಯಮೇಲೆ ಮಲಗಿದ್ದ. ಯಾವಾಗ ನಿದ್ರಾದೇವಿ ಅವನನ್ನು ಮುತ್ತಿದಳೋ ತಿಳಿಯದು. ಬೆಳಗಿನ ಜಾವ ಕಳೆದ ಮೇಲೆ ಎಚ್ಚತ್ತ ಅವನಿಗೆ ಹೆಂಡತಿ ತುಸು ದೂರದಲ್ಲಿ ನಿದ್ರಿಸುತ್ತಿದ್ದುದು ಕಾಣಿಸಿತು ಆಗಲೇ ಬೆಳಕಾಗಿತ್ತು. ಲಿಂಗಮ್ಮನು ಹಾಸಿಗೆಯಿಂದ ಎದ್ದ ಮೇಲೆಯೇ ಕೇಳಿದ, ಏನಾಯಿತೆಂದು.

"ಆಗುವುದೇನು? ಜಾತ್ರೆ ವರ್ಷಕ್ಕೊಮ್ಮೆ ನಡೆಯುವುದು. ಊರಿಗೂ ಹೋಗಿ ಬಹಳ ದಿನವಾಯಿತು. ಸ್ವಲ್ಪ ಸುಧಾರಿಸಿಕೊಂಡು ಬರಬಾರದೆ?" ಎಂದಳು ಮೆಲು ದನಿಯಲ್ಲಿ

"ಅದು ಸರಿ, ಹೋಗಬಹುದಲ್ಲ. ಆದರೆ ಒಂದೆರಡು ದಿನ ದಲ್ಲೇ ಬಂದುಬಿಡು" ಎಂದ. ತನಗೂ ಹೆಂಡತಿಯನ್ನು ಹಿಂಬಾಲಿಸಿ

ಹೋಗಬೇಕೆಂಬ ಬಯಕೆ, ಆದರೆ ಆಕೆಯ ಬಾಯಿಂದ ತಾನೂ ಬರ ಬೇಕೆಂದು ಕೇಳಿಯಾಳೋ ಇಲ್ಲವೊ ಎಂದು ಹಾಗೆ ಮಾತು ತೆಗೆ; ಮುಂದೆ ಲಿಂಗಮ್ಮ ಯಾವ ಮಾತನ್ನೂ ಆಡಲಿಲ್ಲ ನಾಗಯ್ಯನಿಗೆ ನಿರಾಶೆಯ ಜೊತೆಗೆ ಸಿಟ್ಟೂ ಬಂದಿತು ಹೋಗಬೇಡವೆಂದು ಅಪ್ಪಣೆ ಮಾಡಿಬಿಡಲೇ? ಎಂದೆಂದುಕೊಂಡ ಅಷ್ಟರಲ್ಲಿ ಹೊನ್ನಯ್ಯನಿಂದ ಅಳಿಯ ನಿಗೆ ಬೇಡಿಕೆ ಬಂದಿತು, ಜಾತ್ರೆಗೆ ಗಂಡ ಹೆಂಡತಿ ಇಬ್ಬರೂ ಬರಬೇ ಕೆಂದು. ಅದರಿಂದ ನಾಗಯ್ಯನಿಗೆ ಕೊಂಚ ಸಮಾಧಾನವಾದರೂ ಮನಸ್ಸು ಒಡಂಬಡಲಿಲ್ಲ ಇಬ್ಬರೂ ಒಂದೆರಡು ದಿನವಿದ್ದು ಬರಬೇ ಕೆಂದು ಹೊನ್ನಯ್ಯ ಪುನಃ ಒತ್ತಾಯ ಮಾಡಿದಮೇಲೆ ನಾಗಯ್ಯನ ಸಿಟ್ಟು ಕುಸಿಯಿತು

ಹೊನ್ನಯ್ಯ ಅಳಿಯನನ್ನೂ ಮಗಳನ್ನೂ ಕರೆದುಕೊಂಡು ಮುಂಜಾನೆ ಊರಿಗೆ ಹೊರಟ ಮುತ್ತಣ್ಣನೂ ಬಸಮ್ಮನೂ 'ಜಾಗ್ರತೆ ಕಳುಹಿಸಿಕೊಡಿ. ಇಲ್ಲಿ ಹೊಲ ಗದ್ದೆ ಹಣ್ಣಾಗಿ ಕಟಾವಿಗೆ ಬಂದಿವೆ" ಎಂದು ಎಚ್ಚರಿಸುವುದನ್ನು ಮರೆಯಲಿಲ್ಲ

ಹೊತ್ತು ನೆತ್ತಿಯ ಮೇಲಕ್ಕೆ ಏರುವುದರಲ್ಲೇ ಮೂವರೂ ರಾಮ ನಗರವನ್ನು ಸೇರಿದರು ಮಗಳ ಬಾಡಿದ ಮುಖವನ್ನು ತಿಮ್ಮಕ್ಕ ನೋಡಿ ತನ್ನ ಅಂತರಂಗದಲ್ಲಿಅಡಗಿದ್ದ ದುಃಖವನ್ನು ಮೌನದಿಂದಲೇ ಸೂಚಿಸಿದಳು ತಮ್ಮನಾದ ಶಿವಣ್ಣ "ಅಕ್ಕ ಬಂದೆಯಾ!" ಎಂದ, ಹರ್ಷದ ದನಿಯಲ್ಲಿ ನಾಗಯ್ಯ ಹೊರ ಜಗುಲಿಯ ಮೇಲೆ ಕುಳಿತ ಕರಿಹೊನ್ನಮ್ಮ 'ಏನಪ್ಪ, ಚೆನ್ನಾಗಿದ್ದೀಯಾ?" ಎಂದು ಬಾಯಿ ಉಪಚಾರಕ್ಕೆ ಕೇಳಿದಳು ಲಿಂಗಮ್ಮನ ಗೆಳತಿಯರು ಬಂದು ಹುಸಿನಗೆಯನ್ನು ಬೀರುತ್ತಾ "ಏನು ಮಹರಾಯತಿ, ಹುಟ್ಟಿದ ಊರನ್ನೇ ತೊರೆದುಬಿಟ್ಟೆಯಲ್ಲಾ! ಬಹಳ ಸಂಪತ್ತಿನಲ್ಲಿ ಒರಗಿ ದ್ದೀಯೆ ಅಂತ ಕಾಣುತ್ತದೆ. ನಮ್ಮನ್ನೂ ಮರೆತುಬಿಟ್ಟೆಯಲ್ಲಾ!" ಎಂದು ಲಿಂಗಮ್ಮನನ್ನು ಕುಚೇಷ್ಟೆ ಮಾಡಿದರು. ಲಿಂಗಮ್ಮ ತನ್ನ ನೊಂದ ಎದೆಯನ್ನು ನಟನೆಯ ನಗುವಿನಿಂದ ಮರೆಮಾಚಿಕೊಂಡು "ಸಿರಿಬಂದರೆ ಊರೂ ಮರೆತುಹೋಗುತ್ತೆ, ಸಂಗಾತಿಯರೂ ಮರೆತು ಹೋಗುತ್ತಾರೆ" ಎಂದು ನಕ್ಕಳು.

"ನೀನು ತೊಟ್ಟಿಲು ಹೊತ್ತೇ ಬರ್ತೀಯೆ ಎಂದು ನಾವೆಲ್ಲಾ ಕಾದಿದ್ದೆವು" ಎಂದು ಮತ್ತೆ ಚೇಷ್ಟೆ ಮಾಡುತ್ತಾ ನಕ್ಕರು

"ನಾಳೆ ಶಿವನಳ್ಳಿ ಜಾತ್ರೆಯಲ್ಲಿ ಒಂದು ತೊಟ್ಟಿಲನ್ನು ಕೊಂಡು ಹೊತ್ತು ತಂದರಾಯಿತಲ್ಲ" ಎಂದು ಲಿಂಗಮ್ಮ ಗೆಳತಿಯರನ್ನು ನಗೆಯ ಹೊಳೆಯಲ್ಲಿ ತೇಲಿಸಿದಳು ಮರುಕ್ಷಣದಲ್ಲಿ ಆಕೆ ಗಂಭೀರ ಭಾವವನ್ನು ತಾಳಿ ತನ್ನ ಸಂಗಾತಿಯರಿಗೆ ತನ್ನ ಬಾಳನ್ನು ಬಣ್ಣಿಸುತ್ತಿದ್ದು "ನಾಳೆ ನಾವೆಲ್ಲಾ ಒಟ್ಟಿಗೆ ಶಿವನಳ್ಳಿ ಜಾತ್ರೆಗೆ ಹೋಗುವಾ ಬಹಳ ದಿನಗಳಾಗಿದ್ದವು ಒಟ್ಟಿಗೆ ಸೇರಿ" ಎಂದು ಹೇಳಿ ಕಳುಹಿಸಿಕೊಟ್ಟಳು. ತಿಮ್ಮಕ್ಕ ಮಗಳನ್ನು "ಈಗ ಹೇಗೆ ನಿಮ್ಮ ಅತ್ತೆ, ಯಜಮಾನರು ?" ಎಂದು ಕೇಳಿದಳು. ಎಲ್ಲಾ ಅದೇನೆ, ಬೇರೆ ಹೇಗಾದೀತೆಂದು ಒಂದೇ ಮಾತಿನಲ್ಲಿ ಲಿಂಗಮ್ಮ ತನ್ನ ಬಾಳನ್ನು ಬಿಚ್ಚಿ ಹೇಳಿದಳು ರಾತ್ರಿ ಎಲ್ಲಾ ಊಟ ಮುಗಿಸಿ ಮಲಗಿದರು ತಾಯಿ ಮಕ್ಕಳು ಮಲಗಿದ್ದ ಕೋಣೆಯಲ್ಲಿ ಹಣತೆಯೊಂದು ಸಮರಾತ್ರಿಯವರೆಗೂ ನಸು ಬೆಳಕನ್ನು ಚಲ್ಲುತ್ತಿದ್ದು ಎಣ್ಣೆ ತೀರಿದ ಮೇಲೆ ನಂದಿ ಹೋಯಿತು ಅವರಿಬ್ಬರೂ ಬಹಳ ಹೊತ್ತಿನತನಕ ನವಿಲೂರಿನ ಜನರ ನಡೆನುಡಿಗಳ ವಿಚಾರವಾಗಿ ಮಾತನಾಡುತ್ತಿದ್ದರು ಒಂದೊಂದು ಸಲ ಮಾತು ರಾಮನಗರಕ್ಕೆ ಹೊಸದಾಗಿ ಬಂದ ಸೊಸೆಯಿಂದಿರ ಬಾಳಿನ ಸೊಗಸಿನ ಕಡೆ ಹರಿಯುತ್ತಿತ್ತು ಲಿಂಗಮ್ಮನಿಗೆ ರಂಗಯ್ಯನ ರೂಪು ಆಗಾಗ್ಗೆ ಮನಸ್ಸಿಗೆ ಸುಳಿದಂತ ಭಾಸವಾಗಿ 'ಏನೋ ಆದದ್ದಾಯಿತು ಇನ್ನು ಮಲಗವ್ವ" ಎಂದುತಾಯಿಯನ್ನು ಸಮಾಧಾನ ಪಡಿಸುತ್ತಿದ್ದಳು ತನ್ನ ಬಾಳಿನ ಗೋಳು ತನ್ನ ತಾಯಿಯ ಮನಸ್ಸನ್ನು ನೋಯಿಸುತ್ತದೆಂದು ಅರಿತು ಲಿಂಗಮ್ಮ ತಾಯಿಯು ಕೇಳಿದ ಪ್ರಶ್ನೆಗಳಿಗೆ ಆ, ಹೂ, ಎಂದಷ್ಟೆ ಕೆಲವು ವೇಳೆ ಉತ್ತರ ಕೊಡುತ್ತಿದ್ದಳು ಮಾತು ಮಾತನಾಡುತ್ತಿದ್ದ ಹಾಗೆಯೇ ನಿದ್ರಾದೇವಿಯ ಗಾಢಾಲಿಂಗನದಲ್ಲಿ ಇಬ್ಬರೂ ಸಿಕ್ಕಿಹೋದರು.

ಬೆಳಗಾಗುವುದರಲ್ಲೇ ಎಲ್ಲರೂ ಎದ್ದು ಮಿಂದು ಮಡಿಯುಟ್ಟರು. ಲಿಂಗಮ್ಮ ತನಗಾಗಿ ತಂದಿದ್ದ ಹೊಸ ಕಾಗಿನ ಸೀರೆಯನ್ನುಟ್ಟು ಬಿಳಿಯ ಮಲ್ಲಿನ ಕುಪ್ಪಸವನ್ನು ತೊಟ್ಟಳು. ಒಡವೆಗಳಿಂದ ಆಕೆ ಅಲಂಕರಿಸಿ

ಕೊಂಡಿರದಿದ್ದರೂ ದೇಹದ ಮಾಟ ರಸಿಕರ ಕಣ್ಣನ್ನು ಸೆಳೆಯುವಷ್ಟು ಸುಂದರವಾಗಿತ್ತು. ಹೊನ್ನಯ್ಯ ಮಗಳನ್ನೊಮ್ಮೆ ಕಣ್ಣು ತುಂಬಾ ನೋಡಿ ನೊಂದ ಹೃದಯದಿಂದ ತನ್ನಲ್ಲೇ ಮರುಗುತ್ತಾ "ದೇವರಿಗೆ ಹಣ್ಣು ಕಾಯಿಯನ್ನು ಭಯಭಕ್ತಿಯಿಂದ ಮಾಡಿಸಮ್ಮ, ತಗೆದುಕೋ" ಎಂದು ಹೇಳುತ್ತಾ ಎರಡು ರೂಪಾಯಿಗಳನ್ನು ಮಗಳ ಕೈಗಿತ್ತ. ನಾಗಯ್ಯ ಲಿಂಗಮ್ಮ ತಿಮ್ಮಕ್ಕ ಮೂವರೂ ಹೊರಟರು ಶಿವಣ್ಣ ತನ್ನ ಅಕ್ಕನ ಜೊತೆಯಲ್ಲಿ ತಾನೂ ಜಾತ್ರೆಗೆ ಹೋಗಬೇಕೆಂದು ಮುನಿಸಿಕೊಂಡು ಕಣ್ಣೀರು ತಂದುಕೊಂಡ ತುಂಬುಜಾತ್ರೆಯಲ್ಲಿ ಜನರ ನೂಕುನುಗ್ಗ ಲಿಂದೂ ಬಹಳ ದೂರ ನಡೆದು ನಡೆದು ಸಾಕಾಗುತ್ತದೆಂದೂ ಹೊನ್ನಯ್ಯ ಮಗನಿಗೆ ಹೇಳಿದರೂ ಪ್ರಯೋಜನವಾಗಲಿಲ್ಲ. ಲಿಂಗಮ್ಮನಿಗೆ ಇರುವ ಒಬ್ಬ ತಮ್ಮನನ್ನು ಸಂಗಡ ಕರೆದುಕೊಂಡುಹೋಗಬೇಕೆಂಬ ಆಸೆ ಅಂಕು ರಿಸಿತು. ತಂದೆಯ ಕಡೆ ತಿರುಗಿ "ಸಣ್ಣ ಹುಡುಗ, ಜಾತ್ರೆ ನೋಡಲು ಆಸೆ ಇಲ್ಲವೆ? ಅವನೂ ಬರಲಿ ನಾವೆಲ್ಲ ಸಂಗಡ ಇಲ್ಲವೆ?" ಎಂದು ಹೇಳಿ ತಂದೆಯನ್ನು ಒಪ್ಪಿಸಿದಳು "ನಾನು ಬಿಕೋ ಅಂತ ಹೋಗಬೇಕು ಅವನೂ ಬರಲಿ" ಎಂದು ನಾಗಯ್ಯ ಹೆಂಡತಿಯ ಮಾತಿಗೆ ಪ್ರೋತ್ಸಾಹಿಸಿದ" ಸರಿ, ಶಿವಣ್ಣ ಆನಂದದಿಂದ ಕುಣಿದಾಡುತ್ತಾ ಮಾವನ ಸಂಗಡ ಹೊರಟ. ಲಿಂಗಮ್ಮನ ಸಂಗಾತಿಯರೂ ತಮ್ಮ ಮಕ್ಕಳುಗಳನ್ನು ಎತ್ತಿಕೊಂಡು ಹೊರಟರು ಜಾತ್ರೆ ನೋಡುವ ಉತ್ಸಾಹದಲ್ಲಿ ಬಿಸಿಲು ಏರುವುದರಲ್ಲೇ ನಾಲ್ಕು ಮೈಲಿಗಳನ್ನು ನಡೆದುಬಂದುದೂ ಅವರಿಗೆ ಅರಿವಾಗಲಿಲ್ಲ. ಜಾತ್ರೆಯಲ್ಲಿ ತಿಮ್ಮಕ್ಕ ಹಣ್ಣು ಕಾಯಿ, ಕಡ್ಡಿ ಕರ್ಪೂರ ತೆಗೆದುಕೊಂಡಳು. ಲಿಂಗಮ್ಮನ ಗೆಳತಿಯರೂ ತಗೆದುಕೊಂಡರು ಎಲ್ಲರೂ ದೇವಾಲಯಕ್ಕೆ ಜನಸಂದಣಿಯ ಮಧ್ಯೆ ನುಗ್ಗಿಹೋಗಿ ಪೂಜೆ ಮಾಡಿಸಿದರು ತಿಮ್ಮಕ್ಕ ದೇವರ ವಿಗ್ರಹದ ಮುಂದ ನಿಂತು ಕೈಮುಗಿದುಕೊಂಡು "ನನ್ನ ಮಗ ಳಿಗೆ ಸುಖ ಕೊಡು ದೇವರೇ ಇನ್ನಿಂಥಾ ವರ್ಷಕ್ಕೆ ನನ್ನ ಮಗಳು ತೊಟ್ಟಿ ಲಲ್ಲಿ ಕೂಸು ಹೊತ್ತು ತಂದು ನಿನ್ನ ಸೇವೆ ಮಾಡುವಂತೆ ಕರುಣಿಸು ಭಗವಂತ" ಎಂದು ದೈನ್ಯದಿಂದ ಬೇಡಿದಳು ಎಲ್ಲರೂ ದೇವಸ್ಥಾನ ದಿಂದ ಹೊರಬಿದ್ದರು. ಮಲ್ಲಿಗೆ ಮೊಗ್ಗಿನಿಂದ ಶೃಂಗರಿಸಿದ್ದ ತೇರಿನ

ಮೇಲಕ್ಕೆ ಲಿಂಗಮ್ಮ ಬಾಳೆ ಹಣ್ಣನ್ನೂ ದವನವನ್ನೂ ಎಸೆದಳು ಜಾತ್ರೆ ಯಲ್ಲಿ ಸೇರಿದ್ದ ಅಂಗಡಿಗಳಲ್ಲಿ ಒಂದಷ್ಟು ತಿಂಡಿಯನ್ನು ಕಟ್ಟಿಸಿಕೊಂಡಳು. ಶಿವಣ್ಣ ತನ್ನ ಅಕ್ಕನನ್ನು ಹಿಂಸಿಸಿ ಲಾಡು,' ಬಣ್ಣದ ಬತ್ತಾಸನ್ನು ತೆಗೆಸಿ ಕೊಂಡ. ನಾಗಯ್ಯ ಮೈದುನನ ಕಣ್ಣಿಗೆ ಆಕರ್ಷಕವಾಗಿದ್ದ ಬಣ್ಣ ಬಣ್ಣದ ಚೌಕವೊಂದನ್ನು ಕೊಂಡು ಅವನ ಕತ್ತಿಗೆ ಸುತ್ತಿದ. ಚೌಕ ವನ್ನು ನೋಡಿ ಶಿವಣ್ಣನ ಮನಸ್ಸು ಸಂತೋಷದಿಂದ ಹಗುರವಾಯಿತು ಆಗಾಗ್ಗೆ ಚೌಕವನ್ನೇ ನೋಡಿ ನೋಡಿ ಹಿಗ್ಗುತ್ತಿದ್ದ. ಜಾತ್ರೆಯಲ್ಲಿ ಅಪಾರ ವಾದ ಜನಸಂದಣಿ, ಜನರ ಗಿಜಿಗಿಜಿ ಗುಂಪು. ಎಲ್ಲಿ ನೋಡಿದರೂ ನಗು ಮುಖದ ಜನ. ಜನರ ಸಂತಸದ ದನಿ ಆಕಾಶದಲ್ಲಿ ಮೊರೆಯುತ್ತಾ ಅಲೆ ಅಲೆಯಾಗಿ ತೇಲುತ್ತಿತ್ತು. ಲಿಂಗಮ್ಮ ಗೆಳತಿಯರ ಸಂಗಡ ಹೊಸ ಹೊಸ ಉಡುಪಿನ ಜನ, ಮಲ್ಲಿಗೆ ಮೊಗ್ಗಿನ ದಂಡೆಗಳಿಂದ ಅಲಂಕೃತವಾಗಿ ದೇವರ ವಿಗ್ರಹವನ್ನು ಹೊತ್ತು ಕಣ್ಣಿಗೆ ಹಬ್ಬವಾಗಿದ್ದ ತೇರು, ಗೋಪುರ ಗಳ ಮೇಲೆ ಕಳಸಗಳನ್ನು ಹೊತ್ತು ಕಂಗೊಳಿಸುತ್ತಿದ್ದ ದೇಗುಲ, ಅಂಗಡಿ ಮುಂಗಟ್ಟುಗಳು—ಎಲ್ಲವನ್ನೂ ನೋಡುವ ಉತ್ಸಾಹದಲ್ಲಿ ಉನ್ಮತ್ತಳಾ ಗಿದ್ದಳು. ಅವಳು ಮನದಣಿಯೆ ಇಂಥ ಸುಂದರ ದೃಶ್ಯವನ್ನು ನೋಡು ತ್ತಿದ್ದ ಹಾಗೆಯೇ ತನ್ನ ಸ್ಮೃತಿ ಪಥದಲ್ಲಿ ರಂಗಯ್ಯನ ನೆನಪು ಆಕೆಯ ಅರಿವಿಲ್ಲದೆ ಕಾಣಿಸಿಕೊಂಡಿತು. ರಂಗಯ್ಯ ಮಾವ ಎಲ್ಲಿಯಾದರೂ ಸಿಕ್ಕಿಯಾನೆ' ಎಂಬ ಹಂಬಲ ಗಳಿಗೆ ಗಳಿಗೆಗೂ ಮೂಡಲಾರಂಭಿಸಿತು. ತನ್ನ ಗೆಳತಿಯರಿಂದ ಮನದಾಸೆಯನ್ನು ಬಚ್ಚಿಟ್ಟು "ಗೌರಿ, ಮತ್ತೊಂದು ಸಾರಿ ಜಾತ್ರೆಯನ್ನು ನೋಡಿ ಬರೋಣ ನಡೆ" ಎಂದು ಹೇಳಿ ಹೊರ ಟಳು. ನಾಗಯ್ಯ ಹೊತ್ತು ಇಳಿಯುತ್ತಿದೆ. ಜಾಗ್ರತೆ ಬಂದುಬಿಡೆಂದು ಹೆಂಡತಿಗೆ ಎಚ್ಚರಿಸಿದ. ಜನರ ಗುಂಪು ಹೆಚ್ಚಾಗಿರುವ ಕಡೆಗೆ ಲಿಂಗ ಮ್ಮನ ಕಣ್ಣುಗಳು ತೀಕ್ಷ್ಣವಾಗಿ ನುಗ್ಗಿ ಎಲ್ಲರ ಮುಖವನ್ನೂ ಹುಡುಕು ತ್ತಿದ್ದವು. ಆದರೆ ಅವಳ ಆಶೆ ವ್ಯರ್ಥವಾಯಿತು ನಿರಾಶೆಯ ಮೋಡ ಮನಸ್ಸಿನ ಮೇಲೆ ಅಚ್ಚೊತ್ತಿತು ಮತ್ತೊಮ್ಮೆ ಜಾತ್ರೆಯನ್ನೆಲ್ಲಾ ಸುತ್ತಿ ಊರಿಗೆ ಹೊರಡಲು ಹೊತ್ತಾಗುತ್ತದೆಂದು ಗೌರಿಯನ್ನು ಕರೆದುಕೊಂಡು ಹಿಂದಕ್ಕೆ ಬಂದಳು. ಆದರೆ ರಂಗಯ್ಯನ ನೆನಪು ಮಾತ್ರ ಅವಳ ಮನ

ದಲ್ಲಿ ಮನೆಮಾಡಿಕೊಂಡಿತು.

ಹೊತ್ತು ಇಳಿಮುಖವಾಯಿತು. ಎಲ್ಲರೂ ಊರಕಡೆ ಹೊರಟರು. ದಾರಿಯುದ್ದಕ್ಕೂ ಜಾತ್ರೆಯ ತುಂಬಾ ಇದ್ದ ಜನ, ತೇರಿನ ಶೃಂಗಾರ, ವಾದ್ಯಗಳ ಮಧುರ ಮೇಳ—ಎಲ್ಲವನ್ನೂ ಕುರಿತು ಗೆಳತಿಯರು ಲಿಂಗಮ್ಮ ನನ್ನು ಮಾತಿಗೆ ಎಳೆಯುತ್ತಿದ್ದರೂ ಆಕೆಯ ಮನಸ್ಸು ಎಲ್ಲಿಯೋ ಹಾರಾ ಡುತ್ತಿತ್ತು. ದೇಹ ಮಾತ್ರ ಬೊಂಬೆಯಂತೆ ದಾರಿಯುದ್ದಕ್ಕೂ ಸಾಗು ತ್ತಿತ್ತು. ತಾಯಿಯು ಮಾತನಾಡಿಸಿದರೆ ಒಮ್ಮೊಮ್ಮೆ 'ಹೂ' ಗುಟ್ಟುತ್ತಿ ದ್ದಳು. "ಯಾಕೆ, ಜೀವಕ್ಕೆ ಚೆಂದಾಗಿಲ್ಲವೆ ?" ಎಂದು ಗೆಳತಿಯರು ಕೇಳಿದರೆ " ನನಗೇನು ರೋಗ ಬಂದಿದೆ ? ಚಂದಾಗಿರದೆ ಏನು?" ಎಂದು ಉತ್ತರಿಸುತ್ತಿದ್ದಳು ತಿಮ್ಮಕ್ಕ ತನ್ನ ಮಗಳ ರೀತಿಯೇ ಈ ದಿನ ಬೇರೆ ಯಾಗಿದೆಯಲ್ಲಾ ಎಂದು ಚಿಂತಿಸುತ್ತಿದ್ದಳು. ಸೂರ್ಯನು ಪಡುವಣ ದಿಗಂತದಲ್ಲಿ ಮುಳುಗುತ್ತಿದ್ದಾಗಲೇ ಎಲ್ಲರೂ ರಾಮನಗರವನ್ನು ತಲಪಿ ದರು ಲಿಂಗಮ್ಮ ತಾನು ತಂದಿದ್ದ ತಿಂಡಿ, ಹಣ್ಣುಗಳನ್ನು "ಅಮ್ಮಾ ಹಿಡಿ" ಎಂದು ಕರಿ ಹೊನ್ನಮ್ಮನ ಮಡಲಿಗೆ ಸುರಿದಳು

"ಏನು ತಾಯಿ, ಜಾತ್ರೆ ಚಂದಾಗಿತ್ತೆ ? ದೇವರಿಗೆ ಹರಕೆ ಮಾಡಿಕೊಂಡೆಯಾ?" ಎಂದು ಕೇಳಿದ ಕರಿಹೊನ್ನಮ್ಮನಿಗೆ "ಜಾತ್ರೆ ಚಂದಾ ಗಿಲ್ಲವೆ! ದೇವರಿಗೇನು ಹರಕೆಮಾಡಿಕೊಳ್ಳಲಿ? ದೇವರು ನನ್ನ ಹರಕೆ ಯನ್ನೇ ಕಾಯ್ದುಕೊಂಡಿದ್ದಾನೆಯೆ ?" ಎಂದು ಉತ್ತರಿಸಿದಳು ಲಿಂಗಮ್ಮ

"ಏನೋ ಅವ್ವ ನಿನ್ನಿಷ್ಟ" ಎಂದು ಹೇಳಿ ಕರಿಹೊನ್ನಮ್ಮ ತೆಪ್ಪನಾದಳು

ಆ ದಿನ ರಾತ್ರಿ ತಿಮ್ಮಕ್ಕ ಪಾಯಸದ ಅಡುಗೆಯನ್ನು ಮಾಡಿ ದಳು. ಹೊನ್ನಯ್ಯ ಅಳಿಯನ ಸಂಗಡ ಜಾತ್ರೆಯಲ್ಲಿ ಪ್ರಾಚೀನ ಕಾಲದ ಧನಿಕರು ಅರವಟ್ಟಿಗೆ ಇಡಿಸುತ್ತಿದ್ದರೆಂದೂ, ನಾಲ್ಕೈದು ದಿನಗಳವರೆಗೂ ಬಡಬಗ್ಗರಿಗಾಗಿ ಅನ್ನದಾನ ನಡೆಸುತ್ತಿದ್ದರೆಂದೂ, ಕಾಲಕಳೆದಂತೆ ಜನರು ಸ್ವಾರ್ಥಪರರಾಗಿ, ಜಿಪುಣತನದಿಂದ ಅದನ್ನೆಲ್ಲಾ ನಿಲ್ಲಿಸಿಬಿಟ್ಟರೆಂದೂ ಗತಕಾಲದ ಜಾತ್ರೆಯ ಸಂಭ್ರಮನ್ನು ವಿವರಿಸುತ್ತಾ ಹೊರಜಗುಲಿಯಲ್ಲಿ ಕುಳಿತಿದ್ದ. ನಾಗಯ್ಯ ಮಾವನ ಸಂಗಡ ಹೆಚ್ಚುಮಾತನಾಡದೆ ಅವನು

ಹೇಳಿದ್ದನ್ನೆಲ್ಲಾ ತೆಪ್ಪನೆ ಕೇಳುತ್ತಾ ಕುಳಿತಿದ್ದ ಅಷ್ಟರಲ್ಲಿ ಲಿಂಗಮ್ಮ ತಲೆಯಮೇಲೆ ಸೆರಗನ್ನು ಹಾಕಿಕೊಂಡು ಒಂದು ಚೆಂಬಿನಲ್ಲಿ ನೀರು ಹಿಡಿದು ಬಂದಳು. ಉರಿಯುತ್ತಿದ್ದ ಹಣತೆಯ ಬೆಳಕಿನಲ್ಲಿ ಲಿಂಗಮ್ಮನ ಬಾಡಿದ ಮುಖ ಸ್ಪಷ್ಟವಾಗಿ ಹೊನ್ನಯ್ಯನಿಗೆ ಕಂಡಿತು. ಬಿಸಿಲಿನಲ್ಲಿ ನಡೆದು ದಣಿದಿರುವುದರಿಂದ ಹಾಗೆ ಮಗಳು ಲವಲವಿಕೆಯಿಂದಿಲ್ಲವೆಂದು ಅವನ ಊಹೆ ಆದರೂ ಅವನ ಮನಸ್ಸಿಗೆ ಏನೋ ಕಳವಳವಾದಂತಾಯಿತು ಮೈಗೆ ಸ್ವಸ್ಥವಿಲ್ಲವೊ ಏನೋ ತಿಳಿಯದಲ್ಲಾ ಎಂದು ಕೊಂಡ. ನಾಗಯ್ಯ ಕೈಕಾಲು ಮುಖ ತೊಳೆದು ಹಜಾರದಲ್ಲಿ ಊಟಕ್ಕೆ ಕುಳಿತ. ಲಿಂಗಮ್ಮ ಮೌನಮುದ್ರೆಯನ್ನು ತಳೆದು ಬಡಿಸುತ್ತಿದ್ದಳು. ಆಕೆಯ ಮೌನ, ನಡೆ ದೇಹಾಲಸ್ಯವಾಗಿದೆ ಎಂಬುದನ್ನು ನಾಗಯ್ಯನಿಗೆ ಸೂಚಿಸಿತು ಬಡಿಸಲು ಮತ್ತೆ ಹೆಂಡತಿ ಬಂದಾಗ "ಏಕೆ, ಬಹಳ ಮೆತ್ತಗಿದ್ದೀಯೆ ?" ಎಂದು ಕೇಳಿದ. ಲಿಂಗಮ್ಮ "ಹಾಗೇನೂ ಇಲ್ಲ" ಎಂದಷ್ಟೆ ಉತ್ತರ ಕೊಟ್ಟಳು ನಾಗಯ್ಯ ಊಟವನ್ನು ಮುಗಿಸಿದ. ಶಿವಣ್ಣ ಹಜಾರದಲ್ಲಿ ಮಾವನಿಗೆ ಒಂದು ಚಾಪೆಯನ್ನು ಹಾಸಿದ ಮನೆಯವರೆಲ್ಲರೂ ಊಟಮಾಡಿದರು ತಿಮ್ಮಕ್ಕ ಎಷ್ಟು ಪೀಡಿಸಿದರೂ ಲಿಂಗಮ್ಮ ತನಗೆ ಯಾತಕ್ಕೊ ಅಂದು ಊಟಮಾಡುವ ಹಾಗಿಲ್ಲವೆಂದು ಹೇಳಿ ಒಂದು ಚಾಪೆಯನ್ನು ಹಾಸಿ ಮೈ ಚಾಚಿದಳು ತಿಮ್ಮಕ್ಕನೂ ಪಕ್ಕದಲ್ಲಿ ಮಲಗಿದಳು ಲಿಂಗಮ್ಮನಿಗೆ ನಿದ್ದೆ ಹತ್ತಲೇ ಇಲ್ಲ ಮೈ ಭಾರವಾಗಿರುವಂತೆ ಕಂಡಿತು ಕೊಂಚ ಕೊಂಚವಾಗಿ ಮೈ ಬಿಸಿಯಾಗತೊಡಗಿತು. ನಾಡಿಯ ಮಿಡಿತ ಬೇರೆ ಗಳಿಗೆ ಗಳಿಗೆಗೂ ಹೆಚ್ಚಾಗುತ್ತಿತ್ತು ಆಕೆಗೆ ಅರಿವು ಮರುಳಾದಂತಾಯಿತು ಜಾತ್ರೆಯಲ್ಲಿ ನೆರೆದಿದ್ದ ನರನಾರಿಯರ ಗುಂಪು ಕಣ್ಣಮುಂದೆ ಕಟ್ಟಿದಂತಾಯಿತು ಅವರೆಲ್ಲರೂ ಉಲ್ಲಾಸದಿಂದ, ಸಂತೋಷ ಸಂಭ್ರಮದಿಂದ ಜಾತ್ರೆಯಲ್ಲಿ ಮೆರೆದಾಡುತ್ತಿದ್ದುದು ಅವಳ ಮನೋದೃಷ್ಟಿಯ ಎದುರು ಚಿತ್ರಿತವಾಯಿತು. ಒಮ್ಮೆಲೇ ಆಕೆಯ ಸ್ಮೃತಿ ಬಾಡಿದ ತನ್ನ ಚಿಕ್ಕಂದಿನ ಬಾಳಿನ ಕಡೆ ಹರಿಯಿತು. ತಾನು ಯಾವುದೋ ಲೋಕದಲ್ಲಿರುವಂತೆ ಭಾಸವಾಯಿತು ರಂಗಯ್ಯ ಬಿಳಿ ಉಡುಗೆಯನ್ನುಟ್ಟು ಬಂದು ತನ್ನ ಸಂಗಡ ಸಲಿಗೆಯಿಂದ ನಗುನ

ಗುತ ಮಾತನಾಡುತ್ತಿರುವಂತೆ ಕಂಡಿತು. ಈ ಭ್ರಾಂತು ಬರಿದಾಯಿತು. ಆಕೆ ಚೀರಿಕೊಂಡಳು. ಅಷ್ಟರಲ್ಲಿ ಮೈಯೆಲ್ಲಾ ಕಾದು ಕೆಂಡವಾಗಿತ್ತು ಲಿಂಗಮ್ಮ ಚೀರಿದ ದನಿ ತಿಮ್ಮಕ್ಕನ ಕಿವಿಯಮೇಲೆ ಬಿದ್ದು ಆಕೆ ಎಚ್ಚರಗೊಂಡು ನೋಡುತ್ತಾಳೆ ಮಗಳು ಕನವರಿಸುತ್ತಿದ್ದಾಳೆ, ಮಧ್ಯೆ ಮಧ್ಯೆ ನರಳುತ್ತಿದ್ದಾಳೆ . ಹರಳೆಣ್ಣೆಯ ಹಣತೆಯನ್ನು ಹೊತ್ತಿಸಿ ತಿಮ್ಮಕ್ಕ ಮಗಳನ್ನು ಮೆಲ್ಲನೆ " ತಾಯಿ, ತಾಯೀ, ಏಕವ್ವಾ? ಏನಾಯ್ತು ತಾಯಿ ?" ಎಂದು ಉಪಚರಿಸುತ್ತಾ ಎಚ್ಚರಿಸಿದಳು. ಲಿಂಗಮ್ಮನಿಗೆ ಪ್ರಜ್ಞೆ ಇದ್ದಂತೆ ಕಾಣಲಿಲ್ಲ ಮೈಗೆ ತಿಮ್ಮಕ್ಕ ಕೈ ಹಾಕಿ ನೋಡುತ್ತಾಳೆ. ಎಳ್ಳು ಹಾಕಿದರೆ ಸಿಡಿಯುವಂತಹ ಜ್ವರಬಂದಿದೆ ! ಆಕೆ ಬೆದರಿಹೋದಳು ಮಧ್ಯ ರಾತ್ರಿ. ಏನು ಮಾಡಲೂ ತೋಚಲಿಲ್ಲ ಮತ್ತೊಮ್ಮೆ ಮಗಳನ್ನು ಎಚ್ಚರಗೊಳಿಸಲು ಪ್ರಯತ್ನಿಸಿದಳು. ಲಿಂಗಮ್ಮ ಎಷ್ಟೋ ಹೊತ್ತಿಗೊಮ್ಮೆ 'ಹಾ' ಎನ್ನುತ್ತಿದ್ದಳು. ತಿಮ್ಮಕ್ಕನ ಎದೆ ಹೊಡೆದುಕೊಳ್ಳಲಾರಂಭಿಸಿತು. ದಿವಸಗಳಿಗೊಂದು ಸಾರಿ ಅಪರೂಪಕ್ಕೆ ಬಂದ ಮಗಳಿಗೆ ಹೀಗಾಯಿತಲ್ಲ. ಏನು ಮಾಯದ ಜ್ವರವಪ್ಪಾ ದೇವರೇ !' ಎಂದು ಕಣ್ಣೀರು ತಂದುಕೊಂಡಳು ದೀಪವನ್ನು ಉರಿಸುತ್ತಾ ಚಿಂತೆಯಿಂದ ಬೆಪ್ಪು ಹಿಡಿದು ತೆಪ್ಪನೆ ಲಿಂಗಮ್ಮನ ಪಕ್ಕದಲ್ಲೇ ಕುಳಿತಳು ಬೆಳಗಾಗುವುದನ್ನು ಆಕೆ ಕಂಡಾಗ ಎಷ್ಟೋ ಯುಗಗಳನ್ನು ಕಳೆದಂತಾಯಿತು. ಮಗಳಿಗೆ ರಾತ್ರಿಯಿಂದಲೂ ಹುಷಾರಿಲ್ಲವೆಂದು ಪತಿರಾಯರಿಗೆ ತಿಮ್ಮಕ್ಕ ಹೇಳಿದಳು. ಹೊನ್ನಯ್ಯ, ನಾಗಯ್ಯ, ಕರಿಹೊನ್ನಮ್ಮರು ಬಂದು ಲಿಂಗಮ್ಮನ ಹಾಸಿಗೆ ಸುತ್ತಾ ಕುಳಿತರು. ಕರಿಹೊನ್ನಮ್ಮ ವೈದ್ಯಗಾರ ಮಲ್ಲಪ್ಪನವರನ್ನು ಕರೆದುಕೊಂಡು ಬಂದು ಔಷಧಿ ಕೊಡಿಸಿದಳು. ಮಧ್ಯಾಹ್ನವಾಗುವುದರಲ್ಲಿ ಕೊಂಚ ಜ್ವರ ಇಳಿಮುಖವಾಯಿತು ನಾಗಯ್ಯನ ಮನಸ್ಸಿಗೆ ಏನೊಂದೂ ತೋಚದೆ ಕುಳಿತಿದ್ದ ಲಿಂಗಮ್ಮನ ಅಸ್ವಸ್ಥತೆಯನ್ನು ತಿಮ್ಮಕ್ಕನಿಂದ ತಿಳಿದ ಬಸವಯ್ಯನೂ ಓಡೋಡಿ ಬಂದ ಬಹಳ ವರ್ಷಗಳಿಂದ ತನ್ನ ಮನೆಯ ಕಡೆ ತಿರುಗಿಯೂ ನೋಡದಿದ್ದ ಬಸವಯ್ಯ ಬಂದುದು ಹೊನ್ನಯ್ಯನಿಗೆ ಆಶ್ಚರ್ಯವನ್ನೂ ವಿಸ್ಮಯವನ್ನೂ ಉಂಟು ಮಾಡಿತು. ಮನೆಗೆ ಬಂದವನನ್ನು ತಾನೆ ಮೊದಲು ಮಾತನಾಡಿಸಲು

ಲಿಂಗಮ್ಮನ ಖಾಯಿಲೆ ಮಾತು ತೆಗೆದು "ಎಲ್ಲಾದರೂ ಒಳ್ಳೆಯವರಿಂದ ಔಷದ ಕೊಡಿಸಪ್ಪಾ ಬಸವಯ್ಯ ಅದಕ್ಕಾಗಿ ಏನಾದರೂ ಆಗಲಿ" ಎಂದ. ಜ್ವರದಿಂದ ಪೀಡಿತಳಾಗಿ ಬಾಡಿದ ಬಳ್ಳಿಯಂತೆ ಬಿದ್ದಿದ್ದ ಲಿಂಗಮ್ಮನ ಸ್ಥಿತಿಯನ್ನು ನೋಡಿ ಬಸವಯ್ಯ ತುಂಬಾ ಮರುಗಿದ "ಪಾಪ, ಬಾಳಿನಲ್ಲಿ ಒಂದಷ್ಟೂ ಸುಖವಿಲ್ಲವಲ್ಲ ಲಿಂಗಮ್ಮನಿಗೆ" ಎಂದು ಹೇಳಿ ಹೊನ್ನಯ್ಯನ ಕಡೆ ಮುಖ ತಿರುಗಿಸದೆಯೇ "ಆಗಲಿ, ಶಿವನಹಳ್ಳಿ ರಾಮು ಜೋಯಿಸರನ್ನು ಕರತಂದು ಔಷಧಿ ಕೊಡಿಸುತ್ತೇನೆ ಎರಡು ದಿನ ಮಲ್ಲಪ್ಪನವರು ಔಷದ ಕೂಡಲಿ. ಗುಣವಾಗದಿದ್ದರೆ ಶಿವನಳ್ಳಿಗೇ ಹೋಗಿಬರುತ್ತೇನೆ" ಎಂದು ಹೇಳಿದ. ತಿಮ್ಮಕ್ಕ ಅಷ್ಟು ಗಂಜಿಯನು ತಂದು ಹಿಂಸಿಸಿ ಲಿಂಗಮ್ಮನಿಗೆ ಕುಡಿಸಿದಳು ಹೆಂಡತಿಯ ಸ್ಥಿತಿಯನ್ನು ನೋಡಿ ನಾಗಯ್ಯನ ಮನ ತಳಮಳಗೊಂಡಿತು ಜಾತ್ರೆಗ ಬಾರದ ಊರಿನಲ್ಲೇ ಉಳಿದಿದ್ದರೆ ರೋಗ ಆಕೆಗೆ ಹಿಡಿಯುತ್ತಿರಲಿಲ್ಲವೇನೊ ಎಂದು ಲಿಂಗಮ್ಮನನ್ನು ತಾನು ಕರೆದುತಂದುದಕ್ಕೆ ತನ್ನನ್ನೇ ಶಪಿಸಿಕೊಂಡ ಊರಿನಲ್ಲಿದ್ದರೂ ಜ್ವರದಿಂದ ಪೀಡಿತಳಾಗುತ್ತಿದ್ದಳೋ ಏನೋ ಎಂದು ನೊಂದ ಎದೆಗೆ ಸಮಾಧಾನವನ್ನೂ ತಂದುಕೊಂಡ ಎರಡು ಮೂರು ದಿನಗಳು ಕಳೆದರೂ ಲಿಂಗಮ್ಮ ಸಂಪೂರ್ಣವಾಗಿ ಗುಣ ಹೊಂದಲಿಲ್ಲ

ಹೊನ್ನಯ್ಯ ಮೊದಲುಗೊಂಡು ಮನೆಯವರೆಲ್ಲರೂ ಕಳವಳ ಪಡುತ್ತಿದ್ದರು ಬಸವಯ್ಯ ಶಿವನಹಳ್ಳಿಗೆ ಒಂದೇ ದಾಪಿಗೆ ಹೋಗಿ ರಾಮು ಜೋಯಿಸರಿಗೆ ಹುಡುಗಿಯ ಕಾಯಿಲೆಯನ್ನು ತಿಳಿಸಿ ಅವರನ್ನು ಸಂಗಡಲೇ ಕರೆದುಕೊಂಡು ಬಂದು ಔಷಧವನ್ನು ಕೊಡಿಸಿದ ಜೋಯಿಸರು ಊರಿಗೆ ಮರಳುವಾಗ ನಾಗಯ್ಯನೂ ಹೊನ್ನಯ್ಯನೂ ಸ್ವಲ್ಪ ದೂರ ಅವರನ್ನು ಹಿಂಬಾಲಿಸಿದರು ಹೊನ್ನಯ್ಯ ಮೆಲ್ಲನೆ ಕೇಳಿದ—

"ಏನು ಖಾಯಿಲೆ ಸ್ವಾಮಿ! ಮಾಯದಲ್ಲೇ ಬಂದುಬಿಟ್ಟಿತು!"

"ಮಾಯವೂ ಇಲ್ಲ, ಗೀಯವೂ ಇಲ್ಲ. ಶರೀರ ರಕ್ತಮಾಂಸಗಳಿಂದ ಮಾಡಿದ್ದು ಇದಕ್ಕ ಖಾಯಿಲೆ ಬಾರದೆ ಮತ್ತೇತಕ್ಕ ಬರುತ್ತೆಯಪ್ಪಾ?' ಅದಕ್ಕೇಕೆ ಚಿಂತೆ ಮಾಡುತ್ತೀ? ದೇವರಿದ್ದಾನೆ" ಎಂದರು ಜೋಯಿಸರು.

" ಜೀವಕ್ಕೇನಾದರೂ ತೊಂದರೆಯೆ ಸ್ವಾಮಿ ?" ಎಂದ ನಾಗಯ್ಯ.

" ಜೀವಕ್ಕೇನೂ ಭಯವಿಲ್ಲ ಖಾಯಿಲೆ ಬರುತ್ತದೆ, ವಾಸಿಯಾಗುತ್ತದ ಖಾಯಿಲೆ ಬಂದವರೆಲ್ಲಾ ಸಾಯುತ್ತಾರೆಯ ? ಅವರವರ ಬಾಳು ಎಷ್ಟೆಷ್ಟು ದಿನ ಈ ಪ್ರಪಂಚದಲ್ಲಿರಬೇಕೋ ಅಷ್ಟಷ್ಟು ದಿನ ಬಾಳುತ್ತಾರೆ, ಮೀರಿದರ ಯಾವ ವೈದ್ಯತಾನೆ ಏನುಮಾಡಿಯಾನು ? ಅವನೂ ಮಾನವ. ತನಗೆ ತಿಳಿದಷ್ಟನ್ನೂ ಮಾಡಿಯಾನು ಅದರ ಮೇಲೆ ಭಗವಂತನ ಇಚ್ಛೆ " ಎಂದು ಅವನಿಗೆ ನಗು ನಗುತ್ತಾ ಜೀವನದ ರಹಸ್ಯವನ್ನು ಬೋಧಿಸಿದರು ತಾವು ಇನ್ನೆರಡು ಮೂರು ದಿನದಲ್ಲಿ ಬಂದು ನೋಡುವುದಾಗಿ ಹೇಳಿ ಶಿವನಹಳ್ಳಿಗೆ ಮರಳಿದರು ಜೋಯಿಸರು.

ತಿಮ್ಮಕ್ಕ ಸದಾ ಮಗಳ ಹಾಸಿಗೆ ಪಕ್ಕದಲ್ಲಿ ಕುಳಿತು ಸೆಕೆ ಬೀಸುವುದು, ಬಟ್ಟೆಬರೆ ಸರಿಮಾಡುವುದು, ಔಷದ ಕುಡಿಸುವುದು—ಇದರಲ್ಲಿ ದಿನಗಳನ್ನು ರೋಗಿ ಕಳೆದಂತೆ ಕಳೆಯುತ್ತಿದ್ದಳು ಒಂದುವಾರವಾಯಿತು ಲಿಂಗಮ್ಮ ಹಾಸಿಗೆಯಿಂದ ಎದ್ದು ಕುಳಿತುಕೊಳ್ಳಲಿಲ್ಲ ಹೊನ್ನಯ್ಯನೂ ತಿಮ್ಮಕ್ಕನೂ ಮಗಳನ್ನು ನೋಡಿನೋಡಿ ಕಣ್ಣೀರು ತಂದುಕೊಳ್ಳುತ್ತಿದ್ದರು. ನಾಗಯ್ಯನ ಮನಸ್ಸು ಅಶಾಂತವಾಗಿತ್ತು ತನ್ನ ತಾಯಿತಂದಗಳಿಗೆ ಸಮಾಚಾರವನ್ನಾದರೂ, ತಿಳಿಸಬೇಕೆಂದು ಬಗೆದು ಹಂಡತಿಯ ಹಾಸಿಗೆ ಸಮೀಪಕ್ಕೆ ಬಂದು " ನಾನು ಊರಿಗೆ ಹೋಗಿ ಮರಳಿ ನಾಳೆ ಬರ್‍ತೀನ " ಎಂದ ಲಿಂಗಮ್ಮನ ಕಿವಿಗೆ ಗಂಡನ ಮಾತು ಅರ್ಧಂಬರ್ಧ ಕೇಳಿಸಿರಬೇಕು ಆದರೂ ಆಕೆ ಬಾಯಿಬಿಡಲಿಲ್ಲ. ಮಲಗಿದ್ದ ಮಗ್ಗುಲಿಂದ ತಿರುಗಲಿಲ್ಲ ಸರಿ, ಆತ ನವಲೂರಿಗೆ ಧಾವಿಸಿ ಬಂದ ಒಂದು ವಾರವಾದರೂ ಮನೆ ಮರ ಎನ್ನದ ಮಾವನ ಮನೆಯಲ್ಲಿ ಅರಿಶಿನದ ಕೊಳಿಗೆ ಉಳಿದಿದ್ದಾನಲ್ಲಾ ಎಂದು ಬಸವ್ವ ದಿನೇ ದಿನೇ ಗೊಣಗುತ್ತಿದ್ದಳು ನಾಗಯ್ಯನ ಸುಳಿವನ್ನು ಕಂಡು, ಅದರಲ್ಲೂ ಹೆಂಡತಿಯನ್ನು ಬಿಟ್ಟು ಒಬ್ಬನೆ ಬಂದದ್ದನ್ನು ನೋಡಿ ಕಿಡಿಕಿಡಿಯಾದಳು. ಹಟ್ಟಿಗೆ ನಾಗಯ್ಯ ಕಾಲಿಟ್ಟನೋ ಇಲ್ಲವೊ " ಏನೋ, ಮಾವನಮನೆಯ ಅನ್ನಕ್ಕೆ ಇದ್ದು ಬಿಟ್ಟೆಯಾ ? ಎಲ್ಲಿ ಆ ರತ್ನಾಂಗಿ ? ನನಗೆ ಮೊದಲೇ ತಿಳಿದಿತ್ತು. ಇಲ್ಲಿ ಯಾರು ಕೆಲಸ ಮಾಡಿಯಾರೆಂದು ಸುಖವಾಗಿ ಅಪ್ಪನ ಅರಮನೆಯಲ್ಲಿ

ಕುಳಿತಳೇನೊ! ಅವಳು ಬರಲಿ ಅಪ್ಪನ ಮನೆಯಿಂದ ಗೆಪ್ಪೆ ಹೊತ್ತು ತರ್ತಾಳೆ ಅಂತ ಕಾಣತದೆ" ಬಂದು ಬುಸುಗುಟ್ಟಿದಳು

ನಾಗಯ್ಯ ನಸು ಕೋಪವನ್ನು ಬೀರುವ ದನಿಯುಲ್ಲಿ "ಏನವ್ವ ನೀನು, ಯಾವಾಗಲೂ ಹೀಗೆಯುಲ್ಲಾ. ಅವಳ ಕಷ್ಟ ಅವಳಿಗೆ,ನಿನ್ನ ಕುಷಿ ನಿನಗೆ" ಎಂದ

"ಅದೇನೋ ಹೆಂಡಿರ ಕದೆ ವಹಿಸಿಕೊಂಡು ಮಾತಾಡುತೀ? ಯಾರಿಗೊ ಕುಷಿ ಅವಳಿಗೇನೋ ಸಂಕಟ ಹಿಡಿದಿರೋದು? ಸಿಗಿದರೆ ಇಬ್ಬರಾಗುವಂತೆ ಇದಾಳೆ, ನನ್ನ ಮನೇಲಿ ಉಂಡೂ ಉಂಡೂ" ಎಂದು ಪುನಃ ಆರ್ಭಟಿಸಿದಳು. ತನ್ನ ಹೆಂಡತಿ ಜ್ವರದಿಂದ ಹಾಸಿಗೆ ಹಿಡಿದಿದ್ದಾಳೆಂದು ಹೇಳಿದಾಗ ಬಸಮ್ಮನ ಆರ್ಭಟ ತುಸು ನಿಂತಿತು ಆಕೆ ಒಂದೆರಡು ಸಾರಿ ,ಗೊಣಗಿದಳು—'ಅದೆಲ್ಲಾ ಒಂದು ಆಟ ಕಣೋ' ಎಂದು ಮುತ್ತಣ್ಣ ಸಂಜೆ ಮನೆಗೆ ಬಂದಾಗ ನಾಗಯ್ಯ ತನ್ನ ಹೆಂಡತಿಯು ರೋಗ ಗ್ರಸ್ತಳಾಗಿದ್ದಾಳೆಂದು ಹೇಳಿದ ಆತ ಒಳ್ಳೆಯ ಹಣೆಬರಹವಾಯಿತಲ್ಲಾ ಎಂದು ಸೊಸೆಗಾಗಿ ಮರುಗಿದ ಒಂದೆರಡು ದಿನ ಬಿಟ್ಟು ಮುತ್ತಣ್ಣ ಸೊಸೆಯುನ್ನು ನೋಡಿ ಬರಲು ರಾಮನಗರಕ್ಕೆ ಬಂದ ಲಿಂಗಮ್ಮ ಪೂರ್ಣವಾಗಿ ಗುಣಹೊಂದದಿದ್ದರೂ ಪ್ರಜ್ಞೆಯಿಂದ ಬಂದು ಹೋದವರ ಸಂಗಡ ಒಂದೆರಡು ಮಾತುಗಳನ್ನಾಡುತ್ತಿದ್ದಳು ಮನೆಗೆ ಬಂದ ಮಾವನನ್ನು ಕಂಡು ತಾನೆ ಮಾತನಾಡಿಸಿದಳು. ಸವೆದುಹೋಗಿದ್ದ ಸೊಸೆಯು ದೇಹ ಮುತ್ತಣ್ಣನ ಕಣ್ಣಿನಲ್ಲಿ ನೀರು ತಂದಿತು ಆತ ಬೀಗನಿಗೆ ಹೇಳಿ ಹನುಮಂತ ರಾಯುನ ದೇವಸ್ಥಾನದಲ್ಲ ಯಂತ್ರ ಬರೆಸಿ ತರಿಸಿ ಲಿಂಗಮ್ಮನ ಎಡದ ತೋಳಿಗೆ ಕಟ್ಟಿಸಿದ ಲಿಂಗಮ್ಮ ಎಣ್ಣೆಗೆ ಬಿದ್ದ ನೊಣದಹಾಗೆ ಸಲ್ಪ ಏಳುವುದು, ನಾಲ್ಕೈದು ಮಾರು ದೂರ ತಿರುಗಾಡುವುದು-ಇಷ್ಟುಮಾತ್ರ ಚೇತರಿಸಿಕೊಂಡಳು ಸೊಸೆಯುನ್ನು ಚೆನ್ನಾಗಿ ಉಪಚರಿಸಬೇಕೆಂದು ಮುತ್ತಣ್ಣ ಬೀಗನಿಗೂ ಬೀಗಿತ್ತಿಗೂ ಹೇಳಿ ಊರಿಗೆ ಹೊರಟ

ಮಗನಿಗೂ ಹೆಂಡತಿಗೂ ತನ್ನ ಸೊಸೆ ಹಿಂದಿನಂತೆ ಆರೋಗ್ಯ ಹೊಂದುವವರೆಗೆ ತೌವರಿನಲ್ಲೇ ಇರಲೆಂದು ಸಮಾಧಾನ ಹೇಳಿದ ಬಸಮ್ಮ''ಅವಳು ಬಂದರೆ ಬರಲಿ, ಇಲ್ಲದಿದ್ದರೆ ಬೇರೊಂದು ಮದುವೆ ಮಾಡಿಕೊಳ್ಳೊ''

ಎಂದು ಆಗಾಗ್ಗೆ ನಾಗಯ್ಯನಿಗೆ ಪುಸಲಾಯಿಸುತ್ತಿದ್ದಳು. ನಾಗಯ್ಯನಿಗೆ ಬುದ್ಧಿ ಮಂಕಾಗಿ ಯಾವ ಕೆಲಸಕ್ಕೆ ಕೈಹಾಕುತ್ತಿದ್ದನೋ ಅದೇ ಕೆಲಸದಲ್ಲಿ ಕಾಲ ನೂಕುತ್ತಿದ್ದ ಊಟ ಮಾಡಿದರೆ ಮಾಡಿದ, ಬಿಟ್ಟರೆ ಬಿಟ್ಟ ಈ ಸ್ಥಿತಿಗೆ ಅವನ ಮನಸ್ಸು ಬಂತು. ಜೀವನದ ಸವಿಯನ್ನೇ ಸವಿಯದ ಆವನಿಗೆ ತಲೆಯಮೇಲೆ ಎಲ್ಲಿಲ್ಲದ ಹೊರೆ ಬಿದ್ದಂತೆ ಬಾಳು ಭಾರವಾಗಿ ಕಂಡಿತು ಇತ್ತಕಡೆ ತಾಯಿ ಬೇರೆ ಬೇರೊಂದು ಹೆಣ್ಣು ತರುವ ಮಾತುಗಳನ್ನು ಕಲಕಿದ ಅವನ ಚಿತ್ತದಲ್ಲಿ ಬಿತ್ತುತ್ತಿದ್ದಾಳೆ, ಅತ್ತಕಡೆ ಹೆಂಡತಿ ಹಾಸಿಗೆ ಹಿಡಿದು ಬಹಳ ದಿನಗಳು ಕಳೆದರೂ ಗುಣವಾಗಲಿಲ್ಲ ಅವನ ಮನಸ್ಸಿಗೆ ಯಾವ ಯೋಚನೆಯೂ ಹೊಳೆಯುತ್ತಿರಲಿಲ್ಲ ಶಾಂತವಾಗಿದ್ದ ಕೊಳದ ನೀರಿಗೆ ಕಲ್ಲೆಸೆದಂತಾಯಿತು ಅವನ ಬಾಳು. ಮನದಲ್ಲಿ ದಿಕ್ಕು ಕಾಣದ ಯೋಚನಾ ತರಂಗಗಳೇಳುತ್ತಿದ್ದುವು ಹೆಂಡತಿ ಎಲ್ಲೋ ಇವನಿಗೂ ಮಂಕುಬೂದಿ ಚೆಲ್ಲಿದ್ದಾಳೆಂದು ಬಸವ್ವ ಶುರುಮಾಡಿದಳು ಹೆಂಡತಿಯ ಮಾತಿಗೆ ಮುತ್ತಣ್ಣ ರೇಗಿ "ಈ ದುರ್ಬೋಧನೆ ಹೇಳಿದರೆ ಸಂಸಾರ ಕೆಡುವುದಿಲ್ಲವೇ? ಮನುಷ್ಯರಿಗೆ ಖಾಯಿಲೆ ಬಾರದೆ ಮರಕ್ಕೆ ಬರುತ್ತದೆಯೆ? ಮಡುಕಬಾರದು ತಾಳಿದವನು ಬಾಳುತಾನೆ" ಎಂದು ಮಗನನ್ನು ಸಮಾಧಾನ ಪಡಿಸುತ್ತಿದ್ದ.

ದಿನ ಕಳೆದಂತೆಲ್ಲಾ ಲಿಂಗವ್ವ ತನ್ನ ಮುರಿದ ಮದುವೆಯನ್ನು ಚಿತ್ರಿಸಿಕೊಂಡು ಹೆಚ್ಚು ಹೆಚ್ಚಾಗಿ ಅದನ್ನೇ ಮೆಲಕು ಹಾಕುತ್ತಿದ್ದಳು ತನ್ನ ಹೀನ ಅದೃಷ್ಟಕ್ಕೆ ತಾನೇ ಶಪಿಸಿಕೊಳ್ಳುತ್ತಿದ್ದಳು ಮನಸ್ಸಿನಿಂದ ತನ್ನ ಮರಿದ ಬಾಳನ್ನು ಅಳಿಸಬೇಕೆಂದು ತಾನೆಷ್ಟು ಪ್ರಯತ್ನ ಪಟ್ಟರೂ ತನ್ನ ಸ್ಮೃತಿಯಿಂದ ಆ ಚಿತ್ರ ಅಳಿಯದು ಅಕ್ಕಪಕ್ಕದಲ್ಲಿ ತನ್ನ ಸಂಗಾತಿಯರು ಬಾಳುತ್ತಿರುವುದನ್ನು ನೋಡಿ ಅಸೂಯೆ ಪಡದೆ ತನ್ನ ಬಾಳಿಗಾಗಿ ಮರುಗುತ್ತಿದ್ದಳು. ರಂಗಯ್ಯಮಾವನ ಕೈ ಹಿಡಿದಿದ್ದರೆ ತನ್ನ ಬಾಳೇನು ಇವರ ಬಾಳಿಗೆ ಕಡಿಮೆಯಾಗುತ್ತಿತ್ತೆ? ಎಂದು ಗೋಪ್ಯವಾಗಿ ಚಿಂತಿಸುತ್ತಿದ್ದಳು ಈ ಚಿಂತೆಯ ಚಿತೆಯಲ್ಲಿ ಶರೀರ ಕಾಯುತ್ತಿತ್ತು, ನಿದ್ದೆ ಸರಿಯಾಗಿ ಹತ್ತುತ್ತಿರಲಿಲ್ಲ ದಿನೇ ದಿನೇ ಶರೀರ ಕಡ್ಡಿಯಂತಾಗತೊಡಗಿತು ಏನೋ ಹಣೆಯಲ್ಲಿ ಬರೆದದ್ದಾಯಿತೆಂದು ಹೃದಯದ ಮೂಲೆಯೊಂದ

ರಿಂದ ಸಮಾಧಾನದ ಅಲೆಯೊಂದೆದ್ದರೆ, ಅದಕ್ಕೆಬದಲು ನೂರು ಅಲೆಗಳು ಅದನ್ನು ಹಿಮ್ಮೆಟ್ಟುತ್ತಿದ್ದವು. ಹೊನ್ನಯ್ಯನೂ ತಿಮ್ಮಕ್ಕನೂ ಮಗಳಿಗೆ ಯಂತ್ರಮಂತ್ರಗಳನ್ನು ಮಾಡಿಸಿದರು. ಬಸವಯ್ಯನ ಸಲಹೆಯು ತೆ ಪಕ್ಕದ ಊರುಗಳ ದೇವಸ್ಥಾನಗಳಿಗೆ ರೋಗಿಯನ್ನು ಕರೆದುಕೊಂಡು ಹೋಗಿ ಪೂಜೆ ಪುನಸ್ಕಾರ ಮಾಡಿಸಿದರು, ಹರಕೆ ಹೊತ್ತರು ಆದರೂ ಖಾಯಿಲೆ ಸಂಪೂರ್ಣವಾಗಿ ಗುಣವಾಗಲಿಲ್ಲ ದೇಹ ಎಲುಬು ತುಂಬಿದ ಚರ್ಮದ ಚೀಲದಂತಿತ್ತು ಕಣ್ಣುಗಳು ಗುಳಿಬಿದ್ದು ಯಾವುದೋ ಗುಪ್ತ ಚಿಂತೆಯನ್ನು ಹೊರಸೂಸುತ್ತಿದ್ದವು. ಆಕೆಯ ಯವ್ವನದ ರೂಪು ಚಿಂತೆಯ ಚಿತೆಯಲ್ಲಿ ಸುಟ್ಟುಹೋಗಿತ್ತು. ಇನ್ನು ಮಗಳು ಉಳಿಯುವ ನಂಬಿಕೆ ಇಲ್ಲವೆಂದು ಹೊನ್ನಯ್ಯನಿಗೆ ಯೋಚನೆ ಹತ್ತಿತು ಅವನಲ್ಲಿದ್ದ ರಾಗದ್ವೇಷಗಳು ಮಗಳ ಬಾಳಿನ ಅಗ್ನಿಸ್ಥಿಕೆಯಲ್ಲಿ ಬೂದಿಯಾದವು ಸುಪ್ತನಾಗಿ ಮಲಗಿದ್ದ ಮಮತೆ, ಅಂತಃಕರುಣ ಅವನ ಹೃದಯದಲ್ಲಿ ತಲೆ ಹಾಕಿತು ಈ ರೋಗಕ್ಕೆ ತಾನೇ ಕಾರಣನೆಂಬುದನ್ನು ಕ್ಷಣ ಮಾತ್ರದಲ್ಲಿ ಅರಿಯದೆ ಇರಲಿಲ್ಲ ಮನಸ್ಸು ಮಗಳನ್ನು ನೋಡಿದಾಗ ತಲ್ಲಣಿಸುತ್ತಿತ್ತು. ಪ್ರೀತಿಯಿಂದ ಸಾಕಿದ ಮಗಳ ಬಾಳನ್ನು ಮುರಿದ ನಲ್ಲಾ ಎಂಬ ಚಿಂತೆಯೊಂದೇ ಅವನ ತಲೆಯಲ್ಲೆಲ್ಲಾ ಅವನಿಗೆ ಪ್ರಪಂಚದಲ್ಲಿ ಯಾವುದೂ ಬೇಡವಾಯಿತು ಕೆಲಸ ಕಾರ್ಯಗಳಲ್ಲೂ ನಿರ್ಲಿಪ್ತನಾಗಿದ್ದ ತಿಮ್ಮಕ್ಕನೂ ಕರಿ ಹೊನ್ನಮ್ಮನೂ ' ನಾವೂ ಬೇಕಾದ್ದೆಲ್ಲಾ ಮಾಡಿಯಾಯಿತು ಯಾವ ಔಷಧದಿಂದಲೂ ಗುಣವಾಗಲಿಲ್ಲ ಇನ್ನು ದೇವರು ಮಾಡಿದಂತಾಗಲಿ ' ಎಂದು ಮಮ್ಮಲ ಮರುಗುತ್ತಾ ಸಮಾಧಾನವನ್ನು ತಂದುಕೊಳ್ಳಲು ಪ್ರಯತ್ನಿಸುತ್ತಿದ್ದರು ಅವರು ಎಷ್ಟು ಎಷ್ಟು ಪ್ರಯತ್ನಿಸುತ್ತಿದ್ದರೋ ಅಷ್ಟು ಅಷ್ಟು ದುಃಖದ ಬೇಗೆ ಮನದಲ್ಲಿ ಹೆಚ್ಚುತ್ತಿತ್ತು

೬

ರಂಗಯ್ಯ ತನ್ನ ಹೆಂಡತಿಯೊಡನೆ ಹಾಗೂ ಹೀಗೂ ಕಾಲ ನೂಕುತ್ತಿದ್ದ ಬೇಸಾಯದ ಕೆಲಸ ಕಾರ್ಯಗಳನ್ನು ನಿರ್ವಹಿಸುವವರು

ಮತ್ತಾರೂ ಮನೆಯಲ್ಲಿರಲಿಲ್ಲವಾದ್ದರಿಂದ ಕಾಲೇಜಿನ ವಿದ್ಯಾಭ್ಯಾಸವು ನಿಂತುಹೋಯಿತು. ಇದ್ದಕ್ಕಿದ್ದ ಹಾಗೆಯೇ ಲಿಂಗಮ್ಮನ ರೂಪು ರೇಖೆಗಳು ಅವನ ಸ್ಮೃತಿಪಥದಲ್ಲಿ ಚಿತ್ರಿತವಾಗುತ್ತಿದ್ದುವು ಆಗ ಮನಸ್ಸು ಉಲ್ಲೋಲ ಕಲ್ಲೋಲವಾಗುತ್ತಿತ್ತು. ಆದದ್ದಾಯಿತೆಂದು ಸಮಾಧಾನ ಹೊಂದಲು ಪ್ರಯತ್ನಿಸುತ್ತಿದ್ದ ವ್ಯವಸಾಯದ ಕಲಸವನ್ನೆಲ್ಲಾ ಆಳುಗಳಿಂದಲೇ ಮಾಡಿಸುತ್ತಿದ್ದ ಸಿದ್ದಮ್ಮ ''ಏನಪ್ಪಾ, ಆಳು ಮಾಡುವುದು ಹಾಳು ನೀನೂ ಕೊಂಚ ಅವರ ಬೆನ್ನ ಹಿಂದೆ ಇದ್ದರೆ ಕಲಸ ಕಾರ್ಯ ಒಸ್ನಷ್ಟು ಭರದಿಂದ ಸಾಗುತ್ತದ'' ಎಂದು ಹೇಳಿದರೆ "ಬಿಡಮ್ಮ, ಅದೃಷ್ಟದಲ್ಲಿ ಇದ್ದಷ್ಟಾಗುತ್ತದೆ" ಎಂದು ಉತ್ತರಿಸುತ್ತಿದ್ದ ತನ್ನ ಕೋಣೆಗೆ ಸೇರಿದನೆಂದರ ತೀರಿತು ಅವನ ಮಾನಸಿಕ ಪರದೆಯ ಮೇಲೆ ತನ್ನ ಮುರಿದ ಬಾಳಿನ ಚಿತ್ರಗಳು ಕಣ್ಣಿಗೆ ಕಟ್ಟಿದಂತೆ ಕಾಣುತ್ತಿದ್ದವು ಲಕ್ಷ್ಮಿ ''ಅಡಿಗೆಯಾಗಿವೆ ಎಂದು ಚಂಬಿನಲ್ಲಿ ನೀರು ಹಿಡಿದು ನಿಂತ ಎಷ್ಟೋ ಹೊತ್ತಿನ ಮೇಲೆ "ಬಂದೆ" ಎಂದು ಎದ್ದು ಕೈಕಾಲು ತೊಳೆದುಕೊಂಡು ಊಟಕ್ಕೆ ಕುಳಿತುಕೊಳ್ಳುತ್ತಿದ್ದ ತನ್ನ ಗಂಡ ಯಾವುದೋ ಗೋಪ್ಯ ವಿಚಾರವನ್ನು ಕುರಿತು ಚಿಂತಿಸುತ್ತಿದ್ದಾರೆಂಬುದನ್ನು ಲಕ್ಷ್ಮಿ ಅರಿಯದ ಇರಲಿಲ್ಲ ಆಕೆಗೆ ಕೇಳಲೂ ಮನಸ್ಸಾಗುತ್ತಿರಲಿಲ್ಲ ಜೊತೆಗ ಧೈರ್ಯವೂ ಬರುತ್ತಿರಲಿಲ್ಲ. 'ನನಗೇಕ ಅದರ ಚಿಂತೆ'' ಎಂದು ತೆಪ್ಪನಾಗಿ ತನ್ನ ಕೆಲಸದಲ್ಲಿ ತೊಡಗುತ್ತಿದ್ದಳು ರಂಗಯ್ಯನಿಗೆ ಬಹಳ ಹಿಂದೆ ಎಂದೋ ಒಂದು ಕಾಗದ ಬಸವಯ್ಯನಿಂದ ಬಂದಿತ್ತು. ಅದರಲ್ಲಿ ಲಿಂಗಮ್ಮನನ್ನು ಕುರಿತಾದ ವಿಚಾರಗಳೇನೂ ಪಚ್ಚಾಗಿ ಬರೆದಿರಲಿಲ್ಲ ಬಸವಯ್ಯನಿಗೇನೋ ಲಿಂಗಮ್ಮನ ವಿಚಾರ ಬೇಡವಾಗಿದ್ದಿರಬಹುದು ತನ್ನ ಮನದ ನೋವನ್ನು ಸ್ನೇಹಿತ ಇನ್ನೂ ಅರ್ಥಮಾಡಿಕೊಂಡಿಲ್ಲವೆಂದು ಯೋಚಿಸಿ ತೆಪ್ಪನಾಗಿದ್ದ. ಲಿಂಗಮ್ಮನ ಬಾಳು ಹೇಗೆ ಸಾಗುತ್ತದೆಂಬುದನ್ನು ತಿಳಿಯಬೇಕಂದು ಮನ ಹಂಬಲಿಸುತ್ತಿತ್ತಾದರೂ ಬೇರೆ ಪುರುಷನನ್ನು ಕೈಹಿಡಿದವಳ ವಿಚಾರವನ್ನು ತಿಳಿಯುವುದರಿಂದ ಯಾವ ಪುರುಷಾರ್ಥದ ಸಾಧನೆಯಾದೀತು, ಜನರುತಾನೆ ಏನೆಂದಾರೆಂದು ವಿವೇಕವಾಣಿ ಮನದಲ್ಲಿ ನುಡಿದು ತೆಪ್ಪನಾಗುತ್ತಿದ್ದ. ಈಚೀಚೆಗೆ ಅವನ ಅರಿವಿಲ್ಲದೆ ಲಿಂಗಮ್ಮನ

ರೂಪು ಮನದ ಕಣ್ಣಿನೆದುರು ಕುಣಿದಾಡುತ್ತಿತ್ತು. ಯಾವ ಕೆಲಸದಲ್ಲಿಯೂ ಅವನಿಗೆ ರುಚಿ ಇರಲಿಲ್ಲ, ಉತ್ಸಾಹವಿರಲಿಲ್ಲ ಮಾಗಿಯ ಕಾಲದ ಒಂದು ಸಂಜೆ ಹಣ್ಣಾಗಿ ಕೆಂಪು ತೆನೆಯನ್ನು ಹೊತ್ತು ಮೆರಯುತ್ತಿದ್ದ ತನ್ನ ಹೊಲದ ಕಡೆ ಆತ ಹೊರಟ. ಸಂಜೆಯ ಸೂರ್ಯ ಪಡುವಣ ಕಡಲಲ್ಲಿ ಇಳಿಯುವುದರಲ್ಲಿದ್ದ ಓಕಳಿಯ ಬಣ್ಣ ಕೊಯ್ಲಿಗ ಬಂದು ನಿಂತಿದ್ದ ಹೊಲದ ಮೇಲೆಲ್ಲಾ ಚೆಲ್ಲಾಡಿ ಒಂದು ಅಪೂರ್ವ ಬೆಡಗಿನಿಂದ ಕಂಗೊಳಿಸುತ್ತಿತ್ತು ತಣ್ಣನೆಯ ಗಾಳಿ ಬೇರೆ ಮನಕ್ಕೆ ಉಲ್ಲಾಸವಾಗಿತ್ತು ಹೊಲವನ್ನೆಲ್ಲಾ ನೋಡಿ ಪಕ್ಕದಲ್ಲಿ ಹರಿಯುತ್ತಿದ್ದ ನದಿಯ ದಂಡೆಯ ಮೇಲೆ ಏಕಾಂತವಾಗಿ ಹೊರಟ ಒಂದು ಕಡೆ ನದಿಯ ದಂಡೆಯ ಮೇಲೆ ಕುಳಿತುಕೊಂಡು ಮುಳುಗುತ್ತಿದ್ದ ಸೂರ್ಯನನ್ನೇ ಬಿಟ್ಟ ಕಣ್ಣುಗಳಿಂದ ನೋಡುತ್ತಿದ್ದ ಕಡುಗೆಂಪಾದ ಕಿರಣಗಳು ಹರಿಯುವ ನೀರಿನಲ್ಲಿ ಬಿದ್ದು ಚಿತ್ರವಿಚಿತ್ರವಾದ ಬಣ್ಣಗಳನ್ನು ಚಿತ್ರಿಸುತ್ತಿದ್ದವು ನದಿಯ ದಡಗಳ ಮೇಲೆ ಇದ್ದ ತಂಗು ಬಾಳೆಗಳು ಬೀಸುವ ತಂಗಾಳಿಯ ಬಡಿತಕ್ಕೆ ಮರ್ಮರ ದನಿಯಿಂದ ಬಾಗಿ ಬಳುಕುತ್ತಿದ್ದುವು ಮೀನುಗಳು ಸ್ವೇಚ್ಛೆಯಾಗಿ ಓಡಾಡುತ್ತಿದ್ದುದು ಆ ರಕ್ತವರ್ಣದ ನೀರಿನಲ್ಲಿ! ಸ್ಪಷ್ಟವಾಗಿ ಗೋಚರಿಸುತ್ತಿತ್ತು ಆತನು ಮೀನುಗಳ ಚೆಲ್ಲಾಟವನ್ನು ನೋಡುತ್ತಾ ಮೈವರೆತವನಂತ ಕುಳಿತಿದ್ದ ಕಡುಗೆಂಪು ಮಾಯವಾಗಿ ಮೆಲ್ಲಮೆಲ್ಲನೆ ಕತ್ತಲೆ ಇಣುಕಿತು. ಗಾಳಿಯು ತಣ್ಣಗೆ ಬೀಸುತ್ತಿತ್ತು ರಂಗಯ್ಯ ಪ್ರಕೃತಿಯ ವಿಚಿತ್ರದಲ್ಲಿ ಮಗ್ನನಾಗಿದ್ದ ಯಾವನೋ ಒಬ್ಬನು ಬಲಗೈಯಲ್ಲಿ ಒಂದು ಕೋಲನ್ನು ಹಿಡಿದು ರಂಗಯ್ಯನ ಪಕ್ಕಕ್ಕೆ ಬಂದು ನದಿಯಲ್ಲಿ ನೀರು ಕುಡಿದು ನಿಂತ ಮುಬ್ಬುಗತ್ತಲೆಯಾಗಿದ್ದುದರಿಂದ ಒಬ್ಬರ ಮುಖವು ಮತ್ತೊಬ್ಬರಿಗೆ ಗುರುತು ಹತ್ತುವಂತಿರಲಿಲ್ಲ. ದಾರಿ ಹೋಕನಿಗೆ ಯಾರೋ ಕುಳಿತಿದ್ದಾರೆ ಮಾತನಾಡಿಸೋಣವೆಂಬ ಮನಸ್ಸಾಗಿ 'ಯಾರಪ್ಪ ನೀವು?' ಎಂದ

ಎಲ್ಲಿಯೋ ತಲ್ಲೀನವಾಗಿದ್ದ ರಂಗಯ್ಯನಿಗೆ ಎಚ್ಚರವಾಯಿತು. "ನಾನು ಇದೇ ಊರಿನವನು. ನೀನು ಯಾವ ಊರಪ್ಪಾ?"

"ನಾನು ಬಹಳ ದೂರದ ಊರಿನವನು ಸ್ವಾಮಿ ಹೀಗೆಯೇ

ಒಂದು ಕಡೆ ಹೋಗಿದ್ದೆ"

"ದೂರದ ಊರು ಯಾವುದು ?"

"ನಮ್ಮ ಊರೊಂದು ಕಾಡುದೊಡ್ಡಿ ಸ್ವಾಮಿ"

"ಅದಕ್ಕೆ ಹೆಸರೇ ಇಲ್ಲವೆ? ಹೇಳಬಾರದೆ"

ಊರ ಹೊಸರೇನೋ ಚಂದಾಗಿದೆ. ಆದರೆ ಗಿಡಸೀಮೆ, ಹಳ್ಳಿ ನಿಮ್ಮ ಕಡೆ ಊರುಗಳು ಏನು ನಾಜೋಕಾಗಿವೆ ! ಜನಗಳೂ ಒಳ್ಳೆ ಮೋಜಾಗಿದಾರೆ"

"ಅದು ಸರಿ ನಿಮ್ಮ ಊರ ಹೆಸರೇ ಹೇಳಲಿಲ್ಲವಲ್ಲಾ !"

"ನಮ್ಮೂರ ಹೆಸರೇ? ರಾಮನಗರ ಅಂತಾರ ನೋಡಿ "

ಊರಿನ ಹಸರು ಕಿವಿಗೆ ಬಿದ್ದ ಕ್ಷಣದಲ್ಲೇ ರಂಗಯ್ಯನ ಕಿವಿ ನೆಟ್ಟಗಾದವು ಯಾವ ರಾಮನಗರವೊ ಏನೊ ಎಂದುಕೊಂಡ. ಲಿಂಗಮ್ಮ, ರಾಮನಗರ ಎಲ್ಲಾ ಕ್ಷಣದಲ್ಲೇ ಕಣ್ಣಿಗೆ ಕಟ್ಟಿದಂತಾಯಿತು ಕೊಂಚ ಹೊತ್ತು ಮಾತೇ ಹೊರಡಲಿಲ್ಲ ಯಾವ ರಾಮನಗರವೆಂದು ಕೇಳಲೇ, ಬೇಡವೇ ಎಂದು ಮನಸ್ಸು ಅತ್ತ ಇತ್ತ ತುಯ್ದಾಡುತ್ತಿತ್ತು

ರಂಗಯ್ಯ ಮೆಲ್ಲನೆ "ಏಕೆ ನಿಂತಿದ್ದೀಯಪ್ಪ, ಬಾ ಕೂತುಕೊ" ಎಂದ

"ಅಯ್ಯೋ ತಡೀರಿ. ಕೂತುಕೊಳ್ಳುವುದಕ್ಕೆ ಹೊತ್ತಿಲ್ಲ ನೋಡಿ ಈ ರಸ್ತೆಯಲ್ಲಿ ಗಾಡಿ ಬಿಟ್ಟಿದ್ದೀನಿ. ಎತ್ತುಗಳಿಗೆ ಹುಲ್ಲುಬೇಕು ನಿಮ್ಮೂರಲ್ಲಿ ಎಲ್ಲಾದರು ಹುಲ್ಲು ಸಿಕ್ತದೆಯೆ ಸ್ವಾಮಿ ?

"ಹುಲ್ಲುಬೇಕೆ? ಇರಲಿ ಚಿಂತೆ ಇಲ್ಲ, ಬಾ ಕುಳಿತುಕೊ ರಾಮನಗರದಲ್ಲಿ ಯಾರಪ್ಪ ನೀನು?"

"ಅಲ್ಲಿ ನಿಮಗೆ ಯಾರು ಗೊತ್ತು ಸ್ವಾಮಿ? ನಿಮಗೆ ರವಷ್ಟು ನಮ್ಮೂರು ಗೊತ್ತಿರುವಂಗೆ ಕಾಣ್ತದೆ"

"ನೀನಾರು ಹೇಳಪ್ಪ ಮೊದಲು"

"ಹೊನ್ನಯ್ಯ ಅಂತ ಇದ್ದಾರೆ ಒಬ್ಬರು ನಾನು ಅವರ ಮನೆ ಆಳು ಸ್ವಾಮಿ: ಯಾರಿಗೊ ಮರದ ಸಾಮಾನು ತುಂಬಿ ಕಳುಹಿಸಿದ್ದರು. ಈಗ ಊರಿಗೆ ಗಾಡಿ ಹೊಡೆದುಕೊಂಡು ಹೋಗ್ತಾ ಇದ್ದೀನಿ"

ಊರ ಹೆಸರು ಕೇಳಿದಾಕ್ಷಣವೇ ರಂಗಯ್ಯ ರಾಮನಗರದ ಪ್ರಕೃತಿ ಸೌಂದರ್ಯವನ್ನೂ ಲಿಂಗಮ್ಮ ತಿಮ್ಮಕ್ಕ ಮತ್ತು ಬಸವಯ್ಯನವರನ್ನೂ ನೆನೆಸಿಕೊಂಡು ಆಳಿನಲ್ಲಿ ಆತ್ಮೀಯ ಭಾವನೆಯನ್ನು ತಾಳಿದ ಲಿಂಗಮ್ಮನ ವಿಚಾರವಾಗಿ ತಿಳಿಯಲು ಮನ ತವಕಪಡುತ್ತಿದೆ ದುಡುಕಿ ಕೇಳಿದರೆ ತನ್ನನ್ನು ಏನೆಂದು ತಿಳಿದಾನೊ ಎಂದು ಯೋಚಿಸಿ ಕೊಂಚ ಸಮಾಧಾನವನ್ನು ತಂದುಕೊಂಡು "ನನ್ನನ್ನು ಗುರುತಿಸಲಾರೆಯ ನೀನು?" ಎಂದ ರಂಗಯ್ಯ.

"ತಾವು ಯಾರೊ ಗೊತ್ತಾಗಲಿಲ್ಲ! ಮುಖದ ಗುರುತು ಕಾಣು ವುದಿಲ್ಲ ಈ ಹಾಳು ಮೊಬ್ಬುಗತ್ತಲಲ್ಲಿ"

"ಅಯ್ಯೋ ಹುಚ್ಚಪ್ಪ, ದನಿಯಾದರೂ ಗುರುತನ್ನು ತೋರಿಸ ಲಿಲ್ಲವೆ? ನಾನು ರಂಗಯ್ಯ ಕಣಯ್ಯ ನಿಮ್ಮ ಯಜಮಾನನ ತಂಗಿಯ ಮಗ"

"ಸ್ವಾಮಿ, ನೀವೆ! ನಾನು ಯಾರೋ ಅಂತ ಸಿಕ್ಕಾಬಟ್ಟೆ ಮಾತನಾಡಿದ ಏನೂ ತಿಳಿದುಕೊಳ್ಳಬೇಡಿ ದೇವರು ಸಿಕ್ಕಿದಂಗೆ ಸಿಕ್ಕಿದಿರಿ ನಿಮ್ಮ ತಾಯಿಯವರು ಸುಖವಾಗಿದ್ದಾರೆಯೆ? ನಿಮ್ಮನ್ನು ನೋಡಿ ಬಹಳ ವರ್ಷವಾಯ್ತು ಏನೋ ಪಾಪ, ಆಗಬಾರದ್ದು ಆಗಿ ಹೋಯಿತು ತಾಯಿಯವರಾದರೂ ಬರಬಾರದೆ ಊರಕಡೆ? ನೀವಂತೂ ಮುಖ ತೋರಿಸಲಿಲ್ಲ"

"ಏನು ಸಮಾಚಾರ, ಬಸವಯ್ಯ ತಿಮ್ಮಕ್ಕ ಚೆನ್ನಾಗಿದ್ದಾರೆಯೆ?

"ಚೆಂದಾಗಿದ್ದಾರೆ ಎರಡು ಹೊತ್ತೂ ನಿಮ್ಮ ಸುದ್ಧಿಯನ್ನೇ ಮಾತಾಡ್ತಾರೆ ಲಿಂಗಮ್ಮ ಈಗ್ಗೆ ಒಂದು ವರ್ಷದಿಂದಲೂ ಜ್ವರದಿಂದ ನರಳುತ್ತಿದ್ದಾಳೆ ಅನೇಕ ಪಂಡಿತರಿಂದ ಔಷಧಿ ಕೊಡಿಸಿದರೂ ಗುಣ ವಾಗ್ಲಿಲ್ಲ. ಯಂತ್ರ ಮಂತ್ರ ಎಲ್ಲಾ ಆಯ್ತು. ಬೇಕಾದಷ್ಟು ಹರಕೆ ಮಾಡಿದ್ರು ದೇವರುಗಳಿಗೆ. ಆದರೂ ಎಳ್ಳಷ್ಟೂ ಜಗ್ಗಲಿಲ್ಲ, ರೋಗ. ಮೂಳೆ ಚರ್ಮ ಮಾತ್ರ ಕಾಣ್ತಾದೆ ಆಯಮ್ಮ ಚೆಂದಾಗಿದ್ದಾಗ ಏನು ಕಳೆ ಇತ್ತು ಸ್ವಾಮಿ, ಮುಖದ ಮೇಲೆ! ಅಬ್ಬಾ, ಒಳ್ಳೆ ಚಲುವೆ ಅದೆಲ್ಲಿ ಕಾಲು ಹಾಕಿತೋ ಆ ಖಾಯಿಲೆ, ಪಾಪ" ಎಂದು ಕನಿಕರವನ್ನು

ಸೂಸುವ ದನಿಯಲ್ಲಿ ಹೇಳಿದ.

ರಂಗಯ್ಯನಿಗೆ ಲಿಂಗಮ್ಮನ ಖಾಯಿಲೆಯ ವಿಚಾರದ ಒಂದೊಂದು ಮಾತೂ ಹೃದಯವನ್ನು ತಿವಿದಂತ ಕಿವಿಗೆ ಹೋಗುತ್ತಿದ್ದುವು ಗಾಡಿಯವನು ಹೇಳಿದ್ದನ್ನೆಲ್ಲಾ ರಂಗಯ್ಯ ತಲೆ ಬಗ್ಗಿಸಿಕೊಂಡು ಕೇಳಿದ ಇಂಥ ಕಷ್ಟಕಾಲದಲ್ಲಿ ಏನಾದರೊಂದು ಉಪಕಾರ ತನ್ನಿಂದ ಲಿಂಗಮ್ಮನಿಗೆ ನಡೆದರ ತನ್ನ ಮನಸ್ಸಿಗೆ ನೆಮ್ಮದಿಯಾದರೂ ಸಿಕ್ಕೀತು ಎಂದು ಬಗೆದು, ಆತನನ್ನು ಗಾಡಿಯ ಸಮೇತ ಮನೆಗೆ ಕರೆದುಕೊಂಡು ಹೋಗಿ ತನ್ನ ತಾಯಿಗೆ ಸಮಾಚಾರವೆಲ್ಲವನ್ನೂ ತಿಳಿಸಿದ. ಸಿದ್ದಮ್ಮನು ತನ್ನ ತಾಯಿ, ಅತ್ತಿಗೆಯರ ಕ್ಷೇಮಸಮಾಚಾರವನ್ನು ವಿಚಾರಿಸಿ ಲಿಂಗಮ್ಮನ ಸ್ಥಿತಿಗೆ ಮರುಗಿದಳು ಮಗನಿಗೆ "ಏನಾದರೂ ಔಷಧಿಯನ್ನು ವೈದ್ಯರಿಂದ ಕೊಡಿಸಿ ಕಳುಹಿಸಪ್ಪ ಆ ಜಿಪುಣ ಮಗಳಿಗೆ ಎಲ್ಲಿ ಔಷಧ ಕೊಡಿಸುತ್ತಾನೆ?" ಎಂದಳು ರಂಗಯ್ಯ ವೈದ್ಯರಲ್ಲಿ ಹೋಗಿ ಲಿಂಗಮ್ಮನ ಖಾಯಿಲೆಯ ತರಹವನ್ನು ಆಳಿನಿಂದ ಹೇಳಿಸಿ ಔಷಧವನ್ನು ಈಸಿಕೊಟ್ಟು ಅವರ ಸಲಹೆಯಂತೆ ಔಷಧವನ್ನು ಲಿಂಗಮ್ಮನಿಗೆ ಕೊಡುವಂತೆ ಆಳಿಗ ಹೇಳಿದ. ಅಂದಿನ ರಾತ್ರಿ ಎತ್ತುಗಳಿಗೆ ಹುಲ್ಲು ಒದಗಿಸಿಕೊಟ್ಟ ಗಾಡಿಯವನನ್ನು ಗೆಳೆಯನಂತೆ ಕಂಡು ಊಟ ಉಪಚಾರಮಾಡಿಸಿದ ಮಾರನೆಯ ಬೆಳಗೆ ಸ್ವಲ್ಪದೂರದವರೆಗೂ ಹೋಗಿ ಅವನನ್ನು ಕಳುಹಿಸಿಕೊಟ್ಟು ಕೊನೆಯದಾಗಿ ಅವನಿಗೆ ಹೇಳಿದ–' ಲಿಂಗಮ್ಮನಿಗೆ ನನ್ನ ವಿಚಾರವನ್ನು ತಿಳಿಸು ಹೆದರಬೇಡವೆಂದು ನಾನು ಹೇಳಿದೆ ಎಂದು ಹೇಳಿ ನೀನು ಸಮಾಧಾನ ಪಡಿಸಬೇಕಪ್ಪಾ ತಿಮ್ಮಕ್ಕನವರಿಗೂ ಬಸವಯ್ಯನವರಿಗೂ ನಾನು ಕೇಳಿದೆ ಎಂದು ಹೇಳು, ಜಾಗ್ರತೆ ಹೋಗು " ರಂಗಯ್ಯನ ಮನೋವ್ಯಥೆ ಈಗ ಇಮ್ಮಡಿಯಾಯಿತು ಲಿಂಗಮ್ಮನ ಖಾಯಿಲೆಯನ್ನು ನೆನೆದಂತೆಲ್ಲಾ ಮುರಿದ ಮದುವೆಯ ಚಿಂತೆಯೇ ಅವಳ ಈ ಖಾಯಿಲೆಗೆ ಕಾರಣವೆಂದು ಅವನ ಅಂತರಾತ್ಮ ಸಾರಿ ಹೇಳುತ್ತಿತ್ತು ಒಂದೊಂದು ಸಾರಿ ರಾಮನಗರಕ್ಕೆ ತಾನೇ ಹೋಗಿ ಲಿಂಗಮ್ಮನನ್ನು ಕಣ್ಣಾರೆ ನೋಡಿ ಬರಬೇಕೆಂದು ಯೋಚಿಸುತ್ತಿದ್ದ. ಆದರೂ ಒಂದು ಮನಸ್ಸು ತನ್ನ ಸೋದರಮಾವನ ಮುಖವನ್ನು ನೋಡಲು ಒಪ್ಪದು

ಆಳು ಲಿಂಗಮ್ಮನಿಗೆ ಔಷಧವನ್ನು ಕೊಡುವ ಕುತೂಹಲದಲ್ಲಿ ಎತ್ತುಗಳ ದಣಿವನ್ನೂ ಕೂಡ ಗಮನಿಸದೆ ಗಾಡಿಯನ್ನು ಓಡಿಸಿಕೊಂಡೇ ಊರಿಗೆ ಬಂದ ಬಂದವನೇ ತಡ, ತನ್ನ ಯಜಮಾನನಿಗೂ ಆತನ ಹೆಂಡತಿಗೂ ರಂಗಯ್ಯನವರು ತನಗೆ ಸಿಕ್ಕಿದ್ದರೆಂದು ಹೇಳಿ "ನೋಡಿ, ಇಲ್ಲಿ ಔಷಧವನ್ನು" ಎಂದು ತೋರಿದ ಮುಖದಮೇಲೆ ಬಟ್ಟೆಯನ್ನು ಹೊದೆದುಕೊಂಡು ಹಾಸಿಗೆಯಮೇಲೆ ಮಲಗಿದ್ದ ಲಿಂಗಮ್ಮ ಮುಖದಿಂದ ಬಟ್ಟೆಯನ್ನು ತೆಗೆದು, ಕಣ್ಣುಗಳನ್ನರಳಿಸಿ, ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಆಳು ಹೇಳುವ ಮಾತುಗಳನ್ನು ಕುತೂಹಲದಿಂದ ಕೇಳುತ್ತಿದ್ದಳು ಕ್ಷಣಮಾತ್ರದಲ್ಲಿ ಮನಸ್ಸಿನಲ್ಲಿ ಯಾವುದೋ ಶಕ್ತಿ ಮಿಂಚಿದಂತಾಯಿತು ತನ್ನ ದುರ್ದೈವವನ್ನು ತಾನೇ ಶಪಿಸಿದಳು ಅವರ ಹಸ್ತಸ್ಪರ್ಶದಿಂದ ಈಸಿಕೊಟ್ಟ ಔಷಧದಿಂದಲಾದರೂ ಗುಣವಾಗಬಹುದೆಂಬ ನಂಬಿಕೆ ಆಕೆಯ ಮನದಲ್ಲಿ ಮೂಡಿತು. ಹೊನ್ನಯ್ಯನೂ ತಿಮ್ಮಕ್ಕನೂ "ಆಮೇಲೆ ಏನಾಯಿತು? ಏನು ಹೇಳಿದರು?" ಎಂದು ಬಹಳ ಆತುರವಾಗಿ ಕೇಳಿದರು. ಆಳು ನಡೆದದ್ದೆಲ್ಲವನ್ನೂ ಹೇಳಿ ಔಷಧವನ್ನು ಲಿಂಗಮ್ಮನಿಗೆ ಕೊಡಿಸಿದರೆಂದು ತಿಮ್ಮಕ್ಕನ ಕೈಗೆ ಕೊಟ್ಟ. ಲಿಂಗಮ್ಮ ಕೇಳುತ್ತಾ ಮೈಯಲ್ಲಿ ಶಕ್ತಿ ಇಲ್ಲದಿದ್ದರೂ ನೆಲಕ್ಕೆ ಊರಿದ ಕೈಗಳ ಮೇಲೆ ಶರೀರದ ಭಾರವನ್ನಿಟ್ಟು ಹಾಸಿಗೆಯಮೇಲೆದ್ದು ಕುಳಿತುಕೊಂಡು "ಔಷಧವನ್ನು ಕೊಡವ್ವ" ಎಂದು ತಾಯಿಯಿಂದ ಈಸಿಕೊಂಡಳು. ಮಗಳು ರಂಗಯ್ಯನಲ್ಲಿಟ್ಟಿರುವ ಅಕ್ಕರೆ, ಅಭಿಮಾನವನ್ನು ನೋಡಿ ತಿಮ್ಮಕ್ಕ ಮನಸ್ಸಿನಲ್ಲಿ ಮರುಗುತ್ತಾ,

"ನನ್ನ ಮಗಳನ್ನು ಮದುವೆಯಾಗಿದ್ದರೆ ರಂಗಪ್ಪನವರು ಎಷ್ಟು ಪ್ರೀತಿಯಿಂದ ಕಾಣುತ್ತಿದ್ದರೋ! ನನ್ನ ಯಜಮಾನನ ಹೃದಯ ಕರಗದೆ ಹೋಯಿತು. ಈ ದುಃಖವನ್ನು ಸಾಯುವತನಕ ಮರೆಯುವ ಹಾಗಿಲ್ಲ ರಂಗಪ್ಪನವರ ಮನಸ್ಸು ಎಷ್ಟು ಕಲಕಿಹೋಗಿರಬಹುದೂ, ದೇವರೇ ಬಲ್ಲ" ಎಂದು ನಿಟ್ಟುಸಿರುಬಿಟ್ಟಳು ಲಿಂಗಮ್ಮ ಔಷಧವನ್ನು ಅಂಗೈಯಲ್ಲಿಟ್ಟುಕೊಂಡು ದೃಷ್ಟಿಸಿನೋಡಿ, ಕಣ್ಣುಗಳಿಗೆ ಒತ್ತಿಕೊಳ್ಳುತ್ತಾ ರಂಗಯ್ಯನ ಸರಳಸ್ವಭಾವ, ಸುಗುಣ, ತಮ್ಮಿಬ್ಬರ ಬಾಲ್ಯದ ಸವಿನೆನಪು, ಮುರಿದ ಮದುವೆ ಎಲ್ಲವನ್ನೂ ಒಂದೊಂದಾಗಿ ಮನಸ್ಸಿನಲ್ಲಿ ಚಿತ್ರಿಸಿಕೊಂಡು

ಒಳಗಣ್ಣಿನಿಂದ ನೋಡತೊಡಗಿದಳು. ಆಕೆಯ ಕಣ್ಣುಗಳಿಂದ ಎರಡು ಹನಿಗಳು ಕೆನ್ನೆಯಮೇಲೆ ಉರುಳಿದವು. ಹೊನ್ನಯ್ಯ ಮಗಳ ದುಃಖದ ಅಳವನ್ನು ನೋಡಿ ಮನಸ್ಸಿನಲ್ಲಿ 'ಇದಕ್ಕೆಲ್ಲಾ ನಾನೇ ಕಾರಣ; ಮಾಡಬಾರದ್ದನ್ನು ಮಾಡಿದರೆ ಆಗಬಾರದ್ದು ಆಗುತ್ತದೆ' ಎಂದುಕೊಂಡು ಹನಿಗೂಡಿದ ಕಣ್ಣುಗಳನ್ನು ಒರಸಿಕೊಳ್ಳುತ್ತಾ ಹೊರಗೆ ಹೊರಟ. ಎರಡು ಮೂರು ದಿನಗಳಲ್ಲಿ ಲಿಂಗಮ್ಮನಿಗೆ ಸ್ವಲ್ಪ ಗುಣವಾಯಿತು. ಒಂದು ದಿನ ಆಕೆ ಮನೆಯಲ್ಲಿ ಯಾರೂ ಇಲ್ಲದಿದ್ದಾಗ ಆಳನ್ನು ಕರೆದು "ನಮ್ಮ ಮಾವಯ್ಯನವರು ಏನು ಹೇಳಿದರು? ಸುಖವಾಗಿದ್ದಾರೆಯೆ? ನನ್ನನ್ನು ಕುರಿತು ಕೇಳಿದರೆ? ಸರಿಯಾಗಿ ಹೇಳು" ಎಂದು ಮೆಲು ದನಿಯಲ್ಲಿ ಒತ್ತಿ ಒತ್ತಿ ಕೇಳಿದಳು.

ಲಿಂಗಮ್ಮ ರಂಗಯ್ಯನಲ್ಲಿಟ್ಟಿರುವ ನಿಷ್ಕಳಂಕ ಪ್ರೇಮ ಆಳಿಗೂ ಅರಿವಾಗದೆ ಇರಲಿಲ್ಲ. ಆಕೆಯ ಹೃದಯಕಮಲದಿಂದ ಪ್ರೇಮಪೂರಿತವಾಗಿ ಬರುತ್ತಿದ್ದ ಮಾತಿನ ಶಬ್ದ ಆಳಿನ ಕಣ್ಣುಗಳನ್ನು ಹನಿಗೂಡಿಸಿತು.

"ನಾನು ನಿಮ್ಮ ಮನೆಯ ಆಳೆಂದು ಹೇಳಿದ ಕ್ಷಣವೇ ನನ್ನನ್ನು ಗುರುತಿಸಿ, ತಕ್ಷಣವೇ ನಿಮ್ಮ ಸಮಾಚಾರವನ್ನು ಕೇಳಿದರಮ್ಮ. ನಿಮಗೆ ಖಾಯಿಲೆ ಎಂದು ಹೇಳಿದ ಗಳಿಗೆಯಲ್ಲೇ ಅವರ ಮುಖ ಕಳೆಗುಂದಿತು. ಬೆಪ್ಪುಹಿಡಿದವರಂತೆ ತಲೆ ಬಗ್ಗಿಸಿಬಿಟ್ಟರು. ನನ್ನನ್ನು ಪ್ರೀತಿಯಿಂದ ಮನೆಗೆ ಕರೆದುಕೊಂಡುಹೋಗಿ ಉಪಚಾರಮಾಡಿದ್ರು. ವೈದ್ಯರಲ್ಲಿ ಕರೆದುಕೊಂಡುಹೋಗಿ ತಮ್ಮ ಕೈಯಿಂದ ದುಡ್ಡು ಕೊಟ್ಟು ನಿಮಗೆ ಔಷಧ ಕೊಡ್ಸಿದರಮ್ಮ. 'ಈ ಔಷಧದಿಂದ ಖಂಡಿತ ಗುಣವಾಗುತ್ತದೆ, ಹೆದರ ಬೇಡ ಅಂತ ಹೇಳು' ಎಂದು ಹೇಳಿದರು."

"ಒಂದು ಸಾರಿಯಾದರೂ ನಮ್ಮ ಊರಿಗೆ ಬನ್ನಿ ಎಂದು ಹೇಳಬಾರದಾಗಿತ್ತೆ?"

"ಅವರು ಬರುವುದಿಲ್ಲವೆಂದು ತಿಳಿದು ನಾನು ಹಾಗೆ ಹೇಳಲಿಲ್ಲವಮ್ಮ."

ಅಷ್ಟು ಮಾತನ್ನು ಆಳಿನ ಬಾಯಿಂದ ಕೇಳುವುದರಲ್ಲಿ ಆಕೆಯ ದುಃಖ ಉಕ್ಕಿ ಉಕ್ಕಿ ಬಂದು ಕಣ್ಣೀರು ಸುರಿಯತೊಡಗಿತು. ಸೆರಗಿ

ನಿಂದ ಒರಸಿಕೊಳ್ಳುತ್ತಾ "ಹೋಗಲಿ ಬಿಡಪ್ಪ" ಎಂದು ಹೇಳಿ ಆ ಮಾತನ್ನು ಅಲ್ಲಿಗೆ ನಿಲ್ಲಿಸಿದಳು.

ರಂಗಯ್ಯನಲ್ಲಿದ್ದ ಅನುರಾಗವನ್ನು ತಾನು ಬೇರ್ಪಡಿಸಿದುದೇ ಮಗಳ ಮನೋರೋಗಕ್ಕೆ ಕಾರಣವೆಂದು ಹೊನ್ನಯ್ಯ ಪಶ್ಚಾತ್ತಾಪಪಟ್ಟ ಈ ಚಿಂತೆ ಆತನ ಮನಸ್ಸಿನಲ್ಲಿ ಪ್ರತಿ ಘಳಿಗೆಗೂ ಹೆಚ್ಚು ಹಚ್ಚಾಗಿ ಹೃದಯದಲ್ಲಿ ನಾಟಿಹೋಯಿತು ಆತನಿಗೂ ಮನೋರೋಗವುಂಟಾಯಿತು ಆ ವಿಚಾರವನ್ನು ಹಂಡತಿಗೂ ಹೊರಗೆಡಹಲು ಆತ ಇಷ್ಟಪಡಲಿಲ್ಲ ದಿನೇ ದಿನೇ ಊಟ ತಿಂಡಿಗಳಲ್ಲಿ ಆದರ ತಪ್ಪಿತು. ಮನೆ ಮಠ ಯಾವುದರಲ್ಲಿಯೂ ಅವನಿಗೆ ಮನಸ್ಸಿಲ್ಲ ಏನೋ ಒಂದು ತರಹದ ಅಶಾಂತಿ ಸದಾ ಮನದಲ್ಲಿ ಮನೆಮಾಡಿಕೊಂಡಿತು ಮನೆ ಸೇರದ ಹುಚ್ಚನಂತೆ ಹೊರಗೆ ತಿರುಗುತ್ತಿದ್ದ ಕೊನೆಗೆ ಒಂದು ದಿನ ಜ್ವರದಿಂದ ಪೀಡಿತನಾಗಿ ಆತನೂ ಹಾಸಿಗೆ ಹಿಡಿದ. ಹೆಂಡತಿಯೂ ತಾಯಿಯೂ ಹಳ್ಳಿಯ ವೈದ್ಯರನ್ನು ಕರತಂದು ತೋರಿಸಿದರು ಆದರೆ ತಾನು ಯಾರಿಂದಲೂ ಔಷಧವನ್ನು ತೆಗೆದುಕೊಳ್ಳುವುದಿಲ್ಲವೆಂದು ಹೇಳಿ ಆತ ಅವರನ್ನು ಕಳುಹಿಸಿಬಿಟ್ಟ ತಿಮ್ಮಕ್ಕ ಹೇಳಿದಳು— "ರೋಗ ಬಂದರ ಔಷಧ ಕುಡೀದೆ ಗುಣವಾಗ್ತದೆಯೇ? ಅಷ್ಟು ದುಡ್ಡು ಹೋದರೆ ಹೋಗ್ಲಿ ದುಡ್ಡನ್ನು ನಾವು ಸಂಪಾದಿಸುತ್ತೇವೆ, ನಮ್ಮನ್ನು ಅದು ಸಂಪಾದಿಸುತ್ತದಯೆ?" ಹೆಂಡತಿ ಹೇಳುವುದು ಸರಿಯಾದುದೆಂದು ಹೊನ್ನಯ್ಯ ತಿಳಿದರೂ "ಅದೆಲ್ಲಾ ನನಗೆ ಗೊತ್ತು ಆದರೂ ಯಾವ ಔಷಧಿಯೂ ಈ ನನ್ನ ರೋಗಕ್ಕೆ ಹಿಡಿಯೋದಿಲ್ಲ. ಇನ್ನಷ್ಟು ದಿನ ನೋಡುತ್ತೇನೆ ದೇವರು ಮಾಡಿದಂತೆ ಆಗಲಿ" ಎಂದು ಮರುಕ ತುಂಬಿದ ಮಾತಿನಲ್ಲಿ ಹೇಳಿದ ಔಷಧವನ್ನು ತೆಗೆದುಕೊಳ್ಳುವಂತೆ ಕರಿಹೊನ್ನಮ್ಮನೂ ಮಗನಿಗೆ ನಾನಾ ವಿಧವಾಗಿ ಬೋಧಿಸಿದಳು, ಅವಳ ಮಾತುಗಳೂ ಅವನ ಕಿವಿಯ ಮೇಲೆ ಬೀಳಲಿಲ್ಲ ಲಿಂಗಮ್ಮನಿಗೆ ತನ್ನ ತಂದೆಯೂ ಹಾಸಿಗೆ ಹಿಡಿದನಲ್ಲಾ ಎಂಬ ವ್ಯಥೆ ಬೇರೆ ಎಷ್ಟಾದರೂ ಸಾಕಿ ಸಲಹಿದ ತಂದೆ ತಂದೆ ಏನಾದರೂ ಗತಿಸಿದರೆ ತನ್ನ ಬಾಳು ಇನ್ನೆಂಥ ಕಷ್ಟದ ದಾರಿಯನ್ನು ಹಿಡಿಯುವುದೋ ಎಂದು ಹೆದರಿ "ಅಪ್ಪಾ, ನೀನು ತಿಳಿ

ದವನು ಮಕ್ಕಳಂತೆ ಔಷಧ ಬೇಡ ಅನ್ನುತ್ತೀಯಲ್ಲಾ. ನಮಗೆಲ್ಲಾ ಹೆದರಿಕೆಯಾಗ್ತದ ನೀನು ಮದ್ದು ತಕ್ಕೊಳ್ಳಬೇಕಪ್ಪಾ" ಎಂದು ಬೇಡಿದಳು ಹೊನ್ನಯ್ಯ ಕಣ್ಣೀರು ತುಂಬಿಕೊಂಡು 'ತಕ್ಕೋತೆನಮ್ಮಾ, ತಕ್ಕೋತೇನೆ'' ಎಂದ. ತಪ್ಪನಾದ ಅವನ ಮಾತಿನಲ್ಲಿ ತಾನು ಇನ್ನು ಹೆಚ್ಚು ದಿನ ಬದುಕಲಾರೆ, ಮದ್ದು ವಾಸಿಮಾಡಲಾಗಲಾರದ ರೋಗ ವಿದೆಂಬ ಅರ್ಥ ಅಡಕನಾಗಿತ್ತು. ಹಂಡತಿಯೂ ಮಗಳೂ ಆತನ ಹಾಸಿಗೆಯ ಪಕ್ಕದಲ್ಲಿ ಕುಳಿತು ಉಪಚರಿಸುತ್ತಿದ್ದರು ದಿನೇ ದಿನೇ ಖಾಯಿಲೆಯು ವಿಷಮಾವಸ್ಥೆಗೇರಿತು. ತಿಮ್ಮಕ್ಕನಿಗೆ ಅಧೈರ್ಯವುಂಟಾಯಿತು. ಇನ್ನೇನು ಗತಿ ಎಂದು ಕಣ್ಣೀರು ಕರೆಯುತ್ತಿದ್ದಳು ಆತನು ಮಗಳನ್ನೂ, ಹೆಂಡತಿಯನ್ನೂ ತಾಯಿಯನ್ನೂ ಹಾಸಿಗೆಯ ಪಕ್ಕದಲ್ಲಿ ಕರದು ಕೂಡಿಸಿಕೊಂಡು, ಕುಂದಿಹೋಗಿದ್ದ ಧ್ವನಿಯಿಂದ "ವೈದ್ಯರು ವಾಸಿಮಾಡುವ ಖಾಯಿಲೆ ಅಲ್ಲ, ಇದಕ್ಕೆ ಸಾವೇ ಔಷಧಿ ನೀವು ಯಾರೂ ಯೋಚಿಸಬೇಡಿ ನಾನು ಮಾಡಿದ್ದನ್ನು ನಾನೇ ಅನುಭವಿಸಬೇಕು ನಾನು ಅಹಂಕಾರದಿಂದ ವರ್ತಿಸಿದೆ ಸಾಯುವ ಕಾಲದಲ್ಲಿ ಅದರ ಫಲವನ್ನು ಅನುಭವಿಸಬೇಕಾಗಿದ'' ಎಂದು ಕಣ್ಣೀರಿಟ್ಟ ಪಕ್ಕದಲ್ಲಿ ಕುಳಿತಿದ್ದ ಹಂಡತಿ ಮತ್ತು ಮಗಳ ಕೈಗಳನ್ನು ಹಿಡಿದುಕೊಂಡು "ರಂಗಯ್ಯನನ್ನು ಕರೆಸಿಕೊಡಿ ಕೊನೆಯದಾಗಿ ಆತನ ಮುಖ ನೋಡಿ ಸಾಯುತ್ತೇನೆ'' ಎಂದು ಹೇಳುತ್ತಿದ್ದಂತೆಯೇ ಆತನಿಗೆ ಬವಳಿ ಬಂದಂತಾಯಿತು

ತಾಯಿಯೂ ಮಗಳೂ ಗಟ್ಟಿಯಾಗಿ ಅಳತೊಡಗಿದರು ಸ್ವಲ್ಪ ಹೊತ್ತಿನಲ್ಲೇ ಆತ ಎಚ್ಚರಗೊಂಡು ಅವರನ್ನು "ಅಳಬೇಡಿ, ಮೊದಲು ರಂಗಯ್ಯನನ್ನು ಕರಸಿ'' ಎಂದು ಸಮಾಧಾನ ಮಾಡಿದ ತಿಮ್ಮಕ್ಕ "ರಂಗಪ್ಪನನ್ನು ಯಾರು ಕರೆದುಕೊಂಡು ಬರುತ್ತಾರೆ? ಅವರು ಬರುವುದುಂಟೆ? ಈಗ ಎಲ್ಲಿದ್ದಾರೋ, ಏನೋ! ಆಮೇಲೆ ನಿಧಾನವಾಗಿ ಕರೆಸೋಣ ನೀವು ಸ್ವಲ್ಪ ಔಷಧವನ್ನು ತೆಗೆದುಕೊಳ್ಳಿ" ಎಂದಳು ಆದರೇನು? ಹೊನ್ನಯ್ಯನ ಪ್ರಾಣಜ್ಯೋತಿ ಆರಿಹೋಗುವ ವೇಳೆ ತೀರ ಹತ್ತಿರವಾಗಿತ್ತು ಮಗಳ ಕೈಗಳನ್ನು ತನ್ನ ಕಣ್ಣುಗಳಿಗೆ ಒತ್ತಿಕೊಳ್ಳುತ್ತಾ ವಿಶಾಲವಾಗಿ ಕಣ್ಣು ತೆರೆದು ಮಗಳ ಮುಖವನ್ನೇ ದಿಟ್ಟಿಸಿ ನೋಡಿದ.

ಆ ದೀನ ದೈನ್ಯ ದೃಷ್ಟಿ ತನ್ನನ್ನು ಮನ್ನಿಸಬೇಕೆಂದು ಲಿಂಗಮ್ಮನನ್ನು ತಂದೆ ಕೇಳುತ್ತಿರುವಂತಿತ್ತು. ತಕ್ಷಣ ದೃಷ್ಟಿಯ ತೀಕ್ಷ್ಣತೆ ಇಂಗಿ ಕಣ್ಣುಗಳಿಗೆ ಮಂಜು ಕವಿದಂತಾಯಿತು ಕೊನೆಯದಾಗಿ "ಲಿಂಗಮ್ಮಾ, ರಂಗಯ್ಯ" ಎಂದು ತೊದಲುತ್ತಾ ಕೂಗಿದ. ಮತ್ತೆ ಮಾತು ಹೊರಡಲಿಲ್ಲ ರೆಪ್ಪೆಗಳು ಒಂದನ್ನೊಂದು ಸೇರಲಿಲ್ಲ ಅವನ ದೇಹಪಂಜರದಿಂದ ಪ್ರಾಣಪಕ್ಷಿ ಹಾರಿಹೋಯಿತು. ತಿಮ್ಮಕ್ಕ ಚೀರಿಕೊಂಡಳು. ಲಿಂಗಮ್ಮ ತಂದೆಯ ಎದೆಯ ಮೇಲೆ ಬಿದ್ದು ಗೋಳಾಡಿದಳು.

೫

ಹೊನ್ನಯ್ಯನ ಮರಣ ವಾರ್ತೆಯನ್ನು ಬಸವಯ್ಯ ನವಲೂರಿಗೆ ಹೋಗಿ ತಿಳಿಸಿದ ಮುತ್ತಣ್ಣನೂ ನಾಗಯ್ಯನೂ ಸಮಾಚಾರ ತಿಳಿದ ಕೂಡಲೇ ಒಂದೇ ಉಸಿರಿಗೆ ರಾಮನಗರಕ್ಕೆ ಬಂದರು ಮನೆಯವರೆಲ್ಲಾ ಕಣ್ಣೀರು ಕೋಡಿ ಹರಿಸುತ್ತಿದ್ದರು. ಮನೆ ದುಃಖದ ಮಡುವಿನಲ್ಲಿ ಮುಳುಗಿಹೋಗಿತ್ತು ಮಾವನ ಶವವನ್ನು ನೋಡಿ ನಾಗಯ್ಯ ಮೌನವಾಗಿ ಕಣ್ಣೀರು ಕರೆದ ಮುತ್ತಣ್ಣ "ಹೊನ್ನಪ್ಪನವರು ಬದುಕಿದ್ದಾಗ ಮನೆಯಲ್ಲಿ ಎಂಥಾ ಕಳೆ ಇತ್ತು! ಇಷ್ಟು ಜಾಗ್ರತೆ ಅವರಿಗೆ ಸಾವು ಬರುತ್ತದೆಂದು ತಾನು ತಿಳಿದಿರಲಿಲ್ಲ!" ಎಂದು ಹೇಳಿದ ಅವರ ದರ್ಪ, ಮಾತಿನ ರೀವಿ, ಕಾರ್ಯದಕ್ಷತೆಯ ವಿಚಾರವಾಗಿ ನಾಲ್ಕಾರು ಪ್ರಶಂಸೆಯ ಮಾತುಗಳನ್ನಾಡಿ ಕಣ್ಣೀರು ತಂದುಕೊಂಡ ಸ್ವಲ್ಪ ಹೊತ್ತಾದ ಮೇಲೆ ಬಸಮ್ಮನೂ ಬಂದಳು ಗೋಳಾಡುತ್ತಿದ್ದ ಬೀಗಿತಿಯನ್ನೂ ನೊಸೆಯನ್ನೂ ಆಕೆ ಸಮಾಧಾನ ಪಡಿಸಿದಳು ಹೆತ್ತ ತಾಯಿಯ ಕಣ್ಣೆದುರಿಗೆ ಮಗನೇ ಮೊದಲು ಮೃತ್ಯುವಿಗೆ ತುತ್ತಾದನಲ್ಲಾ ಎಂದು ಕರಿಹೊನ್ನಮ್ಮ ಧಾರೆಧಾರೆಯಾಗಿ ಕಣ್ಣೀರಿಡುತ್ತಾ ಸೊರಗಿ ಸೊಪ್ಪಾಗಿದ್ದಳು. ಶವ ಸಂಸ್ಕಾರವಾಯಿತು ಬಸವಯ್ಯನೇ ಎಲ್ಲಾ ಕಾರ್ಯದಲ್ಲೂ ಮುತುವರ್ಜಿ ವಹಿಸಿದ್ದನು ನೆಂಟರು ಇಷ್ಟರೆಲ್ಲರೂ ಮನೆಯವರೆಲ್ಲರಿಗೂ ಧೈರ್ಯ ಹೇಳಿ ತಮ್ಮ ತಮ್ಮ ಊರುಗಳಿಗೆ ಹೊರಟು ಹೋದರು. ನಾಗಯ್ಯ ಊರಿಗೆ ಹೊರಡುವಾಗ ಹಂಡತಿಗೆ ನೀನು ಇಲ್ಲೇ ಇದ್ದು

ಬಿಟ್ಟರೆ ಹೇಗೆ! ಖಾಯಿಲೆ ಇನ್ನೂ ಪೂರ್ತಿ ಗುಣವಾಗಿಲ್ಲ ಹನ್ನೊಂದನೆ ದಿನದ ತಿಥಿ ತೀರಿದ ಮೇಲೆ ಊರಿಗೆ ಬಂದು ಬಿಡು, ಅಲ್ಲೇ ಸ್ವಲ್ಪ ಸುಧಾರಿಸಿಕೊ" ಎಂದು ಹೇಳಿದ ಮಾವ ತೀರಿಕೊಂಡಿರುವಾಗ ತನ್ನ ಹೆಂಡತಿಯನ್ನು ಊರಿಗೆ ಬಾ ಎಂದು ಕರೆಯುವುದು ಅನುಚಿತವೆಂದು ಅವನು ಯೋಚಿಸಿದ ಆದರೂ ಎಷ್ಟು ದಿವಸ ಹೆಂಡತಿ ತೌರುಮನೆಯಲ್ಲಿರ ಬೇಕೆಂಬ ಪ್ರಶ್ನೆ ಅವನ ಮನಸ್ಸನ್ನು ಕಾಡುತ್ತಿತ್ತು ಆದ್ದರಿಂದಲೇ ಸಮಯ, ಕಾಲವನ್ನು ಯೋಚಿಸದೆಯೆ ಬಾಯಿಂದ ಮಾತುಗಳು ಹೊರ ಬಿದ್ದವು ಗಂಡನು ಆಡಿದ ಮಾತುಗಳು ಲಿಂಗಮ್ಮನಿಗೆ ತುಂಬಾ ವ್ಯಥೆ ಯನ್ನುಂಟು ಮಾಡಿದವು ತಂದೆ ಸತ್ತಿದ್ದಾನೆ, ಯಾರೂ ದಿಕ್ಕಿಲ್ಲದಂತಿದ ಈ ಸಂಸಾರ ತನಗೆ ಇನ್ನೂ ರೋಗ ಗುಣವಾಗಿಲ್ಲ ಇಂಥಾ ಅವಸ್ಥೆ ಯಲ್ಲಿದ್ದರೂ ನೋಡಿ ನೋಡಿ ಹೀಗೆ ಕರೆಯುತ್ತಿದ್ದ ಗಂಡನ ಮೇಲೆ ಸಿಟ್ಟು ಬಂತು. ಆದರೂ ಸಮಾಧಾನದಿಂದಲೇ ಲಿಂಗಮ್ಮ ಹೇಳಿದಳು "ನಿಮಗೆ ಸ್ವಲ್ಪನೂ ತಿಳಿಯೋದಿಲ್ಲವೇ ನನ್ನ ಹೆತ್ತು ಹೊತ್ತು ಸಾಕಿದ ತಂದೆ ಸತ್ತಿದ್ದಾನ, ಮನೆ ಜನ ಅನ್ನನೀರು ತೊರೆದು ಗೋಳಿಡುತ್ತಿರುವಾಗ ಬಪ್ಪ, ಬಾ ಎಂದರೆ ಹೇಗೆ? ಇಲ್ಲಿ ತಿಥಿ, ಅದು ಇದು ಮಾಡಬಾರದೆ? ನನಗೂ ಇನ್ನೂ ಮೈಗೆ ಗುಣವಾಗಿಲ್ಲ" ಎಂದು ಕಣ್ಣೀರು ತಂದು ಕೊಂಡಳು, ಹೆಂಡತಿಯ ವೇದನೆ ನಾಗಯ್ಯನ ಹೃದಯವನ್ನು ಮುಟ್ಟಿತು ಕನಿಕರ ಮನಸ್ಸಿನಲ್ಲಿ ಹುಟ್ಟಿತು ನಿಜವಾಗಿಯೂ ತನ್ನ ಹೆಂಡತಿ ಅಂಥ ಸ್ಥಿತಿಯಲ್ಲಿದ್ದಾಳೆಂದು ಅವನಿಗೆ ಅನ್ನಿಸಿತು. ನಾನು ಬಾಯಿಬಿಟ್ಟಿದ್ದು ಬಣ್ಣಗೇಡಾಯಿತೆಂದು ನಾಗಯ್ಯ ಅರಿತು, ನಿನ್ನಿಷ್ಟ ಬಂದಂತೆ ಮಾಡು. ನಿನ್ನ ಜೀವದ ಕಡೇನೂ ನೋಡಿಕೊ ಎಲ್ಲಿಯಾದರೂ ಒಳ್ಳೆಯ ಪಂಡಿ ತರಿಂದ ಔಷಧಿ ತಕೊ" ಎಂದು ಹೇಳಿ ಊರಿಗೆ ಹೊರಟನು. ಮುತ್ತಣ್ಣ ಕರಿಯಣ್ಣನವರ ಮತ್ತು ತಿಮ್ಮಕ್ಕ ಇವರನ್ನು ಕುರಿತು "ಹುಟ್ಟಿದ ಮೇಲೆ ಪ್ರತಿ ಜೀವಾನೂ ಸಾಯ್ಬೇಕು ಸತ್ತಾಗ ಅಪಾರ ದುಃಖ ಮಾಡಬಾರದು ಸತ್ತವರು ಸ್ವರ್ಗಕ್ಕೆ ಹೋಗೊ ದಾರಿಯಾಗೆ ನಮ್ಮ ಕಣ್ಣೀರು ಹೊಳೆ ಯಾಗಿ ಅಡ್ಡ ಬಂದೀತಂತೆ ದೊಡ್ಡವರೇ ಹೀಗೆ ಗೋಳಾಡಿದರೆ ಇನ್ನು ಮಕ್ಕಳು ಕೇಳಬೇಕೆ ಅವರ ಕತೆ ಮುಗಿಯಿತು ಇನ್ನು ಕೆಪ್ಪನೆ ಇರಿ

ತಾಯಿ ತಿಥಿಗೆ ಸಾಮಾನು ಸರಂಜಾಮು ಜೋಡಿಸಿಕೊಳ್ಳಿ"ಎಂದು ಸಮಾಧಾನ ಪಡಿಸಿದ. ಬಸಮ್ಮನೂ ಅದೇ ಪಲ್ಲವಿಯನ್ನು ಹಾಡಿದಳು. ಅನಂತರ ನವಲೂರಿಗೆ ಮುತ್ತಣ್ಣ, ಬಸಮ್ಮ ಮತ್ತು ನಾಗಯ್ಯ ಮೂವರೂ ಹೊರಟರು. ಹೋಗುವ ದಾರಿಯಲ್ಲಿ ಬಸಮ್ಮ ಮಗನನ್ನು ಕುರಿತು " ಏನೋ ನಾಗಪ್ಪ, ನಿನ್ನ ಹೆಂಡಿರು ರೋಗಾನ ಇನ್ನೂ ವಾಸಿ ಮಾಡಿಕೋಲಿಲ್ಲವಲ್ಲ. ಹೀಗಾದರೆ ಸಂಸಾರ ಹೆಂಗೆ ನಡಿಯೋದು? ಇಲ್ಲಿಗೆ ಕರೆ ತರುವಾ ಅಂದರೆ ಆ ರೋಗದ ಚರ್ಯೆನೇ ಕಾಣರು ಯಾವ ಪಂಡಿತರೂ ಕರೆತಂದಿಯಾ, ನಾವು ಅವಳ ಚಾಕರಿ ಮಾಡೋಕೆ ನಿಂತುಕೋ ಬೇಕು. ಪ್ರಾಯದ ಹುಡುಗಿ ಹೆಂಗಿರಬೇಕು! ಎಲ್ಲೋ ಗೂಬೆ ರೋಗದ್ದು ಕಣೋ. ಎಲ್ಲಾರ ಸೊಸೆಯರ ನೋಡಪ್ಪಾ; ಬುಗರಿ ಆಡಿದಂಗೆ ಕೆಲಸಮಾಡ್ಕೊಂಡು ಗಂಡಂದಿರ ಜೊತೇಲಿ ನೆಗ್ತಾ ನುಡಿತ ಸಂಸಾರ ನೀಸಿಕೊಂಡು ಹೋಗುತ್ತಾರೆ. ನಮ್ಮ ಹಣೆ ಬರಹ ನೋಡು, ನಾಯಿ ಸಮುದ್ರಕ್ಕೆ ಹೋದರೂ ನೆಕ್ಕನೀರಂತೆ. ನಿಮ್ಮ ಮಾವ ಹಣವಂತ, ಏನೋ ಅಳಿಯನಿಗೂ ಮಗಳಿಗೆ ಹೊರಿಸುತ್ತಾನೆ ಅಂತ ನಿಮ್ಮಪ್ಪಾರು ಮಾಡಿದರು ಅವರದೇನು ತಪ್ಪು? ಏನೋ ಮಗ ಬದುಕಲಿ ಅಂತ ಒಪ್ಪಿಕೊಂಡರು ನಿನ್ನ ಮಾವ ಕಂತೆ ಬಿನಾ[illegible] ಆ ಮನೇಲಿ ಅಳಿಯ [illegible] ಅಂತ ಗುಡಗುಡನ [illegible] ಕಣ್ಣಿಗ [illegible] ಅಡಿಗೆ ಮಾಡಿ ನಿನಗೆ [illegible]ಡಿಸುತ್ತಾರೆಯೆ? [illegible] ಇಲ್ಲ [illegible] ಮಕ್ಕಳು ಮರಿಯಾದರೂ ಆಗಿದ್ದಾವೆಯೆ? [illegible] ಇಲ್ಲ ಇ[illegible] ಎಂದು ನಮ್ಮ ಮನೆ ಏನಾದರೂ 'ಬಲ ಬಲ' ಅಂತ ಉಕ್ಕಿತೆ? ನಿನ್ನ ಹೆಂಡಿರಿಗೆ ಸದಾ ಸೀಮೆಗಿಲ್ಲದ ರೋಗ. ಆ [illegible] ತರಹ ನೋಡಿದರೆ ನನಗೇನೋ ಅನುಮಾನ ಕಣೋ. ಅದೇ [illegible] ರೋಗಾನೆ?" ಎಂದು ಒಂದೇ ಒಂದು ವಿಷಬೀಜವನ್ನು ಮಗನ ತಲೆಗೆ ನಟ್ಟಳು. ತಾಯಿ ಹೇಳುತ್ತಿದ್ದ ಮಾತುಗಳೊಂದೊಂದೂ ಸತ್ಯಾಂಶದಿಂದಕೂಡಿರುವಂತೆ ನಾಗಯ್ಯನಿಗೆಹೊಳೆಯಿತು. ಹೆಂಡತಿಯ ವರ್ತನೆ ಹಿಂದೆಯೇ ಅವನಿಗೆ ಸಂಶಯವನ್ನು ತಂದಿತ್ತು. ಈಗ ತಾಯಿಯ ಮಾತುಗಳಿಂದ ಮನದಲ್ಲಿ ಅಡಗಿದ್ದ ವಿಷಜ್ವಾಲೆ ಮೇಲೆದ್ದಿತು ಹೆಂಡತಿಯ ಮೇಲೆ ಅಷ್ಟೋ ಇಷ್ಟೋ ಇದ್ದ ಪ್ರೇಮವೂ ಇಂಗಿ

ಹೋಯಿತು ಮನಸ್ಸು ತಾಯಿ ಆಡಿದ ಮಾತುಗಳನ್ನು ಮೆಲಕು ಹಾಕಿತು. ಹೆಂಡತಿಯ ನಡತೆಯಲ್ಲಿ ಸಂಶಯವನ್ನು ಹುಡುಕಾಡಿದ 'ಏನೋ ಇರ ಬೇಕು ಇಲ್ಲದಿದ್ದರೆ ಊರು ಬಿಟ್ಟು ಹೊರಡದೇನೆ ಇರುತ್ತಿದ್ದಳೆ? ಸದಾ ಖಾಯಿಲೆ, ಖಾಯಿಲೆ ಅಂತಲೇ ಇರುತ್ತಾಳೆ. ಇದಕ್ಕೇನೆ ನಮ್ಮೂರಲ್ಲೂ ಸದಾ ಮುಖ ಊದಿಸಿಕೊಂಡಿದ್ದಳು, ಮಾತಿಲ್ಲ ಕತೆಯಿಲ್ಲ ಓ ಓ ಈಗ ತಿಳೀತು' ಎಂದು ಮನಸ್ಸಿನಲ್ಲಿ ವಿಷದ ಅಲೆಗಳೆದ್ದವು ಹೆಂಡತಿಯಮೇಲೆ. ಕೋಪವನ್ನು ಮನಸ್ಸಿನಲ್ಲಿ ಬೀರುತ್ತಲೇ ಇದ್ದ. ಊರಿನಲ್ಲೇ ತಿಳಿದಿದ್ದರೆ ಏನು ಗತಿ ಮಾಡ್ತಿದ್ದೆ ಎಂದು ತನಗೆ ತಾನೆ ನೊರನೊರನೆ ಹಲ್ಲುಕಡಿದ. ಲಿಂಗಮ್ಮನ ದೇಹವನ್ನು ನೋಡಿದ್ದ ಅವನ ಕಣ್ಣುಗಳಿಗೆ ಸತ್ಯಾಂಶವು ಗೋಚರಿಸಿತ್ತು. ತಾಯಿ ಆಡಿದ ಮಾತಿನಿಂದ ಮನಸ್ಸು ಕಲಕಿಹೋಗಿ ಅಶ್ಲೀಲದನಡೆಯನ್ನು ಹೆಂಡತಿಯಲ್ಲಿ ಕಂಡಂತೆ ಮನಕ್ಕೆ ಭ್ರಮೆಯಾಯಿತು. ಬಸಮ್ಮ ಆಡಿದ ಮಾತನ್ನು ಮುಂದೆ ಹೋಗುತ್ತಿದ್ದ ಮುತ್ತಣ್ಣನೂ ಕೇಳಿಸಿಕೊಂಡ. ಮಗನಿಗೆ ಎಂಥಾ ಬುದ್ದಿ ಹೇಳುತ್ತಿದ್ದಾಳೆಂದು—

"ನಿನ್ನ ಕುನೇಕ ಬಿಟ್ಟರೆ ಇಲ್ಲಾಕಣೆ. ಇಹೊತ್ತುತಾನೆ ಹೊನ್ನಪ್ಪನ ಸಮಾಧಿಯಾಯ್ತು. ಈಗಲೆ ಅವರ ಮನೆ ವಿಚಾರ ಮಾತಾಡೋದು? ಲಿಂಗಮ್ಮ ಮದುವೆ ಸೋಬನ ಆದಾಗ ಹೇಗಿದ್ದಳು! ನೋಡೋಕೆ ಎರಡು ಕಣ್ಣು ಸಾಲುತಿರಲಿಲ್ಲ ಆಗ ರೋಗ ಹಿಡಿದಿತ್ತೆ? ಮುಖದಲ್ಲಿ ರಕ್ತ ತೊಟ್ಟಿಕ್ಕುತ್ತಿತ್ತು. ಮನುಷ್ಯ ಅಂದರೆ ಖಾಯಿಲೆ ಕಸಾಲೆ, ಕಷ್ಟಸುಖ, ಬಾರ್ದೆ ಇರುತ್ತದೆಯೆ? ಅವರಪ್ಪ ಏನು ಹೊರಿಸಬೇಕು? ದೇವರು ಕಣ್ಣು ಬಿಟ್ಟರೆ ನಮಗೇನು ಕಡಿಮೆಯಾದುದು? ನಾಗಯ್ಯ ಗಟ್ಟಿಮುಟ್ಟಿಗವನೆ. ಅವನ ಜೀವನಕ್ಕೇನೂ ತೊಂದರೆ ಇಲ್ಲ ಇನ್ನೂ ಐದಾರು ತಿಂಗಳು ಲಿಂಗಮ್ಮ ಅಲ್ಲೇ ಇರಲೇಳು. ಹ್ಯಾಗೂ ನಮ್ಮ ರಾಮಣ್ಣ ಕೆಲಸ ಮಾಡಿಕೊಂಡು ಹೋಗುತ್ತಾನೆ ಇವನ ಜೊತೇಲಿ.'

ನಾಗಯ್ಯ ಮಧ್ಯೆ ಬಾಯಿ ಹಾಕಿ "ಏನಪ್ಪ ನೀನು ಹೇಳೋದು! ಸುಮಾರು ನಾಲ್ಕೈದು ತಿಂಗಳಿಂದಾನೂ ಖಾಯಿಲೆ ಖಾಯಿಲೆ ಅಂತ ಅಪ್ಪನ ಮನೇಲಿ ಇದ್ದರೆ ಹೇಗಪ್ಪ? ರಾಮು ಕಿರಿ ಮಗ ಅಂತ ಪ್ರೀತಿಯಿಂದ ಸಾಕಿದ್ದೀರಿ ಈಗ ಅವನು ಮೈ ಬಗ್ಗಿಸಿ ಕೆಲಸಮಾಡ್ತಾನೆಯೆ? ಅಮನೆ

ಹೆಣ್ಣು ತಂದು ಸುಖವಿಲ್ಲಪ್ಪ. ನೀನು ಏನೇ ಹೇಳು, ಅವ್ವ ಹೇಳೋದೇ ನ್ಯಾಯ" ಎಂದು ತಾಯಿಯ ಮಾತಿಗೆ ಮಣಿದು ಆಕೆಯ ಮಾತಿಗೆ ಇಂಬುಗೊಟ್ಟು ಮಾತನಾಡಿದ. ಯಾಕೋ ಸಂಸಾರ ಕಡುತ್ತದೆಂದು ಮುತ್ತಣ್ಣನಿಗೆ ಅನ್ನಿಸಿತು. ಹೆಂಡತಿಯ ಮೇಲೆ ಸಿಟ್ಟು ಬಂತು. "ಹುಡುಗರಿಗೆ ಈ ತರಹ ಬುದ್ಧಿ ಹೇಳೋದು ಎಲ್ಲಾದರೂ ಉಂಟೇನೆ?" ಎಂದು ಹಲ್ಲು ಕಡಿದ "ನಿನ್ನ ಹಿರಿ ಮಗಳು ಗಂಗವ್ವ ಎಷ್ಟು ತಿಂಗಳು ನನ್ನ ಮನೆಯಲ್ಲಿ ಹೊಟ್ಟೆ ನೋವು, ಹೊಟ್ಟೆ ನೋವು ಅಂತ ಇರಲಿಲ್ಲ?" ಎಂದು ಹೆಂಡತಿಗೆ ಕೋಪದ ದನಿಯಲ್ಲಿ ಹೇಳಿ, ಮಗನ ಕಡೆ ತಿರುಗಿ "ಏನೋ, ನಿಮ್ಮಕ್ಕ ಗಂಗಮ್ಮ ನಮ್ಮ ಮನೇಲಿ ಒಂದು ವರ್ಷ ನಾಲ್ಕು ತಿಂಗಳಿದ್ದಳು ಕಣೋ, ಖಾಯಿಲೆ ಬಂದು ಹೆಣ್ಣು ಮಕ್ಕಳಿಗೆ ಕಷ್ಟ ಬಂದರೆ ತಂದೆ ಮನೇಲಿರದೆ ಮತ್ತೆಲ್ಲಿರಬೇಕು? ನಮ್ಮ ಮಕ್ಕಳ ಹಾಗೇನೆ ಕಂಡವರ ಮಕ್ಕಳನ್ನು ಕಾಣಬೇಕು ಇವಳ ಮಾತು ಕೇಳಿದರೆ ನೀನು ಉದ್ಧಾರ ಆಗೋಲ್ಲ ತಿಳಿತೋ. ಈ ದಾರಿಯಲ್ಲಿ ಏನು ಹೇಳ್ದ ನಮ್ಮಪ್ಪ ಅಂತ ತಿಳಕೊ" ಎಂದು ಕೋಪವನ್ನು ಕಾರುತ್ತಿದ್ದ ಕಣ್ಣುಗಳನ್ನು ಬಿಡುತ್ತಾ ಹೇಳಿದ ಅಷ್ಟರಲ್ಲಿ ಮೂವರೂ ಮನೆಯನ್ನು ತಲುಪಿದ್ದರು

ಬಸಮ್ಮ ಕೆಲಸಕಾರ್ಯಗಳನ್ನು ಮಾಡುವಾಗಲೆಲ್ಲಾ 'ಸೊಸೆ ತಂದು ಏನು ಸುಖ ಬಂತು ನನಗೆ? ಇದೆಲ್ಲಾ ನಮ್ಮ ಹಣೆ ಬರಹ' ಎಂದು ಲೊಟಗುಟ್ಟುತ್ತಲೆ ಇದ್ದಳು ತನ್ನ ಮಗಳು ಗಂಗಮ್ಮನ ನಾದಿನಿಯ ಕಡೆ ಮನಸ್ಸು ಹರಿಯಿತು. ಆ ಹುಡುಗಿ ತನ್ನ ಮನೆ ಕೆಲಸಕ್ಕೆ ಲಾಯಕಾಗಿದ್ದಾಳೆ ಅಳಿಯನಿಗೆ ಒಂದು ಮಾತು ಹೇಳಿ ಬಿಟ್ಟು ನಾಗಯ್ಯನಿಗೆ ಒಂದು ದಿನದಲ್ಲೇ ಲಗ್ನ ಮಾಡಿಬಿಟ್ಟರೆ ತೀರಿಹೋಯ್ತು ಅವಳಪ್ಪನ ಸೊತ್ತು ಬೇಕಾದಹಾಗಿದೆ ಆ ಹುಡುಗಿಗೆ ಹೇಗೂ ಸ್ವಲ್ಪ ಭಾಗ ಸಿಕ್ಕುತ್ತದೆ—ಎಂದು ತನ್ನಲ್ಲೆ ಅಳೆದು ಸುರಿದು ತೀರ್ಮಾನಿಸಿ ಕೊಂಡಳು ಒಂದು ದಿನ ಮುತ್ತಣ್ಣ ಕಬ್ಬಿನ ತೋಟಕ್ಕೆ ನೀರು ಹಾಯಿಸಲು ಕಿರಿಯ ಮಗ ರಾಮುನನ್ನು ಕರೆದುಕೊಂಡು ಹೋಗಿದ್ದ ಮನೆಯಲ್ಲಿ ಬಸಮ್ಮ ಮತ್ತು ನಾಗಯ್ಯ ಇಬ್ಬರೇ ಉಳಿದರು. ಇದೇ ಸಮಯದಲ್ಲಿ ಮಗನ ಮನಸ್ಸನ್ನು ಬೇರೆ ಮದುವೆ ಮಾಡಿಕೊಳ್ಳುವಂತೆ ಒಲಿಸ

ಬೇಕೆಂದು ಆಕೆ ಯೋಚಿಸಿದಳು. ಕೊಟ್ಟಿಗೆಯಲ್ಲಿ ದನಕರುಗಳಿಗೆಲ್ಲಾ ಹುಲ್ಲು ಹಾಕಿ ತೌಡನ್ನು ಕಲಸಿ ಕುಡಿಯಿಸುತ್ತಿದ್ದ ಮಗನನ್ನು ಕೂಗಿದಳು. ಮನೆಯ ಒಳಕ್ಕೆ ಬಂದ ಮಗನಿಗೆ "ಒಂದಷ್ಟು ರೊಟ್ಟಿ ಮೊಸರು ಇದೆ ತಕ್ಕೊಳ್ಳಪ್ಪಾ. ಈ ಮನೆಗೆ ದಿಕ್ಕೆ ಇಲ್ಲ. ನಾನು ತಾನೆ ಇನ್ನೆಷ್ಟು ದಿನ ಬಾಳಿಯೇನು? ನೀವು ಈ ಮನೆಯಾಗೆ ಬಾಳಿ ಬದುಕುವರು. ಏನಾದರು ಒಂದು ದಾರಿ ಹುಡುಕ ಬಾರದೆ?" ಎಂದು ಮೃದುವಾಗಿ ಹೇಳುತ್ತಾ ನಾಗಯ್ಯನಿಗೆ ಉಣ್ಣಲು ಬಡಿಸಿದಳು. ರೊಟ್ಟಿಯ ಚೂರನ್ನು ಮೊಸರಿನಲ್ಲಿ ಅದ್ದಿ ಅಗಿಯುತ್ತಾ ನಾಗಯ್ಯ ಹೇಳಿದ—

"ನಾನೇನವ್ವ ಮಾಡಲಿ? ಎಲ್ಲಾ ನೀವು ತಂದು ಗಂಟು ಹಾಕಿದ್ದೆ. ಅವಳಪ್ಪನ ಜಿಪುಣತನ ಈ ಸೀಮೆಗೆಲ್ಲಾ ಗೊತ್ತಿತ್ತು. ಅವನ ಬೇಳ್ಳೆ ಮಾತಿಗೆ ಮರುಗಿ ಅಪ್ಪ ನೀನು ಆ ರೋಗದ ಹುಡುಗೀನ ನನ್ನ ಕತ್ತಿಗೆ ಕಟ್ಟಿದಿರಿ. ಈಗೇನು ನಾನು ಮಾಡೋದು, ಎಲ್ಲಾ ಮುಗಿದು ಹೋದ ಮೇಲೆ? ಇದೆಲ್ಲಾ ನನ್ನ ಹಣೆ ಬರಹ".

"ಏನು ಮಾಡಲವ್ವಾ. ಮಾಣಿಕ ಅಂತ ಕೈ ಹಾಕಿದಿವಿ, ಮದ್ದಿನ ಪುಷ್ಟಿ [illegible] ಎಷ್ಟು ಜನ ಲೋಕದಲ್ಲಿ ಇಲ್ಲ, ಇನ್ನೊಂದು ಹೆಣ್ಣು ಮಾಡಿಕೊಂಡು ಸುಖವಾಗಿ [illegible]ವರು? ಆದರ ಹಣೇಲಿ ಮಕ್ಕಳ ಫಲ ಬರದಿಲ್ಲ [illegible] ಮಾಸಿ [illegible]ವ ಮೇಲೆ ಅವಳು ಬಂದು ಇರಲೇಳು" ಎಂದು ಮಲ್ಲನ ಎರಡನೆ ಮದುವೆಯ ವಿಚಾರವನ್ನೆತ್ತಿ ನಾಗಯ್ಯನನ್ನು ತನ್ನ ಮಾತಿಗೆ ಬಾಗುವಂತೆ ಎಂದೂ ಇಲ್ಲದ ನಯದಿಂದ ಹೇಳಿದಳು. ಲಿಂಗವ್ವನ ವರ್ತನೆಯಲ್ಲಿ ಮೊದಲೇ ಮನಸ್ಸು ಕೆಟ್ಟಿದ್ದ ನಾಗಯ್ಯನಿಗೆ ತಾಯಿಯ ಮಾತುಗಳು ಮೆಚ್ಚಿಗೆಯಾದವು.

"ಈಗ ಎಲ್ಲವ್ವ ಹೆಣ್ಣು ಇದೆ? ಎರಡನೆ ಮದುವೆ, ಹೆಂಡತಿ ಉಳ್ಳಾವನೆಂದರೆ ಯಾರು ಹೆಣ್ಣು ಕೊಡುತ್ತಾರೆ?" ಎಂದು ರೊಟ್ಟಿಯನ್ನು ಹಲ್ಲುಗಳು ಜಗಿಯುತ್ತಿದ್ದಂತೆ ಮಾತುಗಳನ್ನು ಅಗಿದು ಅಗಿದು ಮೆಲ್ಲನೆ ಹೊರಗೆಡಹಿದ. ಮಗ ಬೇರೆ ಮದುವೆಗೆ ಒಪ್ಪುವನೋ ಇಲ್ಲವೊ ಎಂದು ಅನುಮಾನ ಇತ್ತು ಬಸಮ್ಮನ ಮನಸ್ಸಿನಲ್ಲಿ. ಎರಡನೆ ಮದುವೆಗೆ ತಾನೇ ಮುಂದಾಗಿ ಮಾತು ಬೆಳೆಸುತ್ತಿರುವ ಮಗನನ್ನು ನೋಡಿ ಆಕೆ ಇವ

ನನ್ನು ತನ್ನ ದಾರಿಗೆ ತರಬಹುದೆಂದು ಅರಿತಳು.

"ಹೆಣ್ಣಿಗೆ ಬೇರೆಲ್ಲಿ ಹೋಗೋದು? ನಿಮ್ಮಕ್ಕನ ನಾದಿನಿ ಇದ್ದಾಳಲ್ಲ, ನಂಜಮ್ಮ ಹುಡುಗಿಯು ಕಣ್ಣು ಮೂಗು ನೇರಾಗಿದೆ. ಅವರಪ್ಪನಿಗೆ ನಿಮ್ಮ ಭಾವ, ಈ ಹುಡುಗಿ ಇಬ್ಬರೇ ಮಕ್ಕಳು ಅಪ್ಪ ಸಾಯುವಾಗ ಮಗನ ಕೈಯಲ್ಲಿ ಬಾಷೆ ಮಾಡಿಸಿದನಂತೆ 'ನಂಜಮ್ಮನಿಗೆ ಅರ್ಧಭಾಗ ಆಸ್ತಿ ಕೊಡಬೇಕು ಅವಳನ್ನು ಗಂಡು ಮಗ ಅಂತ ಸಾಕಿದೇನೆ' ಅಂತ ಅವಳನ್ನು ತಂದುಕೊಂಡರೆ ನಮ್ಮ ಮನೆ ಕೆಲಸವ ಯಾರನ್ನೂ ಕೋರದೆ ಒಬ್ಬಳೇ ನೀಸಿಕೊಂಡು ಹೋಗ್ತಾಳೆ. ಮದುವೆ ಸೋಬನ ಎಲ್ಲಾ ಒಂದು ವಾರದಲ್ಲೆ ಮಾಡಿಕೊಂಡು ಕರತಂದರೆ ತೀರಿತಪ್ಪ ಅವರು ಕಾಡಲ್ಲ ಕಡೆಯುಲ್ಲ ಅದೂ ನಿಮ್ಮಕ್ಕನ ಮನೆ' ಎಂದು ಮಗನ ಆಸೆಯನ್ನು ಗರಿಗೆದರಿಸಿ ಬಿಟ್ಟಳು. ತಾಯಿಯ ಮಾತು ಬಹು ಹಿತವಾಗಿ ಕಂಡಿತು ನಾಗಯ್ಯನಿಗೆ. ನಂಜಮ್ಮನನ್ನು ಮದುವೆಯಾಗುವ ಸಂತೋಷದ ಕನಸು ಕಾಣುತ್ತಾ ನಾಗಯ್ಯ ಹೇಳಿದ—

"ಅದಲ್ಲಾ ಸರಿ, ಅಪ್ಪ ಒಪ್ಪಬೇಕಲ್ಲಾ! ಮನೆ ಯಜಮಾನನೇ ಮನಸ್ಸು ಕೊಡದೆ ಹೋದರೆ ಕಾರ್ಯ ನಡೆದೀತೆ?" "ಒಪ್ಪದೇ ಏನು ಮಾಡ್ತಾರೆ? ನೀನು ಹೇಳಿದ ಕೂಡ್ಲೆ 'ಹೋಗೋ ಮಾಡಿಕೋ ಬೇರೆ ಹೆಣ್ಣಾ' ಅನ್ನಬೇಕೆ? ಬೇರೆ ಹೆಣ್ಣು ತರಬೇಕಾದರೆ ಸ್ವಲ್ಪ ಹಿಂದೆ ಮುಂದೆ ಯೋಚನೆ ಮಾಡೋದು ಉಂಟು ದೊಡ್ಡವರು. ತೋಟದಿಂದ ಅವರು ಬಂದಮೇಲೆ ನಂಜಮ್ಮನನ್ನು ತಂದುಕೊಳ್ಳುವ ವಿಚಾರಾನ ಹೇಳೀ ಬಿಡು. ಎಷ್ಟು ದಿನ ಮುಚ್ಚಿಕೊಂಡು ಮಾತಾಡೋದು"

"ಇಷ್ಟು ತರಾತುರಿಯಲ್ಲಿ ಹೇಳಿದರೆ ಅಪ್ಪ ಒಪ್ಪುತಾನೇನವ್ವ? ಇನ್ನಷ್ಟು ದಿನ ಬಿಟ್ಟು ಯಾವುದಾದರೂ ನೆವಮಾಡಿಕೊಂಡು ನೀನೇ ಹೇಳಬೇಕವ್ವ"

"ಅದೂ ದಿಟಾನೆ ಹಾಗಾದರೆ ನಮ್ಮ ಹೊಲವೆಲ್ಲಾ ಹಣ್ಣಾಗಿ ತೆನೆಯಾಗುತ್ತಾ ಇದೆ ಇನ್ನೇನು ಕೊಯ್ಲಿಗೆ ಬಂದಿದೆ ಹ್ಯಾಗೂ ನಾನು ಒಬ್ಬಂಟಿಗಳು ಕೆಲಸಮಾಡಲಿಕ್ಕೆ ಒಂದು ಹೆಣ್ಣಾಳು ಬೇಕೇಬೇಕು. ನಿಮ್ಮಕ್ಕನ ಊರಿಗೆ ಹೋಗಿ ನಂಜಮ್ಮನ ಕರೆದುಕೊಂಡೇ ಬರ್ತಿನಿ ಬಿಡು.

ಹುಡಗಿ ವನೆಗೆ ಬಂದಮೇಲೆ ವಿಚಾರನ ಅವರ ಕಿವಿಮೇಲೆ ಹಾಕಿದ ರಾಯಿತು."

ಎಂದ ಹೇಳಿ ತನ್ನ ಕಲಸದಲ್ಲಿ ನಿರತಳಾದಳು. ನಾಗಯ್ಯ ಉ-ಡ. ಗೂ ವುಗಳನ್ನ ಅಟ್ಟಿಕೊಂಡು ಹೊಲದ ಕಡೆ ಹೊರಟ ಅಕ್ಕ ಪಕ್ಕದ ಹೊಲಗದ್ದ ಗಳಲ್ಲಿ ಕಲಸಮಾಡುತ್ತಿದ್ದ ಇವನ ಜೊತೆಗಾರರು ಇವ ನನ್ನ ನೂಡಿ "ಏನು ನಾಗಯ್ಯ! ಪಾಪ, ನಿಮ್ಮ ಮಾವ ಸತ್ತನಂತೆ ಇನ್ನು ಆ ಬದ ಕು ಉಳಿಸಿಕೊಂಡು ಹೋಗೋಕೆ ನೀನೆ ನೆರವಾಗಬೇಕು" ಎಂದು ಮರುಕಗೊಂಡು ಮಾತನಾಡಿದರು ನಾಗಯ್ಯ "ಏನೋ ಅಪ್ಪಾ, ಇದ್ದಕ್ಕಿದ್ದಂಗೆ ಸತ್ತರು ಯಾರು ಏನು ಹೇಳಿದ್ರೂ ಹೊಟ್ಟೆಗೆ ಮದ್ದು ತಕ್ಕೊಳ್ಳಲೇ ಇಲ್ಲ ಸಣ್ಣ ಮಕ್ಕಳು ನನ್ಮತ್ತೆ ಇದ್ದಾರೆ, ಆ ಮುದುಕಿ ಇದ್ದಾರೆ, ಹ್ಯಾಗೋ ನಡೆಸಿಕೊಂಡು ಹೋಗ್ತಾರೆ ನಾನೇಕೆ ಮಾವನ ಕೂಳಿಗೆ ಹೋಗ್ಲಿ ?" ಎಂದು ಅವರು ಬಾಯಿ ಮುಚ್ಚಿಕೊಳ್ಳುವಂತೆ ಹೇಳಿ ಬಿಟ್ಟ

ನಾಗಯ್ಯನ ಮನಸ್ಸು ನಂಜಮ್ಮನ ರೂಪು ರೇಖೆಗಳನ್ನು ಚಿತ್ರಿಸಿ ಕೊಳ್ಳುವುದರಲ್ಲಿದೆ ಹೆಂಡತಿಯ ಮೇಲೆ ತಾತ್ಸಾರ ಹುಟ್ಟಿತು. ಲಿಂಗ ಮ್ಮನ ರೂಪು ತಾಯಿಯ ಬೋಧನೆಯಿಂದ ಹೆಂಡತಿಯ ನಡತೆಯನ್ನು ಸಂಶಯ ದೃಷ್ಟಿಯಿಂದ ನೋಡುತ್ತಿದ್ದ ಅವನ ಮನಸ್ಸಿಗೆ ಅಸಹ್ಯವನ್ನು ಗಳಿಗೆ ಗಳಿಗೆಗೂ ತರತೊಡಗಿತು ಸದಾ ಮುಖ ತಿರುವಿಕೊಂಡು ಇರುವ ಳನ್ನು ಕಟ್ಟಿಕೊಂಡು ತಾನು ಏನು ಮಾಡುವುದೆಂದು, ತನ್ನ ಮುಂದಿನ ಬಾಳೂ ಕಹಿಯೇ ಆಗುವುದೆಂದು, ಭಾವಿಸಿಕೊಂಡ. ನಂಜಮ್ಮನನ್ನು ಮದುವೆಗೆ ತಂದುಕೊಳ್ಳುವ ವಿಚಾರವನ್ನು ಮೆಲಕು ಹಾಕುವುದರಲ್ಲೇ ಅವನ ಮನಸ್ಸು ತಲ್ಲೀನವಾಯಿತು ಹೊತ್ತು ಮುಳುಗಿತು. ದನ ಕರು ಗಳನ್ನು ಹೊಡೆದುಕೊಂಡು, ಒಂದು ಹೊರೆ ಜೋಳದಕಡ್ಡಿಯನ್ನು ದನ ಗಳ ಮೇವಿಗಾಗಿ ಹೊತ್ತು ಮನೆಗೆ ಬಂದ ದನಕರುಗಳನ್ನೆಲ್ಲಾ ಕೊಟ್ಟಿ ಗೆಗೆ ಕಟ್ಟಿ ಅವುಗಳ ಮುಂದೆ ಅಷ್ಟು ಜೋಳದ ಕಡ್ಡಿಯನ್ನು ಹಾಕಿ ಮನೆ ಯೊಳಕ್ಕ ಹೋಗಿ "ಇನ್ನೂ ಅಪ್ಪ ಬರಲಿಲ್ಲವೇನವ್ವ?" ಎಂದ. "ಇನ್ನೂ ಬರಲಿಲ್ಲವೊ, ಆ ರಾಮನೂ ಬರಲಿಲ್ಲ. ಕತ್ತಲಾಯಿತು" ಎಂದಳು

ಬಸವ್ವ. ಅಷ್ಟರಲ್ಲಿ ಮುತ್ತಣ್ಣನ ಕಾಲಿನ ಸಪ್ಪಳ ಕೇಳಿಸಿತು. ಹೆಂಡತಿ ಹೇಳಿದ ಮಾತುಗಳು ಮುತ್ತಣ್ಣನ ಕಿವಿಯಮೇಲೆ ಬಿದ್ದವು. ಕೈ ಕಾಲು ಮುಖ ತೊಳೆದುಕೊಂಡು ಮನೆಯೊಳಕ್ಕೆ ಹೋಗಿ "ರಾಮನನ್ನ ಕಬ್ಬಿನ ಗದ್ದೇ ಹತ್ತಿರ ಇನ್ನೂ ಸ್ವಲ್ಪ ಹೊತ್ತು ಇದ್ದು ಬಾ ಎಂದು ಹೇಳಿಬಂದೆ" ಎಂದ ಮುತ್ತಣ್ಣನೂ ನಾಗಯ್ಯನೂ ಊಟ ಮುಗಿಸಿಕೊಂಡು ಹೊರಗೆ ಬಂದರು. ನಾಗಯ್ಯ ಎಲ್ಲೋ ಹೊರಗೆ ಹೋದ. ಮುತ್ತಣ್ಣ ಹೊರ ಜಗುಲಿಯ ಕಂಬವನ್ನು ಒರಗಿ ಕುಳಿತುಕೊಂಡ. ಮನಸ್ಸು ರಾಮನಗ ಕ್ಕ ಹಾರಿಹೋಯಿತು. ಹೊನ್ನಯ್ಯ ಬಾಳಿದ ಬಾಳಾಟವನ್ನು ನೆನೆ ಯಿತು. ಸಾಯುವ ಜನ್ಮಕ್ಕೆ ದೇವರು ಏನು ಆಸೆ ಕೊಟ್ಟಿದ್ದಾನೆಂದು ಕೊಂಡ ಹಾಗೆಯೇ ಲಿಂಗಮ್ಮನಕಡೆ ಮನಸ್ಸು ಹರಿಯಿತು. ಅರಿಯದ ಹುಡುಗಿಗೆ ಏನು ಗಂಡಾಂತರ ಬಂತು? ಏನಾಗುತ್ತದೆಯೋ ಕಾಣೆನಲ್ಲ. ದಿನೆ ದಿನೆ ಲಿಂಗಮ್ಮ ಮಂಕಾಗುತ್ತಿದ್ದಾಳಲ್ಲಾ ಅವಳೂ ಅವರಪ್ಪನ ದಾರಿ ಹಿಡಿದರೆ ಗತಿಯೇನು? ಎಂದು ಯೋಚಿಸುವಷ್ಟರಲ್ಲೇ ವೈ ಜಲ್ಲೆಂದಿತು ಛೀ, ಛೀ ರೋಗಬಂದವರೆಲ್ಲಾ ಸತ್ತಾರೆಯೇ? ಇಲ್ಲ, ಇಲ್ಲ ಎಂದು ಸಮಾಧಾನದ ಉತ್ತರ ಅವನ ಹೃದಯಾಂತರಾಳದಿಂದ ಬಂದಿತು ಅಷ್ಟರಲ್ಲಿ ಬಸವ್ವ ಊಟ ಮುಗಿಸಿಕೊಂಡು ಹರಳೆಣ್ಣೆಯ ಹಣತೆಯನ್ನು ಹೊತ್ತಿಸಿ ಹಿಡಿದುಕೊಂಡು ಹೊರಜಗುಲಿಯ ಗೂಡಿನ ಲ್ಲಿಟ್ಟು ಗಂಡನ ಕಡೆ ತಿರುಗಿ "ಕತ್ತಲೆ ಬಿಕೋ ಅಂತಾದೆ. ಮಾತಿಲ್ಲ ಕತೆ ಇಲ್ಲ ಸುಮ್ಮನೆ ಕುಳಿತಿದೀರಿ" ಎಂದಳು ಮುತ್ತಣ್ಣನ ಮನಸ್ಸು ಎಲ್ಲೆಲ್ಲೋ ಹರಿದಾಡುತ್ತಿದ್ದುದರಿಂದ ತೆಪ್ಪನಾಗಿಬಿಟ್ಟ, ಮಾತನಾಡಲಿಲ್ಲ ಬಸವ್ವ ಒಳಗೆ ಹೋಗಿ ಎಲೆ ಅಡಿಕೆಯನ್ನು ತಂದು ಗಂಡನ ಮುಂದಿರಿಸಿ ತಾನೊಂದು ಕಂಬವನ್ನು ಒರಗಿ ಕುಳಿತಳು ಮುತ್ತಣ್ಣನ ಕೈಗಳು ತಮ್ಮ ಷ್ಟಕ್ಕೆ ತಾವು ಎಲೆ ಅಡಿಕೆಯನ್ನು ಬಾಯಿಗೆ ಇಡುತ್ತಿದ್ದವು, ಮನಸ್ಸು ಲಿಂಗಮ್ಮನ ಭವಿಷ್ಯದ ಬಾಳನ್ನು ಕುರಿತು ಅಗಿಯುತ್ತಿತ್ತು, ನಾನಾ ಮುಖಗಳನ್ನು ಚಿತ್ರಿಸುತ್ತಿತ್ತು. ಮಾವ ಹೇಳಿದ ಮಾತಿಗೆ ಲಿಂಗಮ್ಮ ಎಂದೂ ಬದಲು ಜವಾಬು ಕೊಡದೆ ಆತ ಕಾಲಿನಿಂದ ತೋರಿದ ಕೆಲಸ ವನ್ನು ಅವಳು ತಲೆಯಲ್ಲಿ ಹೊತ್ತು ಮಾಡುತ್ತಿದ್ದುದರಿಂದ ಅವಳು ಅವನ

ಕರುಣೆಯ ತೊಟ್ಟಿಲಿನ ಕೂಸಾಗಿದ್ದಳು. ನಿಜಕ್ಕೂ ಆತ ಸೊಸೆಯನ್ನು ತನ್ನ ಮಕ್ಕಳಿಗಿಂತಲೂ ಒಂದು ಕೈ ಮೇಲಾಗಿ ಕಾಣುತ್ತಿದ್ದ ಇದ್ದಕ್ಕಿದ್ದ ಹಾಗೆಯೇ ಬಸಮ್ಮ "ಹೊಲ ಕೆಂಪಾಗಿದೆ. ದಿನ ಎರಡಲ್ಲಿ ಕೊಯ್ಯದೆ ಹೋದ್ರೆ ಕಡಿಗಿ ಹೊಯ್ತದೆ ಆಳುಗಳಿಗೆ ಹಿಟ್ಟು ಬೇಯಿಸಿ ಹೊಲದ ಹಕ್ಕಿರಕ್ಕೆ ಹೊರಬೇಕು, ಹುಡುಗಾಟನೆ? ನನ್ನಿಂದ ಆಗದ ಕೆಲಸ ಅದು. ಶಿವನಯ್ಯನ ದೊಡ್ಡಿಗೆ ಹೋಗಿ ನಂಜಮ್ಮನನ್ನಾದರೂ ಕರೆಕೊಂಡು ಬರ್ತೀನಿ ನನ್ನ ಕೈಲಿ ಕೆಲ್ಸ ನಾಗದು. ಗೂಚಿರೋಗದವಳು" ಎಂದು ಬಹು ವೃದುವಾಗಿ ಹೇಳಿದಳು

ಮುತ್ತಣ್ಣ 'ಹೊಲವೇನೋ ಕುಯ್ಲಿಗೆ ಬಂದಿದೆ ಈಗೇಕೆ ಅಲ್ಲಿಗೆ ಹೋಗಬೇಕು? ಅವರಿಗೂ ಕೆಲಸದ ಕಾಲ. ನಮ್ಮ ಕೆಲ್ಸ ಲಿಂಗಮ್ಮನ ಜೀವಕ್ಕಿಂತ ಹೆಚ್ಚೆ? ಸುದಾರಿಸಿಕೊಂಡು ಬರಲೇಳು'' ಎಂದು ಮೆಲ್ಲನೆ ಹೇಳಿದ ಅವನ ದನಿಯಲ್ಲಿ ಮಗಳ ಮನೆಗೆ ಹೋಗಿಬರಲಿ ಎಂಬ ಅರ್ಥ ಅಡಗಿದ್ದುದನ್ನು ಬಸಮ್ಮ ಗ್ರಹಿಸದೆ ಇರಲಿಲ್ಲ ''ನಾಳಿದ್ದು ಹೋಗಿ ಕರೆದು ತರ್ತೀನಿ ಒಂದು ತಿಂಗಳು ಇರಲಿ ಇಲ್ಲಿ ನಂಜಮ್ಮ'' ಎಂದಳು. ಮುತ್ತಣ್ಣ ''ಅವರು ಕಳಿಸುತ್ತಾರೋ ಏನೋ ಅನುಮಾನ" ಎಂದಷ್ಟೆ ಹೇಳಿ ದನಗಳ ಕೊಟ್ಟಿಗೆಕಡೆ ಎದ್ದು ಹೋದ

ಮಗಳ ಮನೆಗೆ ಹೋಗುವ ದಿನ ಬಸಮ್ಮ ಹೊತ್ತಿಗೆ ಮುಂಚೆ ಎದ್ದು, ಮಿಂದು ಮಡಿಯುಟ್ಟುಕೊಂಡು, ಎತ್ತುಗಳ ಬಾಯಿಗೆ ಜೋಳದ ಕಡ್ಡಿಯನ್ನು ತುರುಕುತ್ತಿದ್ದ ರಾಮುವನ್ನು ಕೂಗಿ "ಶಿವನಯ್ಯನ ದೊಡ್ಡಿಗೆ ಹೋಗುತ್ತೇನೆ. ನಿಮ್ಮಕ್ಕ ಕೈ ಬಾಯಿ ನೋಡ್ತಾಳೆ ದಾಸಪ್ಪನ ಅಂಗಡಿಗೆ ಹೋಗಿ ನಾಲ್ಕು ಅಚ್ಚು ಬೆಲ್ಲ ಒಂದು ಸೇಳು ಹುಚ್ಚೆಳ್ಳೆಣ್ಣೆ ತಾ ಹೋಗೊ, ಒಂದಷ್ಟು ಕಜ್ಜಾಯನಾದರೂ ಮಾಡಿಕೊಂಡು ಹೋಗುತ್ತೀನಿ" ಎಂದಳು ತಾಯಿಯ ಮಾತನ್ನು ಕೇಳಿದ ರಾಮು ಇನ್ನು ತನಗೆ ಅಡಿಗೆ ಕೆಲಸ ಕತ್ತಿಗೆ ಕಟ್ಟುತ್ತದೆಂದು ಅರಿತು "ಕೆಲಸದ ಕಾಲ, ಅಪ್ಪನೇ ಹೋಗಿ ಬರಲಿ, ನೀನು ಮನೇಲಿ ಇರವ್ವ" ಎಂದು ಹೇಳಿದ. ತಾನು ರಾಮುನಿಗೆ ವಿಚಾರವನ್ನು ಹೇಳಿದ್ದೆ ಹೆಡ್ಡತನ, ಅವನು ತಾನು ಮಾಡುವ ಕೆಲಸಕ್ಕೆಲ್ಲಾ ಅಡ್ಡಿ ಬರುತ್ತಾನೆಂದು ತಿಳಿದು "ಪಯಣ

ಹೋಗುವಾಗ ಅಡ್ಡಿ ಬರೋದೇನೊ ರಾಮು? ನಿನ್ನದು ಇದೇ ಬುದ್ಧಿಯಲ್ಲಾ. ಅಣ್ಣನನ್ನಾದರೂ ಕರೆಯೊ" ಎಂದಳು ರಾಮು ಬದಲು ಹೇಳದೆ, ತಮ್ಮ ಅವ್ವ ಮಗಳ ಮನೆ ಎಂದರೆ ಒಂದೇ ಕಾಲಿನಾಗೆ ಓಡುತ್ತಾಳೆಂದುಕೊಳ್ಳುತ್ತಾ, ಯಾರದೊ ಮನೆಯಲ್ಲಿಕುಳಿತಿದ್ದ ನಾಗಯ್ಯನನ್ನು ಕರೆದುಕೊಂಡು ಬಂದ ನಾಗಯ್ಯ "ಏನವ್ವ ಅದು ?" ಎಂದ.

"ದಾಸಪ್ಪನ ಅಂಗಡಿಗೆ ಹೋಗಿ ನಾಲ್ಕುಚ್ಚು ಬೆಲ್ಲ, ಒಂದು ಸೇರು ಹುಚ್ಚೆಳ್ಳೆಣ್ಣೆ ತಾ ಹೋಗಪ್ಪಾ ದೊಡ್ಡೀಗೆ ಬರೀ ಕೈಯಲ್ಲಿ ಹೋಗಲೇ ?" ಎಂದಳು ತಾಯಿ ಶೀಘ್ರವಾಗಿ ಶಿವನಯ್ಯನ ದೊಡ್ಡಿಗೆ ಹೋಗಿಬರಲೆಂಬ ಆಸೆ ನಾಗಯ್ಯನಿಗೆ ಮರುಮಾತನಾಡದೆ ದಾಸಪ್ಪನ ಅಂಗಡಿಗೆ ಹೋಗಿ ಸಾಮಾನುಗಳನ್ನು ತಂದು ತಾಯಿಗೆ ಕೊಟ್ಟು "ನಾನು ಕಬ್ಬಿನ ಗದ್ದಗೆ ನೀರು ಕಟ್ಟಲು ಹೋಗ್ತೆನವ್ವ. ಇಲ್ಲಿ ರಾಮು ಕೋಣೆ ಹೊಗಲಿಕ್ಕೆ ಸಿಡಿದು ಬೀಳುತ್ತಾನೆ ನಾಳೆ ಬಂದುಬಿಡವ್ವ ಆ ಹುಡುಗೀನು ಕರೆದುಕೊಂಡು" ಎಂದು ಹೇಳಿ ಗುದ್ದಲಿಯನ್ನು ಹಿಡಿದು ಕಬ್ಬಿನ ಗದ್ದೆಯಕಡೆ ಹೊರಟ ಹೋಗುವ ದಾರಿಯಲ್ಲೆಲ್ಲಾ ಸಂಜವ್ವ ಎಷ್ಟು ಹೊತ್ತಿಗೆ ಬಂದಾಳು ? ಯಾವಾಗ ಅವಳ ಮುಖವನ್ನು ಕಂಡೇನು ? ಈಗ ಹುಡುಗಿ ಚೆನ್ನಾಗಿ ಬೆಳೆದಿರಬೇಕು, ಹೇಗಾದರೂ ಮಾಡಿ ಭಾವನನ್ನೂ ಅಪ್ಪನನ್ನೂ ಒಪ್ಪಿಸಿ ಮದುವೆ ಮಾಡಿಕೋ ಬೇಕು—ಎಂದು ಯೋಚಿಸುತ್ತಾ ಹೋಗುತ್ತಿದ್ದಾನೆ ಕಬ್ಬಿನ ಗದ್ದೆ ಹತ್ತಿರ ಬಂದಾಗ, ಮುಂಜಾನೆಯೇ ಬಂದು ಕಬ್ಬು ಸುತ್ತುವುದರಲ್ಲಿ ತೊಡಗಿದ್ದ ತನ್ನ ಅಪ್ಪ 'ಯಾಕೊ, ಇಷ್ಟು ಹೊತ್ತು ಬಿಟ್ಟುಬಂದೆ ?" ಎಂದಾಗಲೇ ನಾಗಯ್ಯನಿಗೆ ಎಚ್ಚರವಾದಂತಾದುದು

"ಅವ್ವ ದೊಡ್ಡಿಗೆ ಹೊರಟಿದ್ದಾಳೆ. ಸಾಮಾನು ತಂದುಕೊಡುತ್ತಿದ್ದೆ ಒಂದಷ್ಟು ಕಜ್ಜಾಯ ಮಾಡಿಕೊಂಡು ಹೋಗುತ್ತಾಳಂತೆ" ಎಂದ.

"ಸರಿ, ಅವಳು ಮಗಳ ಮನೆಗೆ ಹೋಗ್ತೀನಿ ಎಂದರೆ ತೀರಿತು. ಬ್ರಹ್ಮ ಬಂದರೂ, ಅವಳು ನಿಲ್ಲುವ ಹಾಗಿಲ್ಲ ನೀನು ಕೆಳಗಡೆಯ ಪಾತಿಗೆ ನೀರು ಬಿಡಪ್ಪ".

ತಂದೆ ಮಕ್ಕಳಿಬ್ಬರೂ ಕೆಲಸದಲ್ಲಿ ತೊಡಗಿದರು.

ಬಸವಕ್ಕ ಒಂದಷ್ಟು ಅಕ್ಕಿ ರುಬ್ಬಿಕೊಂಡು ಬೆಲ್ಲ ಬೆರಸಿ ಹುಚ್ಚೆಳ್ಳು ಎಣ್ಣೆಯಲ್ಲಿ ಕಜ್ಜಾಯವನ್ನು ಕರೆದಳು. ಒಂದು ಪುಟ್ಟಿಗೆ ಬಾಳೆ ಎಲೆ ಹಾಸಿ ಷ್ಟು ಕಜ್ಜಾಯವನ್ನು ತುಂಬಿಕೊಂಡು, ನಾಲ್ಕು ತೆಂಗಿನ ತರ ಳನು ಹಿಡಿದು ಹೊರಟಳು ಹೊರಡುವಾಗ "ರಾಮು, ಒಂದಷ್ಟು ಕಜ್ಜಾಯ ಇಟ್ಟಿದ್ದೀನಿ ಎಲ್ಲರಿಗೂ ಬಡಿಸು ಮನೆ ಕಡೆ ಜೋಕೆ" ಎಂದು ಕಿರಿಯ ಮಗನಿಗೆ ಬದ್ಧಿ ಹೇಳುವುದನ್ನು ಮರೆಯಲಿಲ್ಲ ರಾಮು "ನಾಳೆ ಬಂದುಬಿಡವ್ವ" ಎಂದು ತಾಯಿಗೆ ಎಚ್ಚರಿಕೆ ಕೊಡುವುದನ್ನೂ ಮರೆ ಲಿಲ್ಲ ಇನ್ನು ಯಾರಪ್ಪ ಅಡಿಗೆ ಕೋಣೆ ಹೊಕ್ಕು ಕೈ ಬಾಯೆಲ್ಲಾ ಮಸಿವಾಡಿಕೊಳ್ಳುತ್ತಾರೆ? ಇದೆಲ್ಲಾ ಹೆಂಗಸರಿಗೇ ಸರಿ—ಎಂದು ರಾಮು ತನ್ನಲ್ಲೇ ಗೊಣಗುಟ್ಟುತ್ತಾ ಅಡಿಗೆ ಕೋಣೆಯನ್ನು ಸೇರಿದ ರಾಮು ಚಿಕ್ಕಂದಿನಲ್ಲಿ ತಾಯಿ ಹೇಳಿದಂತೆ ಕೇಳಿಕೊಂಡು ಅಡಿಗೆ ಮಾಡುವುದರಲ್ಲಿ ಆಕೆಗೆ ನೆರವಾಗುತ್ತಿದ್ದ ಈಗ ಪ್ರಾಯ ಬಂದಿದೆ ಸರಿ ಓರಗೆಯವರು "ಏನೋ ರಾಮು, ಹೆಂಗಸಿನ ಹಾಗೆ ಇನ್ನೂ ಅಡುಗೆ ಮಾಡುತ್ತೀಯಲ್ಲೊ ಮದುವೆಯಾಗದೆ' ಎಂದು ಎಷ್ಟೋ ಸಾರಿ ಹಾಸ್ಯ ಮಾಡಿದ್ದುಂಟು ಆಗ ರಾಮು ನಾಚಿಕೆಯನ್ನು ಸೂಸುವ ನಗೆಯನ್ನು ಬೀರಿದ್ದುಂಟು ಅದಕ್ಕೇನೆ ರಾಮು ಅಡಿಗೆ ಕಲಸ ಎಂದರೆ ಈಗ ಬೇಜಾರು ಪಟ್ಟುಕೊಳ್ಳುವುದರ ಜೊತೆಗೆ ತ ಸು ನಾಚಿಕೆ ಪಡುತ್ತಾನೆ

ಬಸವಕ್ಕ ಮಗಳ ಮನೆಗೆ ವಾಯುವೇಗದಿಂದ ದಾರಿಯಲ್ಲಿ ಹೋಗು ತ್ತಿದ್ದಾಳೆ ಹೋಗುವ ದಾರಿಯಲ್ಲಿಯೂ ಸೊಸೆಯನ್ನು ಶಪಿಸಿಕೊಂಡೇ ಹೊರಟಳು ಆ ಮುಂಡೇದು ಮದುವೆಯಾಗಿ ಮನೆಗೆ ಬಂದೇ ಬಂತು, ಅವರಪ್ಪ ಒಂದುದಿನವನ್ನ ನನ್ಮಂಗೆ ಏನಾದರೂ ತಿಂಡಿ ತೀರ್ಥ ತಂದಿದ್ದಾಳೆ ಬೀಗರ ಮನೆಗೆ? ಆ ಚಿತ್ರಾಂಗಿಗೆ ಅಳಿಯ ಮಗಳು ಅಂತ ಪ್ರೀತಿ ಇದ್ದ ರಲ್ಲವೆ? ಇನ್ನೊಂದು ಸಾರಿ ನವಿಲೂರ ಮುಖ ಕಂಡಾಳೆ ಆ ಹೈದಳು? ನಂಜಮ್ಮನ ಕತ್ತಿಗೆ ತಾಲಿ ಬಿದ್ದೋಗಲಿ, ತೋರಿಸ್ತೀನಿ ನನ್ನ ಆಟನ. ಅವಳ ಅಪ್ಪನಿಗಂತೂ ಮುಖದ ನೀರು ಇಳಿಸಿಬಿಡ್ತೀನಿ—ಎಂದು ಲಿಂಗ ಮ್ಮನವೇಲೂ ತಿಮ್ಮಕ್ಕನವೇಲೂ ಬುಸುಗುಟ್ಟುತ್ತಾ ಹೋಗುತ್ತಿದ್ದಾಳೆ. ಶಿವನಯ್ಯನ ದೊಡ್ಡಿಯನ್ನು ತಲುಪಿ ಮನೆಗೆ ಹೋದಳು.

ಮನೆಯಲ್ಲಿದ್ದ ಗಂಗಮ್ಮ ಆಕಸ್ಮಿಕವಾಗಿ ಬಂದ ಅವ್ವನನ್ನು ಸಂತೋಷ, ವಿಸ್ಮಯಗಳಿಂದ ಕೂಡಿದ ದೃಷ್ಟಿಯಿಂದ ನೋಡುತ್ತಾ 'ಅವ್ವಾ, ಬಂದೆಯಾ? ಎಂದಳು ಬಸಮ್ಮ 'ಬಂದೆ ತಾಯಿ, ಮನೆಯಲ್ಲಿ ಯಾರಿಲ್ಲವಲ್ಲ' ಎಂದು ಕುಕ್ಕೆಯನ್ನು ತಲೆಯಮೇಲಿಂದ ಇಳಿಸಿದಳು. ಗಂಗಮ್ಮ ತಾಯಿಗೆ ನೀರು ಕೊಟ್ಟು ಒಂದು ಚಾಪೆಯನ್ನು ಹಾಸಿ ಕುಳ್ಳಿರಿಸಿದಳು ಅಪ್ಪ, ನಾಗಯ್ಯ, ರಾಮು ಎಲ್ಲರೂ ಸುಖವಾಗಿದ್ದಾರೆಯೆ? ಎಂದು ಕೇಳಿದ ಮೇಲೆ "ಏನಮ್ಮ, ಲಿಂಗಮ್ಮನಅಪ್ಪಾ ತೀರಿಕೊಂಡರಂತೆ? ನಿಮ್ಮ ಅಳಿಯನವರು ನಿನ್ನೆ ತಾನೆ ಹಾಗಂದರು ಅವರಿಗೂ ಯಾರೋ ಹೇಳಿದರಂತೆ ಅಯ್ಯೋ ಪಾಪ ಆ ಮನೆ ಕಟ್ಟಿತು ಅಂತಲೇ ಇನ್ನು ಆಮೇಲೆ, ಲಿಂಗಮ್ಮನಿಗೆ ಖಾಯಿಲೆ ಇನ್ನೂ ವಾಸಿ ಇಲ್ಲವೆ?" ಎಂದು ಮರುಕದಿಂದ ಕೂಡಿದ ದನಿಯಲ್ಲಿ ಕೇಳಿದಳು

"ಅವರಪ್ಪ ತೀರಿ ಹೋಗದೆ ಇನ್ನೇನು? ಹೊಟ್ಟೆಗೆ ಔಸ್ತಿ ತಕೊಳ್ಳದೆ ದುಡ್ಡು ದುಡ್ಡು ಅಂತ ಸತ್ತ ಅವನ ಸುದ್ದಿ ಈ ತಂಪು ಹೊತ್ತಿನಲ್ಲೇಕೆ? ಲಿಂಗೀಗೆ ರೋಗವೆ ಗಂಗ ಅವಳು ಬದುಕಿ ಬಂದಾಗ ನೋಡುವಾ! ಅವಳ ಕತೇನೂ ಮುಗಿದಂಗೇನೆ" ಎಂದು ತಾತ್ಸಾರವಾಗಿ ಮಾತನಾಡಿದ ತಾಯಿಗೆ ಗಂಗಮ್ಮ ಹೇಳಿದಳು—

"ಪಾಪ, ಯಾಕವ್ವ ಕೆಟ್ಟದ್ದನ್ನು ನುಡಿದೀಯೆ! ಒಳ್ಳೆ ಹುಡುಗಿ. ನಮ್ಮ ಹಾಗೇನೆ ಅದು ಹೆಣ್ಣು. ಏನೋ ಕಷ್ಟ ಬರ್ತದೆ ವಾಸಿಯಾಗದೇ ಹೋದೀತೆ?" ಮಗಳು ಲಿಂಗಮ್ಮನ ವಿಚಾರವಾಗಿ ಆಡಿದ ಮಾತುಗಳು ಬಸಮ್ಮನಿಗೆ ಹಿತವಾಗಿ ಕಾಣಲಿಲ್ಲದ್ದರಿಂದ ಆ ಮಾತುಗಳನ್ನು ಮರೆಸಲು "ನಂಜಮ್ಮ ಎಲ್ಲಿ?" ಎಂದಳು. "ತೋಟಕ್ಕೆ ಹೋಗಿದ್ದಾಳೆ ಅವಳ ಅಣ್ಣಾನವರ ಜೊತೇಲಿ" ಎಂದಳು ಗಂಗಮ್ಮ ತಾಯಿ ಬಂದ ಸಂತೋಷದಲ್ಲಿ ಸಡಗರದಿಂದ ಓಡಾಡಿಕೊಂಡು, ಒಳ್ಳೆ ಪಾಯಸ ಮಾಡಿ ಒಂದಷ್ಟು ಹುಳಿ ಅನ್ನವನ್ನು ಮಾಡಿದಳು. ಅವರೆಕಾಳು ಹಲಸಿನಕಾಯಿ ಪಲ್ಯವನ್ನೂ ಮಾಡಿದಳು. ಸಂಜೆಯ ಹೊತ್ತಿಗೆ ಮಾದಯ್ಯನೂ ನಂಜಮ್ಮನೂ ತೋಟದಿಂದ ಬಂದರು. ನಂಜಮ್ಮ "ಅತ್ತಮ್ಮ ಯಾವಾಗ ಬಂದಿರಿ?" ಎಂದು ನಸುನಗುವನ್ನು ಚೆಲ್ಲುತ್ತಾ ಪ್ರೀತಿಯಿಂದ

ಕೇಳಿದಳು. ಬಸಮ್ಮ ತಾನು ಬಂದು ಬಹಳ ಹೊತ್ತಾಯಿತೆಂದು ಹೇಳಿ "ಏನು ನಂಜಮ್ಮ, ನಿನ್ನ ನೋಡಬೇಕೂಂತ ಬಲಾಃಶೆಯಾಗಿ ಬಂದೆನವ್ವ" ಎಂದು ನಗುತ್ತಲೇ ಹೇಳಿದಳು ಹುಡುಗಿ ಬಸಮ್ಮನ ಮಾತಿಗೆ ಸಂತೋಷಪಟ್ಟುಕೊಂಡು, ಆಗಲಿ ಅದಕ್ಕೇನಂತೆ ಎಂಬ ಅರ್ಥವನ್ನು ಹೊರಗೆಡುಹುತ್ತಿದ್ದ ಕಣ್ಣುಗಳಿಂದ ಬಸಮ್ಮನ ಮುಖವನ್ನೇ ಅರಗಳಿಗೆ ನೋಡಿ ಮೌನವಾಗಿ ಕುಳಿತಳು. ಆ ದಿನ ರಾತ್ರಿ ಊಟ ಉಪಚಾರವಾಯಿತು ಮಲಗಿದ್ದಾಗ ಮಾದಯ್ಯ ಹಂಡತಿಯಿಂದ ಎಲ್ಲಾ ವಿಚಾರವನ್ನು ಕೇಳಿ ತಿಳಿದನು. ಲಿಂಗಮ್ಮನ ಖಾಯಿಲೆಗೆ ತನ್ನ ಸಹನುಭೂತಿಯನ್ನು ಅವನು ವ್ಯಕ್ತಪಡಿಸದೆ ಇರಲಿಲ್ಲ ಮೂರನೆ ದಿನ ಅಳಿಯನು ಮನೆಯಲ್ಲಿದ್ದಾಗ ಬಸಮ್ಮ ತನ್ನ ಮಗಳ ಕಡೆ ಮುಖ ಮಾಡಿಕೊಂಡು ಅಳಿಯನನ್ನುದ್ದೇಶಿಸಿ "ಮನೇಲಿ ಕಲಸ ಮಾಡುವರಿಲ್ಲ. ಹೊಲ ಕೊಯ್ಲಿಗೆ ಬಂದಿದೆ, ಕಬ್ಬಿನ ಗದ್ದೆ ಕೆಲಸ ಬೇರ ನಂಜಮ್ಮನ್ನ ಕರೆದುಕೊಂಡು ಹೋಗುತ್ತೀನಿ ಇಂದು" ಎಂದು ಮೆಲ್ಲನೆ ಬಾಯಿ ಬಿಟ್ಟಳು ಮಲ್ಲಯ್ಯ ಸ್ವಲ್ಪ ಹೊತ್ತು ತೆಪ್ಪನಿದ್ದು "ನಮಗೂ ಕೆಲಸದ ಕಾಲ. ಕಷ್ಟ ಅಂದ ಮೇಲೆ ಇನ್ನೇನು ಬೇಡ ಅನ್ನುವುದಕ್ಕಾದೀತೆ ? ಕರೆದುಕೊಂಡು ಹೋಗಿ. ಈ ವರ್ಷ ಅವಳಿಗೆ ಮದುವೆ ಮಾಡಿಬಿಡಬೇಕು ಜಾಗ್ರತೆ ಕಳುಹಿಸಿಬಿಡಿ" ಎಂದಷ್ಟೆ ಹೇಳಿದ ತೋಟದಲ್ಲಿ ತೆಂಗಿನ ತರಳನ್ನು ಕೀಳಿಸಿ ಸುರಿಸಿದ್ದೇನೆಂದು ಹೇಳಿ ಆತ ಹೊರಟುಹೋದ. ನಂಜಮ್ಮ ದನ ಕರುಗಳಿಗೆ ಒಂದು ಹೊರೆಯಷ್ಟು ಅವರೆ ಸೊಪ್ಪನಾದರೂ ತಂದು ಹಾಕಿ ಹೋದರಾಯಿತೆಂದು ಕೈಯಲ್ಲ ಕುಡುಗೋಲನ್ನು ಹಿಡಿದು ಹೊಲಕ್ಕೆ ಹೊರಟಳು ಮನೆಯಲ್ಲಿ ತಾನು ಮತ್ತು ಮಗಳು ಇಬ್ಬರೇ ಇರುವ ವೇಳೆಯಲ್ಲಿ ತನ್ನ ಮನೋಭಿಪ್ರಾಯವನ್ನು ಮಗಳಿಗೆ ಹೇಳಿದರೆ ಒಳ್ಳೆಯದೆಂದು ತಿಳಿದು ಬಸಮ್ಮ ಗಂಗಮ್ಮನಿಗೆ "ತಾಯಿ ಒಂದು ಮಾತಿದೆ. ನೀ ಏನಂತೀಯೋ ! ನಾವೆಲ್ಲಾ ಮಾತಾಡಿದ್ದೀವಿ ಮನೇಲಿ" ಎಂದು ತಡೆದು ತಡೆದು ಹೇಳಿದಳು. ಕೋಣೆಯಲ್ಲಿದ್ದ ಗಂಗಮ್ಮನ ಕುತೂಹಲ ಕೆರಳಿತು. ಕೊತಕೊತನೆ ಒಲೆಯ ಮೇಲೆ ಬೇಯುತ್ತಿದ್ದ ಅನ್ನಕ್ಕೆ ಉರಿ ತಂಪು ಮಾಡಿ ಸರ್‍ರನೆ ಹೊರಗೆ ಬಂದು "ಏನವ್ವ ಅಂಥ ಸಮಾಚಾರ ?" ಎಂದು ಬಿಟ್ಟ

ಕಣ್ಣುಗಳಿಂದ ಕೇಳಿದಳು. ಬಸವ್ಮ ವ್ಯಂಗ್ಯವಾಗಿ ನಗುತ್ತಾ ನಾಗಯ್ಯನಿಗೂ ಇಷ್ಟ, ನಾನೂ ರವಷ್ಟು ಸುಖವಾಗಿರಬಹುದು, ನೋಡವ್ವ" ಎಂದಳು.

"ಅದು ಸರಿ, ಏನದು ಸುದ್ದಿ ?"

"ಇನ್ನೇನು ನೀನು ಕಾಣೆಯಾ ? ನಾಗಯ್ಯನಿಗೆ ಮದುವೆ ಮಾಡಿ ಏನು ಸುಖಾ ಇದೆ ?"

"ಸುಖ ಪಡ್ತಾನೆ ಮುಂದೆ; ಈಗೇನಾಗಿದೆ ಅವನಿಗೆ ?"

"ಆ ರೋಗದವಳನ್ನ ಕಟ್ಟಿಕೊಂಡು ಏನು ಸುಖಾನೆ ಅವನಿಗೆ ? ನಂಜಮ್ಮನ ಮದುವೆ ಮಾಡಿ ಬಿಡವ್ವ, ನಿನ್ನಿಂದ ಮನೆ ಬೆಳಕಾಗಲಿ" ಎಂದಳು. ಗಂಗಮ್ಮನಿಗೆ ತಾಯಿಯ ಮಾತು ಕೇಳಿ ಆಶ್ಚರ್ಯವಾಯಿತು. ಆದರೂ ಲಿಂಗಮ್ಮನ ಖಾಯಿಲೆ, ಅವಳು ಗಂಡನ ಜೊತೆಯಲ್ಲಿ ಗಂಡ ಹೆಂಡಿರೆಂಬ ಮಧುರ ಬಾಂಧವ್ಯದಿಂದ ವರ್ತಿಸದೆ ಇದ್ದುದರ ನೆನಪಾಯಿತು ಲಿಂಗಮ್ಮನ ಕಡೆ ಆದೇಕೋ ಆಕೆಯ ಹೃದಯ ಕನಿಕರದಿಂದ ಮಿಡಿಯಿತು ಸ್ವಲ್ಪಹೊತ್ತು [illegible] ನಿಂತಳು "ಜನರು ಏನಂದಾರು ? ಸುಮ್ಮನ ಇರವ್ವ ಅಪ್ಪನಿಗೂ [illegible], ಹೀಗೆಲ್ಲಾ ಮನಸ್ಸು ಮಾಡೋಕೆ?"

"ಗಂಡಸಿಗೆ ಏನಪ್ಪ ತಿಳಿದಾ[illegible] ಸಂಸಾರ [illegible] ಯಜಮಾನರ ಕಿವಿ ಮೇ[illegible] ಒಂದು ಮಾತು ಹಾಕಿರು, ಆಮೇ[illegible] [illegible]ತುವ ಲೋಕದಾಗೆ ಎಷ್ಟು ಜನ ಇಬ್ಬರು ಹೆಂಡಿರ ಕಟ್ಟಿಕೊಂಡಿಲ್ಲ [illegible] ಸುಳಿ ಸೊಡರು ಇಲ್ಲದೆ ಇರೋದ ಮನೇಲಿ ?"

"ಈಗ ಕರೆದುಕೊಂಡು ಹೋಗು [illegible] ಮ್ಮನ ಆ ಮಾತು ಬಂದಾಗ ನೋಡುವ" [illegible] ತಾಯಿಯ ಮಾತನ್ನು ತೇಲಿಸಿ ಮಾತನಾಡಿದಳು ಗಂಗಮ್ಮ. ಬಸವ್ಮನಿಗೆ ತನ್ನ [illegible]ಯ ಕುಡಿ ಮುರಿದಂತೆ ಕಂಡರೂ ಮಗಳು ತನ್ನ ಅಳಿಯನನ್ನು ಒಪ್ಪಿಸಿ ಈ ಸಂಬಂಧಕ್ಕೆ ಸಿದ್ಧನಾಗುವಳೆಂದು ನಂಬಿ ಸಧ್ಯಕ್ಕೆ ತೆಪ್ಪನಾದಳು ಮನಸ್ಸಿನಲ್ಲಿ ಒಂದೆರಡುವಾರ ಕಳೆಯುವುದರಲ್ಲಿ ತಮಗೆ ತಾವೇ ಎಲ್ಲರೂ ದಾರಿಗ ಬರುತ್ತಾರೆಂದು ಊಹಿಸಿದಳು. ನಂಜಮ್ಮನಿಗೆ ತಾನು ನವಿಲೂರಿಗೆ ಹೋಗಬೇಕೆಂಬ ವಿಷಯ ಮನೆಯಲ್ಲಿ ತನ್ನ ಅತ್ತೆಮ್ಮ, ಅಣ್ಣ ಮಾತನಾಡಿದ್ದರಿಂದಲೇ ತಿಳಿದಿತ್ತು. ಅವಳು

ಅವಸರದಿಂದಲೇ ಒಂದು ಹೊರೆಯಷ್ಟು ಅವರೆ ಸೊಪ್ಪನ್ನು ಕೊಯ್ದು ಹೊತ್ತು ತಂದಳು. ಊಟ ಮುಗಿಸಿಕೊಂಡಳು. ಅತ್ತಿಗೆಯ ಮಾತಿನಂತೆ ತಲೆಗೆ ಎಣ್ಣೆ ಹಾಕಿ ಬಾಚಿಕೊಂಡು ಕೋಮಲವಾಗಿ ಬೆಳೆದಿದ್ದ ತಲೆಗೂದಲನ್ನು ಗಂಟು ಹಾಕಿಕೊಂಡಳು ಹಿತ್ತಿಲಿನಲ್ಲಿ ಬೆಳೆಸಿದ್ದ ಚಂಡು ಮಲ್ಲಿಗೆ ಹೂವನ್ನು ಕಿತ್ತು ತಂದು ದಂಡೆಕಟ್ಟಿ ಮುಡಿದುಕೊಂಡು ಹೊರಡಲು ಸಿದ್ಧಳಾದಳು ಹೊತ್ತು ಇಳಿಯುತ್ತಿದೆಯೆಂದೂ ತಾನು ಇನ್ನು ಹೊರಡುತ್ತೇನೆಂದೂ ಬಸವಮ್ಮ ಮಗಳಿಗೆ ಹೇಳಿ ಹೊರಡಲು ಸಿದ್ಧಳಾದಳು.

ಗಂಗಮ್ಮ "ಬರಿ ಕೈಯಲ್ಲಿ ಯಾಕೆ ಹೊಗುತ್ತೀಯವ್ವ?" ಎಂದು ಹೇಳಿ ಎರಡು ಹಲಸಿನ ಹಣ್ಣುಗಳನ್ನು ಕೊಟ್ಟು ಸ್ವಲ್ಪ ದೂರದವರೆಗೆ ತಾಯಿಯನ್ನೂ ನಾದಿನಿಯನ್ನೂ ಹಿಂಬಾಲಿಸಿ ಹೊರಟಳು. "ಇನ್ನು ನೀವು ಹೋಗಿ" ಎಂದು ತಾಯಿಗೆ ಹೇಳಿದಳು. ಬಸವಮ್ಮ 'ನಾನು ಹೇಳಿದ ಮಾತನ್ನು ಗಟ್ಟಿಮಾಡವ್ವ ನಿನ್ನ ಬಿಟ್ಟರೆ ಕೆಲಸ ಕೆಟ್ಟೀತು' ಎಂದು ಮಗಳಿಗೆ ಬೋಧಿಸಿದಳು ಗಂಗಮ್ಮ "ನೋಡುವ ಹೋಗವ್ವ" ಎಂದು ಹೇಳಿ ಅವರನ್ನು ಕಳುಹಿಸಿ ಕೊಟ್ಟಳು ಸಂಜೆಯ ಹೊತ್ತಿಗೆ ಬಸವಮ್ಮ ಮನೆಯನ್ನು ಸೇರಿದಳು. ನಂಜಮ್ಮ ಬಂದದ್ದನ್ನು ಕಂಡ ನಾಗಯ್ಯ ಸಂತೋಷದಿಂದ ಉಬ್ಬಿ ಹೋದ, ಆ ದಿನ ಅವನು ಮನೆ ಬಿಟ್ಟು ಎಲ್ಲೂ ಹೊರಡಲಿಲ್ಲ. ಆ ನೆವ ಈ ನೆವದಲ್ಲಿ ನಂಜಮ್ಮನನ್ನು ಮಾತನಾಡಿಸುತ್ತಿದ್ದ ಪ್ರಾಯತುಂಬಿ ಪುಷ್ಟಿಯಾಗಿ ಬೆಳದಿದ್ದ ನಂಜಮ್ಮನ ದೇಹದಾಕೃತಿ, ಮಾಟ ನಾಗಯ್ಯನ ಕಣ್ಣಿಗೆ ಹಬ್ಬವಾಗಿತ್ತು ತಾನು ಹೆಂಡತಿವುಳ್ಳವನೆಂಬುದನ್ನೂ ಮರೆತ. ಹೊಸ ಮದವಣಿಗನೆಂದೇ ಭಾವಿಸಿ ಆಕೆಯನ್ನ ಎಷ್ಟು ದಿನದಲ್ಲಿ ಮದುವೆಯಾದೇನೆಂಬ ಹಂಬಲದಲ್ಲಿ ಮುಳುಗಿ ತೇಲುತ್ತಿದ್ದ

ಬಸವಮ್ಮ ಊರಿನಲ್ಲಿಲ್ಲದಾಗ ಶಿವಣ್ಣ ರಾಮನಗರದಿಂದ ಬಂದು, ಹನ್ನೊಂದನೆ ದಿನದ ತನ್ನ ಅಪ್ಪನ ತಿಥಿಗೆ ಬರಬೇಕೆಂದು ಹೇಳಿಹೋಗಿದ್ದ. ಶಿವಣ್ಣ ಬಂದಿದ್ದಾಗ ನಾಗಯ್ಯ ಅವನ ಸಂಗಡ ಹಿಂದೆ ತಾನು ಪ್ರೀತಿಯಿಂದ ವರ್ತಿಸುತ್ತಿದ್ದಂತೆ ನಡೆದುಕೊಳ್ಳದೆ ಇದ್ದುದು ಶಿವಣ್ಣನ ಮನಸ್ಸಿಗೆ ಏನೋ ಒಂದು ತರಹೆಯ ಜಿಗುಪ್ಸೆಯನ್ನೂ ಅಸಮಾಧಾನವನ್ನೂ ಉಂಟುಮಾಡಿತ್ತು. ನವಲೂರಿಗೆ ಹೋಗಿ ತಿಥಿಗೆ ಬರುವಂತೆ ಹೇಳಿ ಹಿಂದಿರುಗಿ

ಬರುವಾಗಲೇ ಪೆಚ್ಚುಮೋರೆ ಹಾಕಿಕೊಂಡು ಬಂದ ಅದನ್ನು ಕಂಡ ತಿಮ್ಮಕ್ಕ ಮಗನು ದಣಿದು ಹಾಗೆ ಸಪ್ಪೆ ಮೋರೆ ಮಾಡಿಕೊಂಡಿರಬಹು ದೆಂದು ಅರಿತು ಅವನನ್ನು ಏನು ಎತ್ತ ಎಂದು ಮಾತನಾಡಿಸಲೇ ಇಲ್ಲ. ಲಿಂಗಮ್ಮನೂ ತೆಪ್ಪನೆ ಒಂದು ಕಡೆ ಬೆಪ್ಪು ಹಿಡಿದವಳಂತೆ ಚಿಂತಿಸುತ್ತಾ ಕುಳಿತಿದ್ದಳು. ಶಿವಣ್ಣ ಬಂದಕೂಡಲೆ ಕೈಕಾಲು ತೊಳೆದುಕೊಂಡು ತನ್ನ ತಾಯಿಗೆ "ಅವ್ವ ಊಟಕ್ಕೆ ಇಡು. ಹಸಿವಾಗುತ್ತದ'' ಎಂದಾಗ ತಿಮ್ಮಕ್ಕ ನವಲೂರಿನ ವಿಚಾರವಾಗಿ ಮಾತೆತ್ತಿದಳು ಲಿಂಗಮ್ಮ ಕುತೂ ಹಲದಿಂದ ಇವನೇಕೆ ಹಸಿದುಬಂದನೆಂದು ಯೋಚಿಸಿದಳೇ ವಿನಃ ತಮ್ಮ ನನ್ನು ಆ ವಿಚಾರವಾಗಿ ಬಾಯಿ ಬಿಟ್ಟು ಕೇಳಲಿಲ್ಲ ತಿಮ್ಮಕ್ಕನೇ ಕೇಳಿದಳು—

"ಯಾಕಯ್ಯ, ಊಟಮಾಡಿಬರಲಿಲ್ಲವೆ ನವಲೂರಿನಲ್ಲಿ ? ನಿಮ್ಮ ಅಮ್ಮ ಇರಲಿಲ್ಲವೆ ? ನಿಮ್ಮ ಮಾವನವರು ಯಾವಾಗ ಬರ್ತಾರಂತೆ ?'' ಎಂದು ಪ್ರಶ್ನಿಸಿದಳು. ಮುಖವನ್ನೆಲ್ಲಾ ಸಿಂಡರಿಸಿಕೊಂಡು ಶಿವಣ್ಣ ತನ್ನ ನೊಂದ ಹೃದಯದಿಂದ ಹೇಳಿದ—

"ಆ ಅಮ್ಮನ್ನೂ ಕಾಣೆ ಯಾರನ್ನೂ ಕಾಣೆ. ಮಾವ ಯಾತಕ್ಕೂ ನನ್ನ ಸಂಗಡ ಅಷ್ಟೊಂದು ಪ್ರೀತಿಯಿಂದ ಮಾತನಾಡಲಿಲ್ಲ ಊಟ ಕೂಡ ಮಾಡಿಹೋಗು ಎನ್ನಲಿಲ್ಲ. ಅಯ್ಯೋ ಎಲ್ಲೋ ಹೋಗಿದ್ದರು. ಮಾವ 'ಅವ್ವ ದೊಡ್ಡಿಗೆ ಹೋದಳು, ನಾ ಬಂದರೆ ಬಂದೆ ಇಲ್ಲದೆ ಇದ್ದರೆ ಇಲ್ಲ' ಎಂದು ಗಡುಸಿನ ದನಿಯಲ್ಲಿ ಹೇಳಿದ ನನ್ನನ್ನು ಕಂಡು ಮುಖ ಊದಿಸಿಕೊಂಡ ಸರಿ, ಅದನ್ನು ನೋಡಿ ನಾನು ತಿಥಿಗೆ ಖಂಡಿತ ಎಲ್ಲಾ ಬನ್ನಿ ಎಂದು ಹೇಳಿ ಬಂದೆ, ಅಷ್ಟೆ'' ಎಂದು ಹೇಳಿ ಊಟಮಾಡಲು ಕುಳಿತ. ಇದನ್ನು ಕೇಳಿ ತಿಮ್ಮಕ್ಕನಿಗೆ ತುಂಬಾ ವ್ಯಥೆಯಾಯಿತು. ಗಂಡಸತ್ತವಳೆಂದು ತನ್ನನ್ನು ಆಗಲೆ ಜನರೂ ನೆಂಟರೂ ಎಷ್ಟು ತಾತ್ಸಾರ ದಿಂದ ಕಾಣುತ್ತಾರೆಂದು ತಿಳಿದಳು ನೊಂದ ಅವಳ ಎದೆಯಲ್ಲಿ ಧೈರ್ಯದ ಕುಡಿಯೊಂದು ಮಿಂಚಿನಂತೆ ಹೊಳೆಯಿತು. 'ಆದದ್ದಾಗಲಿ, ದೇವರಿ ದ್ದಾನೆ, ಬಿಡಪ್ಪಾ' ಎಂದು ಮಗನಿಗೆ ಊಟ ಬಡಿಸಿದಳು ತನ್ನ ಗಂಡ ನಿಗೂ ಅತ್ತೆಗೂ ಯಾಕೋ ಮನಸ್ಸು ಕೆಟ್ಟಿರಬೇಕು, ತನ್ನ ಅಪ್ಪ ಸತ್ತ

ಮೇಲೆ ಹುಲ್ಲುಸತ್ತೆಗಿಂತ ಕಡೆಯಾಗಿ ಕಾಣಬೇಕೆಂದು ಅವರು ಬಗೆದಿರ ಬೇಕೆಂದು ಲಿಂಗಮ್ಮನಿಗೆ ಅನ್ನಿಸದೆ ಇರಲಿಲ್ಲ ಕುಳಿತಿದ್ದವಳು ತಲೆಯ ಮೇಲೆ ಸೆರಗನ್ನು ಹೊದೆದುಕೊಂಡು ಚಾಪೆಯಮೇಲೇ ಮಲಗಿದಳು. ಅವಳ ಮನಸ್ಸು ಶೂನ್ಯವಾಗಿತ್ತು ಗಂಡನು ತನ್ನ ತಮ್ಮನನ್ನು ಅಷ್ಟು ಅನಾದರದಿಂದ ಕಂಡರೂ ಆ ವಿಚಾರವಾಗಿ ಹೆಚ್ಚು ಮೆಲಕು ಹಾಕಲಿಲ್ಲ. ಹುಟ್ಟಿದ ಮನೆಯಲ್ಲೇ ಉಳಿದರೂ ಕೇಡೇನೂ ಇಲ್ಲವಲ್ಲ ಅಂದುಕೊಂಡು ಕಣ್ಣು ಮುಚ್ಚಿದಳು. ಆದರೆ ಅವಳ ಮಾನಸಿಕ ಕಣ್ಣುಗಳು ಮುಚ್ಚಿರ ಲಿಲ್ಲ ಪ್ರಪಂಚ ಎಷ್ಟು ಕಠಿನವಾಗಿ, ಬಾಳು ಎಷ್ಟು ಕಹಿಯಾಗಿದೆ ಎಂಬ ಚಿತ್ರವನ್ನು ಕಾಣುತ್ತಿತ್ತು. ತಿಮ್ಮಕ್ಕನೂ, ಹೊನ್ನಮ್ಮನೂ ಬಸವಯ್ಯನ ನೆರವಿನಿಂದ ಹೊನ್ನಯ್ಯನ ಹನ್ನೊಂದನೆ ದಿನದ ವೈಕುಂಠಸಮಾರಾಧನೆಗೆ ಸಾಮಾನುಗಳನ್ನು ಅಣಿಮಾಡಿಕೊಳ್ಳುತ್ತಿದ್ದರು. ಶಿವಣ್ಣನನ್ನು ಅವರ ಮಾವನು ತಾತ್ಸಾರದಿಂದ ಕಂಡ ವಿಷಯವನ್ನು ತಿಮ್ಮಕ್ಕ ಬಸವಯ್ಯನಿಗೆ ಹೇಳಿದಳು. ಅವನು ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳುವುದು ಈಗಿನ ಅವರ ಸ್ಥಿತಿಯಲ್ಲಿ ಹಿತಕರವಾದುದಲ್ಲವೆಂದು ಆಕೆಗೆ ಉಪದೇಶದ ಮಾತು ಗಳನ್ನಾಡಿದ ತಿಮ್ಮಕ್ಕನ ಅಂತರಂಗದ ವೇದನೆ ಬಸವಯ್ಯನ ಹಿತ ನುಡಿಗಳಿಂದ ತುಸು ಕಡಮೆಯಾಯಿತು

[illegible] ವಲ್ಲಿ ಪುತ್ರಮ್ಮ ನಂಜಮ್ಮನನ್ನು ಕರೆದುಕೊಂಡು ಬಂದಮೇಲೆ ಅಕ್ಕಪಕ್ಕದ ಮನೆಯ ಹೆಂಗಸರ ಸಂಗಡ ಸಂತೋಷದ ಉನ್ಮತ್ತದಲ್ಲಿ ಪ್ರೈಮರತು ನಂಜಮ್ಮನಿಗೂ ನಾಗಯ್ಯನಿಗೂ ಜೋಡಿ ಸರಿ ಹೋಗುವುದಿಲ್ಲವ ? ಎಂದು ಅವರ ಅಭಿಪ್ರಾಯವನ್ನು ಕೇಳಿಬಿಟ್ಟಳು ಯಾಕೆ, ಮದುವೆ ಮಾಡಬೇಕೆ ? ಎಂದು ಅವರು ಕೇಳಿದಾಗ ಬಸಮ್ಮ ಹಿಂದು ಮುಂದು ಯೋಚಿಸದ " ಬೇರೆ ಮದುವೆ ಮಾಡದೆ ಈ ಗೂಬೆ ರೋಗದವಳನ್ನು ಎಷ್ಟು ದಿನ ನೋಡ್ತಾ ಕೂತಿರುವುದು ? ಮನೆಗೆ ಸುಳಿ ಗಳಿ ಬೇಡವೆ ? " ಎಂದು ಹೇಳಿಯೇ ಬಿಟ್ಟಳು. ಆಗಬಾರದ್ದೇನೂ ಅಲ್ಲ ವಲ್ಲ ಎಂದು ಅವರು ಬಸಮ್ಮನ ಮಾತಿಗೆ ಮನಸ್ಸಿಲ್ಲದಿದ್ದರೂ ಪ್ರೋತ್ಸಾ ಹಿಸಿ ಮಾತನಾಡಿದರು. ಬಸಮ್ಮ 'ಗಾಟಿ' ಹೆಂಗಸೆಂದು ಮೊದಲೆ ತಿಳಿ ದಿದ್ದ ಅವರು ಇನ್ನು ಅದು ಅನ್ಯಾಯವಲ್ಲ—ಇನ್ನೆಷ್ಟು ದಿನ ನೋಡಿದ

ರಾಯಿತು ಎಂದರೆ ಸುಮ್ಮನೆ ಬಿಟ್ಟಾಳೆಯೆ ಎಂದು ತಿಳಿದು ಅವನು ಏನು ಹೇಳಿದರೂ ಹೂ ಎನ್ನುತ್ತಿದ್ದರೆ ವಿನಃ ಇಲ್ಲ ಎನ್ನುತ್ತಿರಲಿಲ್ಲ ಹೆಂಗಸಿನ ಕಿವಿಯ ಮೇಲೆ ಬಿದ್ದ ವಿಷಯ ಕೇಳಬೇಕೆ? ವಾಯುವೇಗ ಮನೋವೇಗ ಗಳನ್ನು ಮೀರಿ ಸಮಾಚಾರ ಹರಡಿಹೋಗುತ್ತದೆ ನಾಗಯ್ಯನಿಗೆ ಎರಡನ ಮದುವೆಯ ಏರ್ಪಾಟನ್ನು ಗುಟ್ಟಾಗಿ ಬಸಮ್ಮನೂ ಮುತ್ತಣ್ಣನೂ ಮಾಡು ತ್ತಿದ್ದಾರೆಂಬ ಸುದ್ದಿ ನವಲೂರಿನಲ್ಲಿ ಹರಡಿ, ಅಕ್ಕಪಕ್ಕದ ಊರುಗಳಿಗೂ ಹಂಗಸರ ಕಿವಿಯಿಂದ ಗಂಡಸರ ಕಿವಿಗೆ, ಮನೆಯಿಂದ ಮನೆಗೆ, ಊರಿಂದ ಊರಿಗೆ, ಶನಿವಾರದ ಸಂತೆಗೂ ಮುಟ್ಟಿತು ನವಲೂರಿನಲ್ಲಿ ಕೆಲವು ಜನ ಹಿರಿಯರಿಗೆ ಸಮಾಚಾರ ತಿಳಿದಾಗ ಸೋಜಿಗವಾಯಿತು ಮುತ್ತಣ್ಣನನ್ನು ಅವರು ಸಂಧಿಸಿದಾಗ ತಡಬಡವಿಲ್ಲದೆ ಕೇಳಿಯೇ ಬಿಟ್ಟರು, "ನಾಗಯ್ಯನಿಗೆ ಎರಡನೆಯ ಮದುವೆಯಂತೆ, ಹುಡುಗೀನ ನಿಮ್ಮ ಅಳಿಯನ ಮನೆಯಿಂದ ಕರೆತಂದಿದ್ದೀಯಂತೆ !"

ಅವರ ಮಾತಿನಲ್ಲಿ ಕುತೂಹಲವಿತ್ತು, ಆತಂಕವಿತ್ತು ಈ ಮಾತು ಗಳು ತನ್ನ ಕಿವಿಯಮೇಲೆ ಬಿದ್ದಾಗಲೇ ಹೆಂಡತಿ ಮಾಡಿರುವ ಚಿತಾವಣೆ ಇದಲ್ಲಾ ಎಂದು ಮುತ್ತಣ್ಣನವರಿಗೆ ಅರಿವಾಯಿತು. ಒಮ್ಮಲೇ ಆಕೆಯ ಮೇಲೆ ಸಿಟ್ಟುಬಂತು

"ಯಾಕೆ, ಮೂರನೆ ಮದುವೆ ಮಾಡಿರಪ್ಪ. ಇದೆಲ್ಲಾ ಬರೀ ಕತೆ– ಎಲ್ಲಾದರೂ ಉಂಟೆ!" ಎಂದು ತೇಲಿಸಿ ಮಾತನಾಡಿದ ಆದರೂ ಇವನ ಮಾತುಗಳಿಂದ ಅವರಿಗೆ ಸತ್ಯಾಂಶ ಗೋಚರಿಸಿದಂತಾಗಲಿಲ್ಲ, ತೆಪ್ಪನಾಗಿ ಬಿಟ್ಟರು ಇತರರು ತೆಪ್ಪನಾದರೂ ಮುತ್ತಣ್ಣನ ಮನಸ್ಸು ಹಂಡತಿ ಹೂಡಿ ರುವ ಕುತಂತ್ರಗಳನ್ನು ತೀವ್ರವಾಗಿ ಬಿಡಿಸಿ ಬಿಡಿಸಿ ಯೋಚಿಸತೊಡಗಿತು. ಯೋಚಿಸುತ್ತಿದ್ದಂತೆ ತನಗೆ ಸರಿಸಮಾನರಲ್ಲಿ ಊರಿನಲ್ಲಿ ಅವಮಾನವಾಗು ವಂಥ ಕೆಲಸ ಮಾಡಿದ್ದಾಳಲ್ಲಾ ಎಂದು ಕೋಪ ಒಮ್ಮೆಲೆ ಉಕ್ಕಿಬಂತು. ಮನೆಗೆ ಬಂದವನೇ ಹೆಂಡತಿಯನ್ನು ತೀಕ್ಷ್ಣದೃಷ್ಟಿಯಿಂದ ಹುಬ್ಬುಗಂಟಿ ಕ್ಕಿಕೊಂಡು ನೋಡಿದ ಅವನ ನೋಟದ ತೀಕ್ಷ್ಣತೆ, ಬೇವಿನಕಾಯಿ ತಿಂದಂತಿದ್ದ ಮುಖದ ಭಾವ ಇದರಿಂದಲೇ ಸಮಾಚಾರವನ್ನು ಬಸಮ್ಮ ಸುಲಭವಾಗಿ ಊಹಿಸಿಕೊಂಡು 'ಈಗ ಏನು ಹೋದದ್ದು? ಈಗೇನು

ಮದುವೆ ಆಗೋಯ್ತು?” ಎಂದು ಮೆಲು ದನಿಯಲ್ಲಿ ಹೇಳಿದಳು

“ಮದುವೆ ಬೇರೆ ಆಗ ಬೇಕೇನೆ? ನಿನಗೂ ಆ ಹುಡುಗನಿಗೂ ತಲೆ ತಿರುಗುತ್ತದೆ ಅಂತ ಕಾಣ್ತದೆ ಸರೀಕರು ಏನೆಂದಾರು? ಇಬ್ಬರ್ದೊಂಡಿರಕಾಟ ಗೊತ್ತಿಲ್ಲ” ಎಂದು ಬುಸುಗುಟ್ಟಿದ ಬಸವ್ವ “ಕಟ್ಟಿ ಕೊಳ್ಳುವನು ತಂದು ಹಾಕುತ್ತಾನೆ” ಎಂದು ಉದಾಶೀನದಿಂದ ಮಾತನಾಡಿದಳು. “ಮುಚ್ಚೆ ಬಾಯಿ, ಯಾರಾದರೂ ಹೇಸಿಕೊಂಡಾರು ನಿನ ಮಾತು ಕೇಳಿ” ಎಂದು ಗದರಿಸಿದ ಮುತ್ತಣ್ಣ “ಆ ಗೂಬೇ ರೋಗದ ಹೆಣ್ಣು ಕಟ್ಟಿಕೊಂಡು ಸಾಯಲಿ ಅಂತೀರ?” ಎಂದು ಬಸವ್ವ ಹೇಳುತ್ತಾ ಮಕ್ಕರಿಯನ್ನು ಸೊಂಟದಮೇಲೆ ಇರಿಸಿಕೊಂಡು ಹೊಲದಕಡೆ ಹೋದಳು ಹೋದವಳೇ ತಡ, ಗಂಡನು ತನ್ನ ಮೇಲೆ ಗುಡುಗಿದ್ದನ್ನು ನಾಗಯ್ಯನ ಕಿವಿಯಲ್ಲಿ ಪಿಸು ಗುಟ್ಟಿದಳು ಅವನೆಂದ—

“ಅವನಿಗೇನು? ಪ್ರಾಯ ಕಳೆಯಿತು ಮಗ ಕೆಟ್ಟರೇನಂತೆ ಅವನಿಗೆ ಆಗಬೇಕಾಗಿರೋದು ?”

“ಈಗ ತೆಪ್ಪನೆ ಇರೊ-ಇನ್ನಷ್ಟು ದಿನ ಕಳೆಯಲಿ, ಎಲ್ಲಾ ದಾರಿಗೆ ಬರ್‍ತಾರೆ”ಎಂದಳು ಬಸವ್ವ

“ನೋಡುವ, ಆ ರೋಗದ ಹುಡುಗಿ ನಾ ಕರೆತಂದರಲ್ಲವೆ? ಇವನೇ ಮಾಡಿದ ಮೋಸ ಅವರಪ್ಪ ಗೆಪ್ಪೆ ಹೊರಿಸುತಾನೆ ಅಂತ” ಎಂದು ತಂದೆಯ ಮೇಲೆ ಸಿಟ್ಟಾಗಿ ಬಿರುಸಿನಿಂದ ನುಡಿದ.

ಮುತ್ತಣ್ಣ ರಾಮನಗರಕ್ಕೆ ಬೀಗನ ತಿಥಿಗೆ ಹೊರಟ ಮಗನಿಗೂ ಹೆಂಡತಿಗೂ ರಾಮನಗರಕ್ಕೆ ಬರಲು ಮನಸ್ಸಿಲ್ಲವೆಂದು ಅವನಿಗೆ ತಿಳಿದಿತ್ತು ಹೆಂಡತಿಯ ಜೊತೆಯಲ್ಲಿ ತಾನು ರಾಮನಗರಕ್ಕೆ ಹೋಗಿಬರುವುದಾಗಿ ಹೇಳಿಹೊರಟನು ಮುತ್ತಣ್ಣನಾದರೂ ಬರುತ್ತಾನೆಯೋ ಇಲ್ಲವೋ ಎಂದು ಅನುಮಾನಿಸುತ್ತಿದ್ದ ಕರಿಹೊನ್ನಮ್ಮನಿಗೂ ತಿಮ್ಮಕ್ಕನಿಗೂ ಮುತ್ತಣ್ಣನನ್ನು ನೋಡಿ ಒಂದು ಸಮಾಧಾನವಾಯಿತು ಇವನ ಮುಖವನ್ನು ಕಂಡ ಕೂಡಲೇ ಕರಿಹೊನ್ನಮ್ಮನೂ ತಿಮ್ಮಕ್ಕನೂ ಆದರದಿಂದ “ಬಂದಿರಾ? ಹೆಂಗಸರು, ನಿಮ್ಮ ಮಗ ಯಾರೂ ಬರಲಿಲ್ಲವೆ?” ಎಂದರು. ಮುತ್ತಣ್ಣ ಹೆಂಡತಿಯ ಮತ್ತು ಮಗನ ನಿರ್ಧಾರವನ್ನು ಮರೆಮಾಚಿ “ಅವರಿಗೆ

ಕೆಲಸವಿತ್ತು ಮನೆಯ ಯಜಮಾನ ನಾನು. ಅವರು ಬಂದರೂ ಒಂದೆ ಬರದಿದ್ದರೂ ಸಮಾನೆ" ಎಂದು ಉತ್ತರಿಸಿದ ಮಲಗಿದ್ದ ಲಿಂಗಮ್ಮ ಎದ್ದು "ಅಯ್ಯ ಬಂದಿರಾ ?" ಎಂದು ಬಾಯಿತುಂಬ ಮಾತನಾಡಿದಳು ಮುತ್ತಣ್ಣ ನೊಸೆಯ ಬಳಿ ಹೋಗಿ ಕುಳಿತು 'ಈಗ ಸ್ವಲ್ಪ ಗುಣಮುಖವಾನೆ ತಾಯಿ ?" ಎಂದು ಪ್ರೀತಿಯಿಂದ ಕೇಳಿದ "ರವಷ್ಟು ವಾಸಿ ಅಯ್ಯ" ಎಂದಳು ಲಿಂಗಮ್ಮ

"ದೇವರು ಒಳ್ಳೇದು ಮಾಡ್ತಾನೆ ಅಂತೂ ನಿದಾನ ಕಷ್ಟ ಸಹಿಸಿಕೋ ಬೇಕಮ್ಮ ಕಷ್ಟಬರುವುದಲ್ಲಾ ಒಳ್ಳೇದಕ್ಕೆ" ಎಂದು ಅವಳಿಗೆ ಹಿತವಾಗುವಂತಹ ಮಾತುಗಳನ್ನಾಡಿದ ಲಿಂಗಮ್ಮ ಮೌನದಿಂದಲೇ ಮಾವನ ಮಾತುಗಳನ್ನು ಗ್ರಹಿಸಿ ಅವನು ತನ್ನಲ್ಲಿಟ್ಟಿರುವ ವಿಶ್ವಾಸವನ್ನು ನೆನೆದು ಮನಸ್ಸಿನಲ್ಲಿ ಸ್ವಲ್ಪ ಹಿಗ್ಗಿದಳು ಬಸವಯ್ಯನು ಬಂದು ಮುತ್ತಣ್ಣನ ಕ್ಷೇಮ ಸಮಾಚಾರವನ್ನು ವಿಚಾರಿಸಿದ ನಾಗಯ್ಯ ಮಾವನ ವೈಕುಂಠ ಸಮಾರಾಧನೆಗೆ ಬಾರದೆ ಇರುವುದಕ್ಕೆ ಹೇಗೆ ಮನಸ್ಸು ಬಂತೆಂದು ಬಸವಯ್ಯ ಸ್ವಲ್ಪ ಸಿಡುಕಿನಿಂದ ಕೂಡಿದ ಧ್ವನಿಯಲ್ಲಿ ಕೇಳಿದ. ಮುತ್ತಣ್ಣ ತಿಮ್ಮಕ್ಕನಿಗೆ ಹೇಳಿದ ಉತ್ತರವನ್ನೇ ಬಸವಯ್ಯನಿಗೂ ಹೇಳದೆ ವಿಧಿ ಇರಲಿಲ್ಲ ನೆಂಟರು ಇಷ್ಟರೆಲ್ಲಾ ಅಂದು ಬಂದು ನೆರೆದರು ಅಂದು ತಿಥಿ ಮುಗಿಯಿತು

ಮಾರನೆಯ ದಿನ ಮುತ್ತಣ್ಣ ಬಸವಯ್ಯನವರ ಮನೆಗೆ ಹೋದ. ಬಸವಯ್ಯ ಆದರದಿಂದ ಅವನನ್ನು ಕಂಡು, ಚಾಪ[illegible], ಕೂರಿಸಿ, ಎಲೆ ಅಡಿಕೆಯನ್ನು ತಟ್ಟೆಯಲ್ಲಿ ತಂದಿರಿಸಿ, ತಾನೂ ಅವನ ಪಕ್ಕದಲ್ಲಿ ಕುಳಿತ. ಬಸವಯ್ಯನಿಗೆ ಮುತ್ತಣ್ಣ ಬಂದಾಗಲೇ ತಿಳಿಯಿತು ಏನೋ ಜಟಿಲವಾದ ಪ್ರಶ್ನೆ ಎದ್ದಿದೆ ಇವನ ಮನೆಯಲ್ಲಿ, ಇನ್ನೇನು ಅದೇ ಮಾತಿರಬೇಕು ಇವನು ಮಗನಿಗೆ ಎರಡನೆಯ ಮದುವೆ ಮಾಡಲು ಒಪ್ಪಿದ್ದಾನಯೆ? ಎಂದು ಮುಂಚಾಗಿ ಯೋಚಿಸಿದ ಅಷ್ಟರಲ್ಲಿ ಮುತ್ತಣ್ಣ ಮೆಲ್ಲನೆ ಬಾಯಿ ತೆರೆದ

"ಬಸವಪ್ಪ, ತಾವು ಚಿಕ್ಕವರಾದರೂ ತಿಳಿದವರು ಕೆಲವು ವಿಚಾರವಿದೆ ನೀವು ನನಗೆ ನೆರವಾಗಬೇಕು. ಇಷ್ಟರಲ್ಲಿ ನಿಮ್ಮ ಕಿವಿಗೆ ಸುದಿ

ಮುಟ್ಟಿರಬೇಕು" ಎಂದು ಪ್ರಾರಂಭಿಸಿದ ಬಸವಯ್ಯ "ನೇರವಾಗಿ ಮಾತಾಡಿ ಸಂಕೋಚ ಪಡಬೇಡಿ. ಒಬ್ಬರಿಗೆ ಉಪಕಾರವಾಗುವಂಥ ಕೆಲಸವನ್ನು ಮಾಡಲಿಕ್ಕೆ ಹಿಂಜರಿಯುವುದಿಲ್ಲ" ಎಂದ "ನಮ್ಮ ಹೆಂಗಸು ನನ್ನ ಅಳಿಯನ ತಂಗೀನ ನಾಗಯ್ಯನಿಗೆ ಮದುವೆ ಮಾಡಬೇಕೂಂತ ಏನೇನೊ ಸಂಚು ಮಾಡ್ತಾ ಇರುವಂತೆ ನನಗೆ ತೋರ್‍ತದೆ. ನಾನೂ ಬೇಕಾದಾಷ್ಟು ಅಂದು, ಆಡಿ ಹೇಳಿದ್ದೀನಿ ಆ ಹುಡುಗೀನ ಕರೆತಂದು ಮನೇಲಿ ಇರಿಸಿಕೊಂಡಿದ್ದಾರ ತಾಯಿನೂ ಮಗನೂ" ಎಂಬ ಮಾತುಗಳನ್ನು ಕೇಳುತ್ತಿದ್ದ ಹಾಗೆಯೇ ಬಸವಯ್ಯನಿಗೆ ಆಶ್ಚರ್ಯವಾದುದರ ಜೊತೆಗೆ ಲಿಂಗಮ್ಮನ ಬಾಳು ತೀರಾ ಕಡುವುದಲ್ಲಾ ಎಂಬ ಭೀತಿಯುಂಟಾಯಿತು ಕುತೂಹಲದಿಂದ ಕೇಳಿದ—

"ಯಾಕಂತೆ, ಏನು ಕಾರಣ ಯಜಮಾನರೆ? ನೀವು ಇಲ್ಲಿಯುವರೆಗೂ ತೆಪ್ಪಗಿದ್ದೀರಲ್ಲಾ!"

"ಕಂಡೇ ಇದ್ದೀರಿ ನೀವು ಈ ಒರಟು ಜನಗಳನ್ನ ಅದರಲ್ಲೂ ಹೆಂಗಸಿನ ಬುದ್ಧಿ ಕೇಳಬೇಕೆ? ಮೀನಿನ ಬುದ್ಧಿ ಹಂಗೆ ನಾಗಯ್ಯನ ಓರಗೆ ಹುಡುಗರು ಬೇರೆ ಚಾಡಿ ಚುಚ್ತಾತ್ತಿರುತ್ತಾರೆ—ಹೆಂಡತಿಗೆ ಇನ್ನೂ ರೋಗ ವಾಸಿ ಆಗಿಲ್ಲ, ಅವಳಿಂದ ಕೆಲಸ ಸಾಗದು ಅಂತ ಮತ್ತೆ ಇನ್ನೂ ಒಂದು ಮಾತು, ನಿಮ್ಮ ಜೊತೇಲಿ ಮುಚ್ಚಿಕೊಂಡೇಕೆ ಮಾತಾಡಬೇಕು? ಮಕ್ಕಳಾಗಲಿಲ್ಲ, ಮನೇಲಿ ಸುಳಿ ಇಲ್ಲ--ಅಂತ ನಮ್ಮ ಹೆಂಗಸಿನ ಕುನೇಕ. ಇಷ್ಟೇ ನೋಡಿ"

ಮುತ್ತಣ್ಣನ ಮಾತುಗಳಿಂದ ಸನ್ನಿವೇಶ ಎಲ್ಲಿ ಕೈಮೀರಿ ಹೋಗುವುದೋ ಎಂದು ಭಯಗೊಂಡ ಬಸವಯ್ಯ "ಖಾಯಿಲೆ ಯಾರಿಗೆ ಬರುವುದಿಲ್ಲ ಯಜಮಾನರೆ? ನೀವು ಅವರಿಗೆ ತಿಳಿವಳಿಕೆ ಹೇಳಿ. ಇಂಥಾ ಬುದ್ಧಿವಂತ ಸೊಸೆಯನ್ನು ನೀವು ಪಡೆಯಬೇಕಾದರೆ ಈಶ್ವರನ ಹತ್ತಿರ ಬೇಡಿಕೊಂಡು ಬಂದಿರಬೇಕು. ಲಿಂಗಮ್ಮನಿಗೆ ಮಕ್ಕಳಾಗದೆ ಏನು? ತಲೇ ಕೂದಲು ನರೆತು ಹೋಯಿತೆ ಅವಳಿಗೆ? ಸುಮ್ಮಸುಮ್ಮನೆ ಬೇರೆ ಹೆಣ್ಣು ಮಾಡಿಕೊಂಡರೆ ಬಿಟ್ಟುಬಿಡುತ್ತಾರೆಯೆ? ಒಂದು ಹೆಣ್ಣಿನ ಬಾಳು ಮುರಿದಂತಲ್ಲವೆ? ದುಡುಕಿದರೆ ಪ್ರಯೋಜನವಿಲ್ಲ ತೌರುಮನೆಯಲ್ಲಿ

ಆಕೆ ಇರುವುದು ನಿಮಗೆ ಇಷ್ಟವಿಲ್ಲದಿದ್ದರೆ ನೀವೇ ಕರೆದುಕೊಂಡು ಹೋಗಿ ನಿಮ್ಮ ಊರಲ್ಲಿ ಉಪಚರಿಸಿ ''

'' ಒಪ್ಪಿದೆ ಬಸವಪ್ಪ ನಿಮ್ಮ ಮಾತ ಒಂದು ಉಪಕಾರ ಮಾಡ ಬೇಕು ನೀವು. ನಮ್ಮೂರಿಗೆ ಒಂದು ದಿನ ಬಂದು ಅವರಿಗೆ ಛೀಮಾರಿ ಮಾಡಿ ಸ್ವಲ್ಪ ಬುದ್ಧಿ ಹೇಳಬೇಕು ನಾನೂ ಇದನ್ನೆಲ್ಲಾ ತಡೀತೀನಿ ''

'' ನಾನು ಬರುತ್ತೇನೆ, ಮೊದಲು ನಿಮ್ಮ ಅಳಿಯನಿಗೆ ಹೇಳಿ, ಇದ ಕ್ಕೆಲ್ಲಾ ಒಪ್ಪಬೇಡಾಂತ ''

ಆಗಲಿ, ದೊಡ್ಡಿಗೆ ಹೋಗಿ ಹೇಳ್ತೀನಿ ಇನ್ನ ನಾನು ಹೊರಡು ತ್ತೀನಿ '' ಎಂದು ಮೇಲಕ್ಕೆ ಎದ್ದನು ಮುತ್ತಣ್ಣ

'' ಆಗಲಿ ಹೋಗಿ ಬನ್ನಿ ಬೇರೆ ಮದುವೆಗೆ ಅವಕಾಶ ಕೊಟ್ಟೀರಿ ಜೋಕೆ '' ಎಂದು ಬಸವಯ್ಯ ಮುತ್ತಣ್ಣನನ್ನು ಎಚ್ಚರಿಸಿ ಮಾತನ್ನಾಡಿದ

ಮುತ್ತಣ್ಣ ತಿಮ್ಮಕ್ಕನ ಮನೆಗೆ ಬಂದು ಊಟ ಮುಗಿಸಿಕೊಂಡು ಸೊಸೆಗೂ ತಿಮ್ಮಕ್ಕನಿಗೂ ಹೇಳಿ ನವಲೂರಿಗೆ ಹೊರಟ ಸ್ವಲ್ಪ ಹೊತ್ತಿನ ಮೇಲೆ ತಿಮ್ಮಕ್ಕನ ಮನೆಗೆ ಬಸವಯ್ಯನು ಹೋಗಿ ಮುತ್ತಣ್ಣನಿಂದ ಕೇಳಿದ ಸಂಗತಿಯನ್ನು ಹೇಳಿದ ತನ್ನ ಮಗಳ ಗತಿ ಇನ್ನು ಕೆಟ್ಟಿ ತಲ್ಲಾ ಎಂದು ತಿಮ್ಮಕ್ಕನಿಗೆ ಭೀತಿಯುಂಟಾಯಿತು ಗಂಡ ತೀರಿ ಹೋದದ್ದು, ಮಗಳ ಮುಂದಿನ ಭವಿಷ್ಯ—ಮತ್ತೊಬ್ಬ ಮಗಳು ಮದು ವೆಗೆ ಬಂದಿದ್ದಾಳೆ —ಇವನ್ನೆಲ್ಲಾ ನೆನೆದು ಅವಳ ಎದೆ ಥರಥರನೆ ನಡು ಗಿತು. ತಾನು ಇದನ್ನೆಲ್ಲಾ ಎದುರಿಸಿ ನಿಲ್ಲಲು ಹೆಂಗಸು, ಬಿದ್ದವರ ಮೇಲೆ ಕಲ್ಲು ಹಾಕುವುದೇ ಜನರ ನಡೆ, ಬಂದದ್ದನ್ನು ನಾವು ಅನುಭವಿ ಸದೆ ಮತ್ತಾರಿಗೆ ಕೊಡಬೇಕೆಂದು ಯೋಚಿಸುತ್ತಾ ಕಣ್ಣಲ್ಲಿ ನೀರು ತಂದು ಕೊಂಡಳು '' ಏನೋಪ್ಪಾ ಎಲ್ಲಾ ನಿಮ್ಮಿಂದಲೇ ಒಳ್ಳೆಯದಾಗಬೇಕು'' ಎಂದು ಬಸವಯ್ಯನಿಗೆ ದೈನ್ಯದಿಂದ ಹೇಳಿದಳು. ಶೂನ್ಯ ದೃಷ್ಟಿಯಿಂದ ಕಣ್ಣುಗಳನ್ನು ಬಿಡುತ್ತಾ ಸಮಾಚಾರವನ್ನು ಕೇಳುತ್ತಿದ್ದ ಲಿಂಗಮ್ಮ '' ಎದೆಗೆ ಕಲ್ಲುಹಾಕಿಕೊಂಡು, ಹುಟ್ಟಿದ ಮನೇಲಿ ಸ್ವಲ್ಪ ದಿನ ಇದ್ದು ಜೀವ ಬಿಡುತ್ತೇನೆ ಬಸವಣ್ಣ '' ಎಂದು ಹೇಳಿ ಕಣ್ಣೀರು ತಂದುಕೊಂಡಳು. ಲಿಂಗಮ್ಮನ ಮಾತಿನಲ್ಲಿ ತೋರಿಬರುತ್ತಿದ್ದ ಹೃದಯವೇದನೆಯು ಬಿಸಿ

ಬಸವಯ್ಯನ ಕಣ್ಣುಗಳನ್ನು ತೇವ ಮಾಡಿತು. ಈ ಸನ್ನಿವೇಶದಲ್ಲಿ ತಾನು ಒಂದು ಒತ್ತಾಸೆಯ ಮಾತನ್ನಾಡದಿದ್ದರೆ ಲಿಂಗಮ್ಮ ಇನ್ನೂ ಕೃಶವಾಗಿ ಜೀವ ಬಿಟ್ಟಾಳೆಂದು ಬಸವಯ್ಯನಿಗೆ ಅಂಜಿಕೆಯಾಯಿತು. “ಚಿಂತೆ ಮಾಡಬೇಡಮ್ಮ, ನಾನು ನವಿಲೂರಿಗೆ ಹೋಗಿ ಎಲ್ಲವನ್ನೂ ಸರಿಮಾಡ್ತೇನೆ. ಏನೂ ಆಗೋಲ್ಲ. ಇದೆಲ್ಲಾ ಆ ಬಸಮ್ಮನ ಆಟ. ಅವರೇನಾದರೂ ಕೇಳದೆ ಹೋದರೆ ನಿಮ್ಮ ರಂಗಯ್ಯ ಮಾವನವರಿಗೆ ಬರೆದು ಅವರನ್ನೇ ಇಲ್ಲಿಗೆ ಬರಮಾಡ್ತೇನೆ. ನಾವಿಬ್ಬರೂ ನವಿಲೂರಿಗೆ ಹೋಗಿ ಸರಿಮಾಡುತ್ತೇವೆ. ಅವರಿರುವಾಗ ನಿನಗೇಕಮ್ಮ ಹೆದರಿಕೆ?” ಎಂದು ಬಸವಯ್ಯ ನಗುವನ್ನು ಬೀರುತ್ತಾ ಹೇಳಿದಾಗ ಲಿಂಗಮ್ಮನ ತುಟಿಯಮೇಲೆ, ಕಣ್ಣುಗಳಲ್ಲಿ ನಗೆಯ ಅಲೆಯೊಂದು ಅರೆಗಳಿಗೆ ನರ್ತಿಸಿ ಮಾಯವಾಯಿತು. ರಂಗಯ್ಯನ ಹೆಸರು ಲಿಂಗಮ್ಮನ ಕಿವಿಗೆ ಅಷ್ಟೊಂದು ಇಂಪು. ಅಮೃತ ರಸವನ್ನು ಸವಿದಷ್ಟು ಸಂತೋಷ ಮನಸ್ಸಿಗೆ. ಲಿಂಗಮ್ಮ ಮತ್ತೆ ಮಾತನಾಡಲಿಲ್ಲ. ಆದರೂ ತನ್ನ ಗಂಡನು ಬೇರೆಯವಳನ್ನು ಮದುವೆ ಮಾಡಿಕೊಳ್ಳುವನೆಂದು ನೆನೆದಾಗ ಹೃದಯ ಹಿಂಡಿದಂತಾಗುತ್ತಿತ್ತು.

ಮತ್ತಣ್ಣ ಊರಿಗೆ ಹೋಗಿ ವಸ್ತುರಲ್ಲಿ ಆಳುಗಳನ್ನು ಕಟ್ಟಿಕೊಂಡು ಬಸಮ್ಮ, ನಾಗಯ್ಯ, ರಾಮು ಇವರೆಲ್ಲಾ ಹೊಲ ಕೊಯ್ಯುತ್ತಿದ್ದಾರೆ. ನಂಜಮ್ಮನಿಗೆ ಅಡುಗೆ ಕೆಲಸವನ್ನು ನೇಮಿಸಿದ್ದಳು ಬಸಮ್ಮ. ಆ ಹುಡುಗಿ ಊರಿಗೆ ಬಂದ ಹೊಸದರಲ್ಲಿ ಇದ್ದಷ್ಟು ಹರ್ಷದಿಂದ ಈಗ ಇರಲಿಲ್ಲ. ಬಾವಿಗೆ ನೀರು ತರಲು ಹೋದಾಗ, ಹಳ್ಳಕ್ಕೆ ಬಟ್ಟೆಯೊಗೆಯಲು ಹೋದಾಗ, ಹೊಲಕ್ಕೆ ಹುಲ್ಲು ತರಲು ಹೋದ ವೇಳೆಯಲ್ಲಿ ನವಿಲೂರಿನ ಹೆಂಗಸರು “ಏನಮ್ಮ, ನಿನ್ನನ್ನು ನಾಗಯ್ಯನಿಗೆ ಮದುವೆ ಮಾಡ್ತಾರಂತೆ? ಲಿಂಗಮ್ಮನ ಸವತಿ ಅನ್ನು’ ಎಂದು ಹೇಳುತ್ತಿದ್ದ ಮಾತುಗಳು ಅವಳಲ್ಲಿ ಕಳವಳವನ್ನುಂಟುಮಾಡಿದ್ದವು. ಆ ಮಾತು ಬಂದಾಗಲೆಲ್ಲಾ ನಂಜಮ್ಮ ಕಕ್ಕಾಬಿಕ್ಕಿಯಾಗಿ ಮರುಮಾತನಾಡದಿದ್ದುದರಿಂದ ಈ ಹುಡುಗಿಯನ್ನು ಕಲವು ಹೆಂಗಸರು “ಸುಮ್ಮಾಂಗಿದ್ದಾಳೆ ಹುಡುಗಿ, ಏನೂ ಅರಿಯದವಳಂಗೆ ಬಾಯನ್ನೇ ಬಿಡೊಲ್ಲ ಕಾಣೆ” ಎಂದು ತನ್ನ ಎದುರಿನಲ್ಲೇ ಮನ ನೋಯು

ವಂತೆ ಚುಚ್ಚಿ ಅಂದುದುಂಟು ಅವರ ದೂಷಣೆಯ ಮಾತುಗಳನ್ನು ವಿಧಿ ಇಲ್ಲದೆ ನಂಜಮ್ಮ ನುಂಗಿಕೊಂಡು ತನಗೆಲ್ಲಿ ಗ್ರಹಚಾರ ಬಂತಪ್ಪ ಎಂದು ಮನನೊಂದು ಚಿಂತೆಗೆ ತುತ್ತಾಗಿದ್ದಳು. ತನ್ನ ಅಣ್ಣನೂ ಅತ್ತಿಗೆಯೂ ಇದನ್ನೆಲ್ಲಾ ತಿಳಿದೂ ತಿಳಿಯದಂತಿದ್ದಾರೆಂದು ಭಾವಿಸಿ ಅವರ ಮೇಲಿದ್ದ ಪ್ರೀತಿಯನ್ನು ತನ್ನ ಚಿಂತೆಯ ಕಾವಿನಿಂದ ಇಂಗಿಸತೊಡಗಿದಳು ಇತ್ತ ನಾಗಯ್ಯ ಕಟ್ಟಿಕೊಳ್ಳುತ್ತಿದ್ದ ಆಶೆಯ ಗೋಪುರ ಕ್ರಮಕ್ರಮವಾಗಿ ಕುಸಿಯತೊಡಗಿತು ನಾಲ್ಕೈದು ದಿನಗಳಿಂದ ತಾನು ಎಷ್ಟು ಅಂಗಲಾಚಿ ಬೇಡಿ ಮಾತನಾಡಿದರೂ ನಂಜಮ್ಮ ಬೇರೆ ಮುಖಕೊಟ್ಟು ಮಾತನಾಡುತ್ತಿರಲಿಲ್ಲ ಇವನನ್ನು ಕಂಡಕೂಡಲೇ ಕಾಡಿನಲ್ಲಿ ಕರಡಿಯನ್ನು ನೋಡಿ ಭಯಪಟ್ಟವಳಂತೆ ಬೆಚ್ಚುತ್ತಿದ್ದಳು ಇದನ್ನೆಲ್ಲಾ ಬಸಮ್ಮನು ನೋಡುತ್ತಿದ್ದಳು ಈ ಏರ್ಪಾಡು ಹೀಗಾಯಿತಲ್ಲ ಎಂದು ತನ್ನ ದುರಾದೃಷ್ಟವನ್ನು ನೆನೆದು ನಾಗಯ್ಯನ ಮನಸ್ಸು ಮ್ಲಾನವಾಯಿತು ಕೆಲಸ ಕಾರ್ಯಗಳಲ್ಲಿ ನಿರ್ಲಿಪ್ತನಾಗಿದ್ದಂತೆ ಊಟ ಉಪಚಾರಗಳಲ್ಲೂ ಆಸಕ್ತಿ ಇರಲಿಲ್ಲ ತನ್ನ ಆಶೆಯ ಗೋಪುರ ಕಳಚಿ ಬೀಳುವುದಲ್ಲಾ ಎಂದು ಮನಸ್ಸು ಪರಿತಪಿಸುತ್ತಿದೆ. ಊರು ಬಿಟ್ಟು ಎಲ್ಲಿಯಾದರೂ ಹೋಗುವುದೇ ವೇಲೆಂದು ಚಿಂತಿಸುತ್ತಿದ್ದಾನೆ ತಾನು ಮಾಡುತ್ತಿರುವ ಮದುವೆ ಏರ್ಪಾಡನ್ನು ತನ್ನ ಯಜಮಾನ ರಾಮನಗರದಲ್ಲ ಹೇಳದ ಬಂದಾನೆಎಂಬ ಚಿಂತ ಬಸಮ್ಮನ ಮನಸ್ಸಿನಲ್ಲಿ ಕವಿದಿದ ಹೊರೆ ಕಟ್ಟುತಿದ್ದ ಆಳುಗಳ ಜೊತೆಗೆ ಮುತ್ತಣ್ಣ ಸೇರಿಕೊಂಡು ಹೊರೆ ಕಟ್ಟಿ ಕಟ್ಟಿ ಆಳುಗಳ ತಲೆಯಮೇಲೆ ಏರಿಸುತ್ತಿದ್ದಾನೆ ರಾಮನಗರದಲ್ಲಿ ಬೀಗನ ತಿಥಿ ಮತಿ ವಿಚಾರವಾಗಿ ಆಕೆ ಏನೊಂದು ಮಾತನ್ನೂ ಕೇಳಲಿಲ್ಲವಾದ್ದರಿಂದ ಹೆಂಡತಿ ಮುನಿಸಿನಿಂದಲೇ ಇದ್ದಾಳೆ ಎಂದು ತಿಳಿದ. ಸಿಟ್ಟಿನ ಕಾವು ಮೈಯಲ್ಲಿ ಏರತೊಡಗಿತು ಒಂದು ಸಾರಿ ಬಸಮ್ಮನ ಮುಖವನ್ನು ದುರದುರನೆ ನೋಡಿ ಕಟ್ಟಿದ ರಾಗಿಹುಲ್ಲನ್ನು ಮೆದೆಹಾಕಿಸಲು ಆಳುಗಳಿಗೆ ನೆರವಾಗಿ ತಾನೂ ನಿಂತನು. ಅಷ್ಟರಲ್ಲಿ ಹೊತ್ತು ಮುಳುಗಿತು ರಾಗಿ ಹುಲ್ಲಿನ ಕಂತೆಯನ್ನು ಮೆದೆಯ ಮೇಲಕ್ಕೆ ಸರಸರನೆ ಸಾಗಿಸಿ, ಒದರಿ ಮೆದೆಯನ್ನು ಬಿಡಿಸುತ್ತಿದ್ದಾನೆ 'ಎಲ್ಲಿ, ಕತ್ತಲಾಯ್ತು, ಸರಸರನೆ ಹೊರೆಗಳನ್ನೆಲ್ಲಾ ಸಾಗಿಸಿ' ಎಂದು ಆಳುಗಳನ್ನ

ಉತ್ಸಾಹವನ್ನು ತುಂಬುತ್ತಿದ್ದಾನೆ ಕತ್ತಲೆಯ ಸೆರಗು ಮೆಲ್ಲನೆ ಕಾಣಿಸ ತೊಡಗಿತು ಮೆದೆಯನ್ನು ಅರ್ಧದಲ್ಲಿಯೇ ಬಿಡಬೇಕಾಯಿತು ಮೂಡಣ ಕಡೆಯಿಂದ ಮೋಡಕಟ್ಟಲು ಪ್ರಾರಂಭವಾಯಿತು ಕೊಯ್ದು ಹೊಲ ಬೇರೆ ನೆಲದಮೇಲೆ ಬಿದ್ದಿದೆ, ಮೆದೆ ಅರ್ಧದಲ್ಲಿಯೇ ಬಿಟ್ಟಿದೆ, ಗಳಿಗೆ ಗಳಿಗೆಗೂ ಹೆಪ್ಪುಗಟ್ಟುತ್ತಿದ್ದ ಮೋಡಗಳ ರಾಶಿ ಬಾನಿನಲ್ಲಿ ಕಡು ಕಪ್ಪಾಗಿ ಏರುತ್ತಿದೆ. ಮಳೆ ಏನಾದರೂ ಬಿದ್ದರೆ ಹೊಟ್ಟೆಗೆ ಕೂಳಿಲ್ಲದೆ ಹೋಗುವುದಲ್ಲಾ! ಇಷ್ಟು ಕಷ್ಟಬಿದ್ದು ಬೆಳೆದ ಬೆಳೆ ಬಾಯಿಗೆ ಬಾರದೆ ಹೋದರೆ ಗತಿಯೇನು? ಎಂಬ ಚಿಂತೆಯ ಅಲೆಗಳು ಮುತ್ತಣ್ಣನ ಮನಸ್ಸಿನಲ್ಲಿ ಎದ್ದಿವೆ. ನಾಗಯ್ಯನಿಗೆ ಈ ಊರನ್ನೇ ಬಿಟ್ಟು ಎಲ್ಲಿಯಾದರೂ ದೇಶಾಂತರ ಹೊರಡಬೇಕೆಂಬ ಚಿಂತೆ· ಗಂಡನು ತನ್ನ ಏರ್ಪಾಡಿಗೆ ಸೈ ಅನಲಿಲ್ಲವಲ್ಲಾ ಎಂದು ಬಸವ್ವ ಊದಿ ಕೊಂಡು ಬುಸುಗುಟ್ಟುತ್ತಿದ್ದಾಳೆ ಮುತ್ತಣ್ಣ ಕಿರಿಯ ಮಗ ರಾಮನನ್ನು ಕರೆದು " ಏನೋ ರಾಮು, ಕೆಲ್ಸ ಕೆಟ್ಟಿತಂತ ಕಾಣ್ತದೆ ಮಳೆಬಿದ್ದರೆ ರಾಗಿ ಯೆಲ್ಲಾ ಅಳಿದು ಒಂದು ಕಾಳು ಕೈಸೇರದು ಅಂತ ಕಾಣ್ತದ ಕಾಣೊ. ನಿಮ್ಮಣ್ಣ, ನಿಮ್ಮವ್ವ ಆಳುಕಿಲ್ದೆ ಕೆಲ್ಸಮಾಡಿ ಮನೆ ತೂಳೀತಾರೆ ಅವರಿಗೆ ಬೇರೆ ಮದುವೆ ಮಾಡುವ ಚಿಂತೆ ಅವಳೇನು ಸಂಸಾರಗಿತ್ತಿಯೆ? ಇಷ್ಟು ಕೆಲ್ಸ ಕೆಟ್ರೂ ಊದ್ಕೊಂಡವಳೆ ನೋಡು ನೀನು ಇಲ್ಲೇ ಸ್ವಲ್ಪ ಹೊತ್ತು ಇದ್ದು ಬಾ ಅರಕೆ ಮೆದೆಯಮೇಲೆ ಚಾಪೆ ಹರಡಿ ಬಾ " ಎಂದು ಹೇಳಿ ಆಳುಗಳ ಸಂಗಡ ಮನೆಗೆ ಹೊರಟ

ಯಾವುವಾದರೂ ಗೋವುಗಳು ಬಂದು ಹುಲ್ಲು ತುಳಿದು ಹಾಳು ಮಾಡಿಯಾವೆಂದು ಬಹಳ ಹೊತ್ತಿನತನಕ ರಾಮು ಹೊಲದ ಹತ್ತಿರಕಾದಿದ್ದ ಅಷ್ಟರಲ್ಲಿ ಮೋಡಕ್ಕೆ ಮೋಡ ಮಸೆತು ಗುಡುಗಿತು ಕಾರ್ಮೋಡಗಳ ಗರ್ಭದಿಂದ ಘೋರವನೆ ಕಣ್ಣು ಕೋರೈಸುವಂತೆ ಮಿಂಚಿತು ಇನ್ನೇನು ಗತಿ ಎಂದು ರಾಮು ಹೇಳುವಷ್ಟರಲ್ಲಿ ಮಳೆಗೆ ಪ್ರಾರಂಭವಾಯಿತು ಮನೆಗೆ ಒಂದೇ ಉಸಿರಿಗೆ ಓಡಿದ ಎಲ್ಲರಿಗೂ ಎಲ್ಲಿಲ್ಲದ ಚಿಂತೆ, ಬೆಳೆದ ಬೆಳೆ ಬಾಯಿಗೆ ಬಾರದೆ ಹೋಯಿತಲ್ಲಾ ಎಂದು. ಬಸವ್ವ ಯಾವ ಕೆಲಸದ ವಿಚಾರವಾಗಿಯೂ ಬಾಯಿ ತೆರೆಯಲಿಲ್ಲ ಮಾರನೆಯ ಬೆಳಗ್ಗೆ ಕೋಳಿ ಕೂಗುವುದರಲ್ಲೇ ರಾಮನೂ ಮುತ್ತಣ್ಣನೂ ಹೊಲಕ್ಕೆ ಹೋಗಿ ಮೆದೆಯ

ನ್ನೆಲ್ಲಾ ಕಿತ್ತು ರಾಗಿ ಹುಲ್ಲನ್ನು ಹರಡಿ ಬಿಸಿಲಿನಲ್ಲಿ ಒಣಗಿಸತೊಡಗಿ ದರು ಬಿಸಿಲು ಏರುವುದರಲ್ಲೇ ಕೊಯ್ದು ಬಿದ್ದಿದ್ದ ರಾಗಿಯ ಹುಲ್ಲನ್ನು ಮಗುಚಿ ಬಿಸಿಲಿನಲ್ಲಿ ಒಣಗಲು ಹರವಿದರು ಬಹಳ ಹೊತ್ತಿನ ನಂತರ ಬಸವ್ವನ ಸವಾರಿ ಮುಂದಗವ ನದಲ್ಲಿ ಬರುತ್ತಿದೆ ತಂಗಳು ಹೊತ್ತು ತರು ತ್ತಿದ್ದ ಕುಕ್ಕೆ ತಲೆಯಮೇಲೆ ಇದೆ ಅವಳ ಸುಳಿವನ್ನು ಕಂಡ ಮುತ್ತಣ್ಣ ನೊರನೊರನೆ ಹಲ್ಲುಕಡಿದು "ರಾಮು ನೋಡು, ಹಿರಿ ಮಗನಿಗೆ ಹೊಲಕ್ಕೆ ಹೋಗು ಅಂತ ಬುದ್ಧಿ ಹೇಳಿ ಕಳಿಸಿದ್ದಾಳೆಯೆ? ನಿಧಾನವಾಗಿ ಆವೆ ಹೆಜ್ಜೆ ಹಾಕ್ದಂಗೆ ಬರ್‍ತಿದ್ದಾಳೆ ಯಜಮಾನಿ" ಎಂದು ಹೇಳಿದ ರಾಮು "ಅಣ್ಣಾ ನನ್ನು ಬೇರೆ ಆಟ್ದೆ ಮಾರ್ಗನೇ ಇಲ್ಲಪ್ಪ" ಎಂದಷ್ಟೆ ಅಂದ ತಾಯಿಯನ್ನು ಹೀಯಾಳಿಸಿ ಮಾತನಾಡಲು ಅವನಿಗೆ ಮನ ಬರಲಿಲ್ಲ ಹಾಗೆ ಮಾತನಾ ಡಿದರೆ ತನ್ನನ್ನು ಮೂರ್ಖನೆಂದು ತಂದ ತಿಳಿದಾನೆಂದುಕೊಂಡು ಬಾಯಿ ತಡೆದುಕೊಂಡ. ತಾಯಿಯ ವರ್ತನೆ ಅವನಿಗೂ ಹಿಡಿಸಿರಲಿಲ್ಲ ಆದರೂ ಯಾವುದನ್ನೂ ಬಾಯಿಬಿಟ್ಟು ಹೇಳುವ ಧೈರ್ಯ ಸಾಲದು ಇಬ್ಬರೂ ಮಾಡುವ ಕೆಲಸವನ್ನು ತಾನೊಬ್ಬನೇ ಮಾಡಿ ಚೆನ್ನಾಗಿ ದುಡಿದು ಬಾಳ ಬೇಕೆಂಬ ಉತ್ಕಟ ಆಶೆ ರಾಮುವದು ಅತ್ತಿಗೆ ಲಿಂಗವ್ವನಿಗಾಗಿ ಅವನು ಎಷ್ಟೊ ದಿನ ಮರುಕ ಪಟ್ಟಿದ್ದ ಸುಗುಣೆಯಾದ ಅತ್ತಿಗೆಯನ್ನ ಅಣ್ಣನು ತ್ಯಜಿಸಿ ಬೇರೆ ಹೆಣ್ಣು ಮಾಡಿಕೊಳ್ಳಲು ರಾಮುನಿಗೂ ಇಷ್ಟವಿಲ್ಲ ತಾಯಿ ಬಂದಾಗ "ಅಣ್ಣಾ ಏನವ್ವ ಮಾಡ್ತಾನೆ ಮನೇಲಿ ? ಇಂಥ ಕೆಲ್ಸದ ಕಾಲ ದಾಗೂ ಮನೆ ಮನೆ ಅಲೀತಿದ್ದಾನಾ?" ಎಂದ ಬಸವ್ವ "ಅವನ ಸುಳಿವೆ ಇಲ್ಲ ಎಲ್ಲಿ ಹೊದ್ನೊ ಕಾಣೆ" ಎಂದಳು ಗಡುಸಿನ ದನಿಯಲ್ಲಿ

ಕೆಲಸ ಮಾಡುವುದನ್ನು ಬಿಟ್ಟು ದಿನವೆಲ್ಲಾ ಎಲ್ಲಿ ಕಾಲ ಕಳೆಯು ತ್ತಿದ್ದಾನೋ ಯಾರಿಗೂ ತಿಳಿಯದು ಮನೆಗೆ ಬಂದು ಊಟ ಮುಗಿಸಿ ಹೊರಟರೆ ಪುನಃ ಊಟವವೇಳೆಗೆ ಬರುತ್ತಿದ್ದ ಎಷ್ಟು ದಿನ ಹೀಗೆ ವರ್ತಿಸಾ ನೆಂದು ಮುತ್ತಣ್ಣನೂ ತೆಪ್ಪಸಿದ್ದ ಒಂದ ದಿನ ನಾಗಯ್ಯ ಇದ್ದಕ್ಕಿದ್ದ ಹಾಗೆಯೇ ಎಲ್ಲಿಯೋ ಹೋದನೆಂದು ಸುದ್ದಿ ಹುಟ್ಟಿತು ನಾಗಯ್ಯ ತಾಯಿಗೆ ಹೇಳಿಯೇ ಮನೆ ಬಿಟ್ಟಿದ್ದ ನಂಜಮ್ಮನನ್ನು ನನಗೆ ಮದುವೆ ಮಾಡಿಕೊಡಿ ಎಂದು ತನ್ನ ಅಕ್ಕನನ್ನೂ ಮಾವನನ್ನೂ ಬೇಡಲು ದೊಡ್ಡಿಗೆ

ಉತ್ಸಾಹವನ್ನು ತುಂಬುತ್ತಿದ್ದಾನೆ ಕತ್ತಲೆಯು ಸೆರಗು ಮೆಲ್ಲನೆ ಕಾಣಿಸ ತೊಡಗಿತು ಮೆದೆಯನ್ನು ಅರ್ಧದಲ್ಲಿಯೇ ಬಿಡಬೇಕಾಯಿತು ಮೂಡಣ ಕಡೆಯಿಂದ ಮೋಡಕಟ್ಟಲು ಪ್ರಾರಂಭವಾಯಿತು ಕೊಯ್ದು ಹೊಲ ಬೇರೆ ನೆಲದಮೇಲೆ ಬಿದ್ದಿದೆ, ಮೆದೆ ಅರ್ಧದಲ್ಲಿಯೇ ಬಿಟ್ಟಿದೆ, ಗಳಿಗೆ ಗಳಿಗೆಗೂ ಹೆಪ್ಪುಗಟ್ಟುತ್ತಿದ್ದ ಮೋಡಗಳ ರಾಶಿ ಬಾನಿನಲ್ಲಿ ಕಡು ಕಪ್ಪಾಗಿ ಏರುತ್ತಿದೆ. ಮಳೆ ಏನಾದರೂ ಬಿದ್ದರೆ ಹೊಟ್ಟೆಗೆ ಕೂಳಿಲ್ಲದ ಹೋಗುವುದಲ್ಲಾ! ಇಷ್ಟು ಕಷ್ಟಬಿದ್ದು ಬಳೆದ ಬೆಳೆ ಬಾಯಿಗೆ ಬಾರದೆ ಹೋದರೆ ಗತಿಯೇನು? ಎಂಬ ಚಿಂತೆಯ ಅಲೆಗಳು ಮುತ್ತಣ್ಣನ ಮನಸ್ಸಿನಲ್ಲಿ ಎದ್ದಿವೆ ನಾಗಯ್ಯನಿಗೆ ಈ ಊರನ್ನೇ ಬಿಟ್ಟು ಎಲ್ಲಿಯಾದರೂ ದೇಶಾಂತರ ಹೊರಡಬೇಕೆಂಬ ಚಿಂತೆ· ಗಂಡನು ತನ್ನ ಏರ್ಪಾಡಿಗೆ ಸೈ ಅನಲಿಲ್ಲವಲ್ಲಾ ಎಂದು ಬಸವ್ವ ಊದಿ ಕೊಂಡು ಬುಸುಗುಟ್ಟುತ್ತಿದ್ದಾಳೆ ಮುತ್ತಣ್ಣ ಕಿರಿಯ ಮಗ ರಾಮನನ್ನು ಕರೆದು "ಏನೋ ರಾಮು, ಕೆಲ್ಸ ಕೆಟ್ಟತಂತ ಕಾಣ್ತದೆ ಮಳೆಬಿದ್ದರೆ ರಾಗಿ ಯೆಲ್ಲಾ ಆಳದು ಒಂದು ಕಾಳು ಕೈಸೇರದು ಅಂತ ಕಾಣ್ತದ ಕಾಣೊ. ನಿವ್ಮಣ್ಣ, ನಿಮ್ಮವ್ವ ಆಳುಕಿಲ್ದೆ ಕೆಲ್ಸಮಾಡಿ ಮನೆ ತೊಳೀತಾರೆ ಅವರಿಗೆ ಬೇರೆ ಮದುವೆ ಮಾಡುವ ಚಿಂತೆ ಅವಳೇನು ಸಂಸಾರಗಿತ್ತಿಯೆ? ಇಷ್ಟು ಕೆಲ್ಸ ಕೆಟ್ರೂ ಊದ್ಕೊಂಡವಳೆ ನೋಡು ನೀನು ಇಲ್ಲೇ ಸ್ವಲ್ಪ ಹೊತ್ತು ಇದ್ದು ಬಾ ಅರಕೆ ಮೆದೆಯಮೇಲೆ ಚಾಪೆ ಹರಡಿ ಬಾ" ಎಂದು ಹೇಳಿ ಆಳುಗಳ ಸಂಗಡ ಮನೆಗೆ ಹೊರಟ

ಯಾವುವಾದರೂ ಗೋವುಗಳು ಬಂದು ಹುಲ್ಲು ತುಳಿದು ಹಾಳು ಮಾಡಿಯಾವೆಂದು ಬಹಳ ಹೊತ್ತಿನತನಕ ರಾಮು ಹೊಲದ ಹತ್ತಿರಕಾದಿದ್ದ ಅಷ್ಟರಲ್ಲಿ ಮೋಡಕ್ಕೆ ಮೋಡ ಮಸೆತು ಗುಡುಗಿತು ಕಾರ್ಮೋಡಗಳ ಗರ್ಭದಿಂದ ಘಳಾರನೆ ಕಣ್ಣು ಕೋರೈಸುವಂತೆ ಮಿಂಚಿತು ಇನ್ನೇನು ಗತಿ ಎಂದು ರಾಮ ಹೇಳುವಷ್ಟರಲ್ಲಿ ಮಳೆಗೆ ಪ್ರಾರಂಭವಾಯಿತು ಮನೆಗೆ ಒಂದೇ ಉಸಿರಿಗೆ ಓಡಿದ. ಎಲ್ಲರಿಗೂ ಎಲ್ಲಿಲ್ಲದ ಚಿಂತೆ, ಬೆಳೆದ ಬೆಳೆ ಬಾಯಿಗೆ ಬಾರದೆ ಹೋಯಿತಲ್ಲಾ ಎಂದು. ಬಸವ್ವ ಯಾವ ಕೆಲಸದ ವಿಚಾರವಾಗಿಯೂ ಬಾಯಿ ತೆರೆಯಲಿಲ್ಲ ಮಾರನೆಯ ಬೆಳಗ್ಗೆ ಕೋಳಿ ಕೂಗುವುದರಲ್ಲೇ ರಾಮನೂ ಮುತ್ತಣ್ಣನೂ ಹೊಲಕ್ಕೆ ಹೋಗಿ ಮೆದೆಯ

ನ್ನೆಲ್ಲಾ ಕಿತ್ತು ರಾಗಿ ಹುಲ್ಲನ್ನು ಹರಡಿ ಬಿಸಿಲಿನಲ್ಲಿ ಒಣಗಿಸತೊಡಗಿದರು ಬಿಸಿಲು ಏರುವುದರಲ್ಲೇ ಕೊಯ್ದು ಬಿದ್ದಿದ್ದ ರಾಗಿಯ ಹುಲ್ಲನ್ನು ಮಗುಚಿ ಬಿಸಿಲಿನಲ್ಲಿ ಒಣಗಲು ಹರವಿದರು ಬಹಳ ಹೊತ್ತಿನ ನಂತರ ಬಸವ್ವನ ಸವಾರಿ ಮುಂದಗವನದಲ್ಲಿ ಬರುತ್ತಿದೆ ತಂಗಳು ಹೊತ್ತು ತರುತ್ತಿದ್ದ ಕುಕ್ಕ ತಲೆಯಮೇಲೆ ಇದೆ ಅವಳ ಸುಳಿವನ್ನು ಕಂಡ ಮುತ್ತಣ್ಣ ನೊರನೊರನೆ ಹಲ್ಲುಕಡಿದು " ರಾಮು ನೋಡು, ಹಿರಿ ಮಗನಿಗೆ ಹೊಲಕ್ಕೆ ಹೋಗು ಅಂತ ಬುದ್ಧಿಹೇಳಿ ಕಳಿಸಿದ್ದಾಳೆಯೆ? ನಿಧಾನವಾಗಿ ಆನೆ ಹೆಜ್ಜೆ ಹಾಕ್ದಂಗೆ ಬರ್‍ತಿದ್ದಾಳೆ ಯಜಮಾನಿ " ಎಂದು ಹೇಳಿದ ರಾಮು " ಅಣ್ಣಾ ನನ್ನು ಬೇರೆ ಆಟ್ದೆ ಮಾರ್ಗನೇ ಇಲ್ಲಪ್ಪ " ಎಂದಷ್ಟೆ ಅಂದ ತಾಯಿಯನ್ನು ಹೀಯಾಳಿಸಿ ಮಾತನಾಡಲು ಅವನಿಗೆ ಮನ ಬರಲಿಲ್ಲ ಹಾಗೆ ಮಾತನಾಡಿದರೆ ತನ್ನನ್ನು ಮೂರ್ಖನೆಂದು ತಂದ ತಿಳಿದಾನೆಂದುಕೊಂಡು ಬಾಯಿ ತಡೆದುಕೊಂಡ ತಾಯಿಯ ವರ್ತನೆ ಅವನಿಗೂ ಹಿಡಿಸಿರಲಿಲ್ಲ ಆದರೂ ಯಾವುದನ್ನೂ ಬಾಯಿಬಿಟ್ಟು ಹೇಳುವ ಧೈರ್ಯ ಸಾಲದು ಇಬ್ಬರೂ ಮಾಡುವ ಕೆಲಸವನ್ನು ತಾನೊಬ್ಬನೇ ಮಾಡಿ ಚೆನ್ನಾಗಿ ದುಡಿದು ಬಾಳಬೇಕೆಂಬ ಉತ್ಕಟ ಆಶೆ ರಾಮುನದು ಅತ್ತಿಗೆ ಲಿಂಗಮ್ಮನಿಗಾಗಿ ಅವನು ಎಷ್ಟೊ ದಿನ ಮರುಕ ಪಟ್ಟಿದ್ದ ಸುಗುಣೆಯಾದ ಅತ್ತಿಗೆಯನ್ನ ಅಣ್ಣನು ತ್ಯಜಿಸಿ ಬೇರೆ ಹೆಣ್ಣು ಮಾಡಿಕೊಳ್ಳಲು ರಾಮುನಿಗೂ ಇಷ್ಟವಿಲ್ಲ ತಾಯಿ ಬಂದಾಗ " ಅಣ್ಣ ಏನವ್ವ ಮಾಡ್ತಾನೆ ಮನೇಲಿ ? ಇಂಥ ಕೆಲ್ಸದ ಕಾಲವಾಗೂ ಮನೆ ಮನೆ ಅಲೀತಿದ್ದಾನಾ?" ಎಂದ ಬಸವ್ವ " ಅವನ ಸುಳಿವೆ ಇಲ್ಲ ಎಲ್ಲಿ ಹೊದ್ನೊ ಕಾಣೆ " ಎಂದಳು ಗಡುಸಿನ ದನಿಯಲ್ಲಿ

ಕೆಲಸ ಮಾಡುವುದನ್ನು ಬಿಟ್ಟು ದಿನವೆಲ್ಲಾ ಎಲ್ಲಿ ಕಾಲ ಕಳೆಯುತ್ತಿದ್ದಾನೋ ಯಾರಿಗೂ ತಿಳಿಯದು ಮನೆಗೆ ಬಂದು ಊಟ ಮುಗಿಸಿ ಹೊರಟರೆ ಪುನಃ ಊಟವವೇಳೆಗೆ ಬರ ತ್ತಿದ್ದ ಎಷ್ಟು ದಿನ ಹೀಗೆ ವರ್ತಿಸಾನೆಂದು ಮುತ್ತಣ್ಣನೂ ತೆಪ್ಪಸಿದ್ದ ಒಂದ ದಿನ ನಾಗಯ್ಯ ಇದ್ದಕ್ಕಿದ್ದ ಹಾಗೆಯೇ ಎಲ್ಲಿಯೋ ಹೋದನೆಂದು ಸುದ್ದಿ ಹುಟ್ಟಿತು ನಾಗಯ್ಯ ತಾಯಿಗೆ ಹೇಳಯೇ ಮನೆ ಬಿಟ್ಟಿದ್ದ ನಂಜಮ್ಮನನ್ನು ನನಗೆ ಮದುವೆ ಮಾಡಿಕೊಡಿ ಎಂದು ತನ್ನ ಅಕ್ಕನನ್ನೂ ಮಾವನನ್ನೂ ಬೇಡಲು ದೊಡ್ಡಗೆ

ಹೊರಟಿದ್ದ. ಮಗನು ಹೋದ ವಿಷಯವನ್ನು ಮರೆಮಾಚಿದಳು, ಬಸಮ್ಮ, ನಾಗಯ್ಯ ಎಲ್ಲಿಯೋ ಹೋದ ಸುದ್ದಿ ಕೇಳಿ ಮುತ್ತಣ್ಣನೆಂದ "ಅವನೆಲ್ಲಾದ್ರೂ ಹೋಗ್ಲಿ ಬಿಡೋ ರಾಮು ಮಾನವಿಲ್ಲಗ ಮನುಷ್ಯ ಮೃಗದಂಗೆ ಅವನಿಗೆ ಸರಿಯಾಗಿ ಅವರವ್ವ ಇದಾಳಲ್ಲಾ"

ಬಸಮ್ಮ ಸಿಡುಕಿನಿಂದ "ನಾನೇನು ಮಾಡಿಪೆ? ಅವನು ಮದುವೆಯಾದ್ರೇನು ಬಿಟ್ಟರೇನು? ರಾಮು, ನಂಜಮ್ಮನ್ನ ಕಳ್ಸಿಬಿಡೋ ದೊಡ್ಡಿಗೆ" ಎಂದಳು. ತಾನು ಮದುವೆಗೆ ಇಷ್ಟಪಡುತ್ತಿಲ್ಲವೆಂದು ಗಂಡನು ತಿಳಿಯಲೆಂದು ಹಾಗೆ ಸೋಗು ತೆಗೆದು ಹೇಳಿದಳು ಅದು ನಂಬದ ಮಾತಲ್ಲವೆಂದು ಅವಳ ಹೃದಯ ಹೊಡೆದುಕೊಳ್ಳುತ್ತಿತ್ತು ಹಾಗನ್ನದೆ ಬೇರೆ ಮಾರ್ಗವಿಲ್ಲ ಗಂಡನ ಕೋಪ ಮಿತಿಮೀರಿತೆಂದು ಅಂಜಿ ಹಾಗಂದಳು ಹೆಂಡತಿಯ ಸೋಗಿನ ಮಾತು ಕೇಳಿ ಮುತ್ತಣ್ಣನಿಗೆ ಕೋಪ ನೆತ್ತಿಗೇರಿತು. ಮುಖವನ್ನೆಲ್ಲಾ ಗಂಟುಹಾಕಿಕೊಂಡು ಹಂಡತಿಯ ಕಡೆ ನೋಡಿ "ಕರ್ಕೊಂಡು ಬಂದವಳು ಕಳಸ್ಲಿ, ತೆಪ್ಪನಿರೋ ರಾಮು" ಎಂದ ಅವನ ಮಾತಿನಲ್ಲಿ ಕೆಚ್ಚು ಹುದುಗಿತ್ತು, ಮನದ ಸ್ಥೈರ್ಯ ಎದ್ದು ಕಾಣುತ್ತಿತ್ತು ಇದನ್ನು ಬಸಮ್ಮ ಅರಿತು ತನ್ನ ಆಸೆಯನ್ನು ಸಂಪೂರ್ಣವಾಗಿ ಕುಸಿಯಬಿಟ್ಟಳು ರಾಮು ತೆಪ್ಪನಿದ್ದ

ನಂಜಮ್ಮ ಮನೆಬಿಟ್ಟು ಹೊರಗೆ ತಲೆ ಹಾಕುತ್ತಲೇ ಇರಲಿಲ್ಲ ಕೆಲಸಮಾಡುವುದರಲ್ಲಿಯೂ ನಿರುತ್ಸಾಹಳಾಗಿದ್ದಳು ನವಲೂರಿನ ಸ್ತ್ರೀಯರು ತನ್ನನ್ನು ಲಿಂಗಮ್ಮನ ಸವತಿ ಎಂದು ಆಡಿಕೊಂಡು ಅವಮಾನವಾದಂತಾಗಿದ್ದುದೇ ಅವಳು ಹಾಗೆ ಹೊರಗೆ ತೋರದಿದ್ದುದಕ್ಕೆ ಕಾರಣವೆಂಬುದನ್ನು ಬಸಮ್ಮನೂ ತಿಳಿದು ತೆಪ್ಪನಿದ್ದಳು 'ನೀರಿಗೆ ಹೋಗು, ದನಗಳನ್ನು ಮೇಯಿಸಲು ಹಿಡಿದುಕೊಂಡು ಹೋಗು'–ಎಂದು ಬಸಮ್ಮ ನಂಜಮ್ಮನಿಗೆ ಅಪ್ಪಣೆ ಮಾಡುವುದನ್ನು ಬಿಟ್ಟಳು

ನಾಗಯ್ಯ ಶಿವನಯ್ಯನ ದೊಡ್ಡಿಯನ್ನು ತಲುಪಿದಾಗ ಗಂಗಮ್ಮ ಒಬ್ಬಳೇ ಮನೆಯಲ್ಲಿದ್ದಳು. ಕೆಲಸದ ಕಾಲದಲ್ಲಿ ಹೀಗೆ ಇದ್ದಕ್ಕಿದ್ದಹಾಗೆ ಬಂದ ತಮ್ಮನನ್ನು ಕಂಡು "ಏನಪ್ಪ ನಾಗಯ್ಯ ಬಂದೆ? ಕೆಲಸದ ಕಾಲ!" ಎಂದು ಅಳುಕು ದನಿಯಲ್ಲಿ ಕೇಳಿದಳು. ನಾಗಯ್ಯ ಹಿಂದೆ ಬರುತ್ತಿದ್ದಾಗ

ಬಹಳ ಆದರ ವಿಶ್ವಾಸಗಳಿಂದ ಸ್ವಾಗತಿಸುತ್ತಿದ್ದ ತನ್ನ ಅಕ್ಕನ ವರ್ತನೆಯನ್ನು ಕಂಡು ತಾನು ನಂಜಮ್ಮನನ್ನು ಮದುವೆಗೆ ಕೇಳಲು ಬಂದಿದ್ದಾನೆಂದು ಅರಿತೇ, ಹಾಗೆ ಮಾತನಾಡಿದಳೆಂದು ತಿಳಿದು, ಪೆಚ್ಚುಮೋರೆ ಹಾಕಿಕೊಂಡು 'ಸುಮ್ಮನೆ ಬಂದೆನಮ್ಮ' ಎಂದ ಕೈಕಾಲಿಗೆ ನೀರು ಕೊಟ್ಟು ಒಂದು ಚಾಪೆಯನ್ನು ಹಾಸಿ 'ಕುಳಿತುಕೊ ಅವರು ತೋಟಕ್ಕೆ ಹೋದರು, ಇನ್ನೇನು ಬರುತ್ತಾರೆ' ಎಂದು ಹೇಳಿ ಕುಳ್ಳಿರಿಸಿದಳು. ನಾಗಯ್ಯನ ಮನಸ್ಸು ತನ್ನ ಅಕ್ಕನನ್ನು ಕೇಳಬೇಕೆಂದು ಒತ್ತುತ್ತಿತ್ತು. ಹೆಚ್ಚು ಹೊತ್ತು ತೆಪ್ಪನೆ ಕುಳಿತುಕೊಳ್ಳಲಾಗದೆ "ಅವ್ವ ನಿನ್ನ ಸಂಗಡ ಮಾತಾಡಿದ ವಿಷಯ ತಿಳಿಸಿದ ಭಾವನವರಿಗೆ?" ಎಂದ ತಮ್ಮ ಆ ಸಮಾಚಾರವನ್ನು ಕೇಳುತ್ತಾನೆಂದೇ ನಿರೀಕ್ಷಿಸುತ್ತಿದ್ದ ಗಂಗಮ್ಮ "ಇದೆಲ್ಲಿಯ ಮಾತಪ್ಪ! ನಿನಗೆ ಚಿನ್ನದಂತ ಹೆಂಡತಿ ಇದ್ದಾಳೆ ನಾನು ಅವರನ್ನು ಕೇಳಿದ್ದರೆ 'ನಿನ್ನನ್ನು ಬಿಟ್ಟು ನಾನೊಬ್ಬಳನ್ನ ಮದುವೆ ಆಗ್ತೇನೆ ಇದಕ್ಕೆ ನೀನೇನು ಹೇಳ್ತಿ' ಎಂದು ಹೇಳಿದರೆ ಗತಿ ಏನು ಅಂತ ಬಾಯಿ ಬಿಡಲಿಲ್ಲಪ್ಪ ಇದೆಲ್ಲಾ ನಿನಗೆ ಒಳ್ಳೆಯದಲ್ಲ" ಎಂದು ಉತ್ತರಿಸಿದಳು. ತನ್ನಂತೆ-ಹೆಣ್ಣಾಗಿ ನಿಸ್ಸಹಾಯಕಳಾಗಿರುವ ಲಿಂಗಮ್ಮನ ಬಾಳಿಗೆ ಮನನೊಂದು ಕರುಣೆ ತುಂಬಿದ ಹೃದಯದಿಂದ ಮತ್ತೊಂದು ಹೆಣ್ಣು ಜೀವವಾದ ಗಂಗಮ್ಮ ಹೇಳಿದುದು ಬಾಳಿನ ಅನುಭವದಿಂದ ತಮ್ಮನು ಇನ್ನೂ ಲೋಕ ವ್ಯವಹಾರ ಶೂನ್ಯನೆಂದು ಆಕೆಗೆ ತಿಳಿಯದ ಇರಲಿಲ್ಲ ಅಷ್ಟರಲ್ಲಿ ತನ್ನ ಯಜಮಾನರು ಯಾರ ಸಂಗಡಲೋ ಮಾತನಾಡುತ್ತಾ ಮನೆಯ ಬಾಗಿಲಿಗೆ ಬರುತ್ತಿರುವ ಸದ್ದು ಕೇಳಿಸಿತು ಮನೆಯ ಒಳಗಡೆಯಿಂದ ನೀರು ತುಂಬಿದ ಚಂಬನ್ನು ಹಿಡಿದು ಬಂದು ನೋಡುತ್ತಾಳೆ, ಬಸವಯ್ಯ! ಇದಕ್ಕಾಗಿಯೇ ರಾಮನಗರದಿಂದ ಬಂದಿದ್ದಾರೆಂದು ಆಕೆಯ ಚುರುಕಿನ ಮನಸ್ಸು ಗ್ರಹಿಸಿತು ಬಸವಯ್ಯನನ್ನು ನೋಡಿ ನಾಗಯ್ಯನು ಅವಾಕ್ಕಾದ; ಮುಖ ಚಿಕ್ಕದಾಯಿತು ಬಸವಯ್ಯನೇ ಅವನನ್ನು "ಯಾವಾಗ ಬಂದೆ ನಾಗಯ್ಯ? ಊರ ಕಡೆ ಸುಳಿಯದೆ ಹೋದೆಯಲ್ಲ ಏನು ಹೆಂಡತಿಗೆ ಖಾಯಿಲೆ ಅಂತಲೆ?' ಎಂದು ಪ್ರಶ್ನಿಸಿದ ನಾಗಯ್ಯ ಬಾಯಿ ಬಿಡದಿದ್ದುದರಿಂದ ಬಸವಯ್ಯನೂ

ಮುಂದಕ್ಕೆ ಯಾವ ಮಾತನ್ನೂ ಆಡದೆ ತೆಪ್ಪನೆ ಕುಳಿತ.

ಮಾದಯ್ಯ ತಾತ್ಸಾರವಾಗಿ 'ಯಾವಾಗ ಬಂದೆ ನಾಗಯ್ಯ?' ಎಂದಷ್ಟೇ ಹೇಳಿ ಮನೆಯ ಒಳಗೆ ಹೋದ ಭಾವ ತನ್ನನ್ನು ತಾತ್ಸಾರದಿಂದ ಮಾತನಾಡಿಸಿದ್ದರಿಂದಲೇ ನಾಗಯ್ಯನಿಗೆ ಎಲ್ಲಾ ವಿಷಯವನ್ನೂ ಬಸವಯ್ಯನವರು ಹೇಳಿದ್ದಾರೆಂದು ಅರ್ಥವಾಯಿತು "ಈಗ ತಾನೆ ಬಂದೆ" ಎಂದು ನಾಗಯ್ಯ ಉತ್ತರಿಸಿ ತೆಪ್ಪನಾದ. ಎಲ್ಲರಿಗೂ ಆ ಮಧ್ಯಾಹ್ನ ಊಟವಾಯಿತು ಮನೆಯ ಹಜಾರದಲ್ಲಿ ಎಲೆ ಅಡಿಕೆ ಅಗಿಯುತ್ತಾ ಮೂವರೂ ಕುಳಿತರು ಅಷ್ಟರಲ್ಲಿ ಗಂಗಮ್ಮನೂ ಊಟ ಮುಗಿಸಿ ಬಂದು ಸ್ವಲ್ಪ ದೂರದಲ್ಲಿ ಕುಳಿತಳು ಮಾದಯ್ಯನೇ ಮಾತು ತೆಗೆದ–' ಬಸವಯ್ಯನವರೇ, ಅದೇನು ಹೇಳಿ ರವಷ್ಟು, ನಾಗಯ್ಯನ ಅಕ್ಕನೂ ಒಪ್ಪಲಿ ತಮ್ಮನ, ತಾಯಿಯ ಬುದ್ಧೀನ!' ಎಂದ. ನಾಗಯ್ಯನ ಮನಸ್ಸು ತಾನು ಅಲ್ಲಿಗೆ ಆ ದಿನ ಬರಬಾರದಾಗಿತ್ತೆನಿಸಿತು ತಾನು ಮಾಡಿದ ಏರ್ಪಾಡಿಗೆ ಯಾರೂ ಸಮ್ಮತಿಸದಿದ್ದುದರಿಂದ ಬೆಪ್ಪು ಹಿಡಿದವನಂತೆ ಕುಳಿತಿದ್ದಾನೆ ಬಸವಯ್ಯ ಎಲೆ ಅಡಿಕೆಯನ್ನು ಅಗಿಯುತ್ತಾ ಮೆಲ್ಲನೆ ಹೇಳಿದ–

"ಏನು ನಾಗಯ್ಯ, ಜನ ಏನಂದಾರು ಎರಡನೆ ಮದುವೆ ಅಂದರೆ? ಒಳ್ಳೆ ಮನತನಸ್ತರು ನೀವು ನೀನೇ ಹೀಗೆ ಯೋಚನೆ ಮಾಡಿದರೆ ಹೇಗಪ್ಪ? ರತಿಯಂತಹ ಹೆಂಡತಿ ಇರುವಾಗ ಬೇರೆ ಮದುವೆಯಾಗುತ್ತೇನೆಂದರೆ ಹುಚ್ಚರಾಡುವ ಮಾತಲ್ಲವೆ? ಹೆಂಡತಿಯ ಕಷ್ಟ ಸುಖವನ್ನು ತಿರುಗಿ ನೋಡಬಾರದೆ? ಮಾವನ ತಿಥಿಗೂ ಬಾರದೆ ಹೋದೆ!'' ನಾಗಯ್ಯ ಮಾತನಾಡಲಿಲ್ಲ ಬಸವಯ್ಯನ ಮಾತುಗಳೊಂದೊಂದೂ ಅವನ ಹೃದಯವನ್ನು ಇರಿಯುತ್ತಿದ್ದುವು

"ಯಾಕಯ್ಯ ತೆಪ್ಪನೆ ಕೂತಿದ್ದೀ, ಮಾತಾಡು" ಎಂದ ಮಾದಯ್ಯ ಗಂಗಮ್ಮನ ಕಡೆ ತಿರುಗಿ "ಏನಮ್ಮ ನಿನ್ನ ತಮ್ಮನಿಗೆ ನೀನು ಏನೇಕ ಹೇಳಬಾರದೆ?" ಎಂದ ಬಸವಯ್ಯ "ನಾನೂ ಬೇಕಾದಂಗೆ ಹೇಳಿದ್ದೀನಿ" ಎಂದಳು ಗಂಗಮ್ಮ ತಾನು ತಾಯಿಯ ಮಾತಿಗೆ ಕಿವಿ ಬಿಟ್ಟದ್ದು ತಪ್ಪಾಯಿತೆಂದು ನಾಗಯ್ಯ ಯೋಚಿಸುತ್ತಾ ಕುಳಿತಿದ್ದಾನೆ "ಅದೇನು

ಬಾಯಿ ಬಿಡಯ್ಯ" ಎಂದು ತನ್ನ ಭಾವ ಒತ್ತಿ ಹೇಳಿದಾಗ ನಾಗಯ್ಯ ಮೆಲ್ಲನೆ ಮಾತುಗಳನ್ನು ಅಗಿಯುತ್ತಾ "ಏನೋ ನಮ್ಮವ್ವ ಮಾಡಿದ್ದು ನೀವೆಲ್ಲಾ ಬೇಡ ಅಂದರೆ ಬೇರೆ ಮದುವೆ ಆಗೋದುಂಟೆ?" ಎಂದ

"ಅದು ಎಂದಿಗೂ ಆಗೋದಿಲ್ಲ, ಸರಿ ಮಾವನ ತಿಥಿಗೆ ಹೋಗ ಬಾರದೇ? ಎಲ್ಲಾದರೂ ಉಂಟೇ! ಏನೂ ಹೊರಿಸಲಿಲ್ಲ ಅಂತಲೋ?" ಎಂದ ಮಾದಯ್ಯ ನಾಗಯ್ಯ ಬಾಯಿ ಬಿಡಲಿಲ್ಲ ಬಸವಯ್ಯ "ಲಿಂಗಮ್ಮನ ಖಾಯಿಲೆ ಗುಣವಾಗಲಿ ಬರುವಾಗ ಅಷ್ಟು ಕಾಳು ಕಟ್ಟಿ ಒಂದು ಕರುವಿನ ಹಸು ಎಲ್ಲಾ ಹೊಡೆದು ತರುತ್ತಾಳೆ ಮುಂದಿನ ವರ್ಷಕ್ಕೆ ಗಿರಿಜೆ ಮದುವೆ ತಂಗಿ ಮದುವೆ ಮಾಡಿ ಬರಲಿ ಅಷ್ಟರಲ್ಲಿ ಖಾಯಿಲೇನೂ ಗುಣಮಾಡಿಕೊಳ್ಳಲಿ ನಿಮ್ಮ ಒಡವೇನ ನೀವೇ ಉಪ ಚರಿಸಬೇಕಪ್ಪ ಹೀಗೆಲ್ಲಾ ನೀನು ದಾರಿ ತಪ್ಪಿ ಹೆಜ್ಜೆ ಹಾಕುತ್ತೀನೆಂದರೆ ನೋಡಿದವರೆಲ್ಲಾ ನಗುತ್ತಾರೆ" ಎಂದ.

"ನಿಮ್ಮ ಮಾತಿಗೆ ಬದಲು ಹೇಳುತ್ತೀನೆಯೆ?" ಎಂದ ನಾಗಯ್ಯ.

"ಹಾಗಾದರೆ ನಮ್ಮ ಊರಿಗೆ ಬಾರಪ್ಪ, ಜೊತೆಯಲ್ಲಿ ಹೋಗುವ"

ನಾಗಯ್ಯ ಮೌನತಾಳಿದ ಅವನಿಗೆ ಒಳ್ಳೆ ಇಕ್ಕಟ್ಟಿಗ ಸಿಕ್ಕಿ ಕೊಂಡಂತಾಯಿತು

ಮಾವನ ತಿಥಿಗೆ ಹೋಗದೆ ಈಗ ಹೋದರ ಜನರ ಆಡಿಕೆಗೆ ಒಳಗಾ ಗಬೇಕಾಗುತ್ತದೆಂದು ಯೋಚಿಸಿದ. ಬಸವಯ್ಯನ ಮಾತಿಗೆ ಉತ್ತರ ಕೊಡದೆ ಕುಳಿತಿದ್ದ ತಮ್ಮನಿಗೆ ಗಂಗಮ್ಮ "ಹೋಗಪ್ಪ ತಿಪ್ಪನೆ, ಎಲ್ಲ ರನ್ನೂ ನೋಡಿ ಬಾ ಹೀಗೇ ಇರೊಲ್ಲ ಕಾಲ ಒಂದು ಕಾಲಕ್ಕೆ ನಮ್ಮ ಕೈ ಮೇಲಾಗ್ತದೆ, ಮತ್ತೊಂದು ಕಾಲಕ್ಕೆ ಅವರ ಕೈ ಮೇಲಾಗ್ತದೆ" ಎಂದು ವಿವೇಕ ಹೇಳಿದಳು. ಮಾದಯ್ಯನೂ "ಹೋಗಿ ಬಾರಪ್ಪ. ನಿನ್ನ ನಡವಳಿ ಕೇನ ಯಾರೂ ಒಪ್ಪುವುದಿಲ್ಲ ನಂಜಮ್ಮ ಬೇಕಾದರೆ ನಿಮ್ಮ ಮನೆಯಲ್ಲಿ ಇನ್ನಷ್ಟು ದಿನ ಕೆಲಸ ಮಾಡುತ್ತಿರಲಿ" ಎಂದ ನಾಗಯ್ಯನಿಗೆ ಇವರ ಮಾತಿನಿಂದ ತಪ್ಪಿಸಿಕೊಳ್ಳುವ ದಾರಿಯೇ ಕಾಣದೆ ಮೌನವಾಗಿರುವುದ ರಿಂದಲೇ ತನ್ನ ಒಪ್ಪಿಗೆಯನ್ನು ಸೂಚಿಸಿದ. ಹೆಂಡತಿಯು ತನ್ನ ಸಂಗಡ ಅಷ್ಟು ಸಮರಸದಿಂದ ನಡೆದುಕೊಳ್ಳುತ್ತಿಲ್ಲವೆಂದು ಒಂದೆರಡು ಮಾತುಗಳ

ನ್ನಾಡಬೇಕೆಂದು ಅವನ ಅಂತರಂಗದಲ್ಲಿ ಕವಿದಿತ್ತು, ಆದರೆ ಮಾತುಗಳು ಗಂಟಲಿನಿಂದ ಹೊರಗೆ ಬರಲಿಲ್ಲ ಇದು ಸರಿಯಾದ ಸಮಯವಲ್ಲವೆಂದು ತಡೆದುಕೊಂಡ

ಬಿಸಿಲು ತಂಪಾದಮೇಲೆ ಬಸವಯ್ಯ ನಾಗಯ್ಯನನ್ನು ಕರೆದುಕೊಂಡು ಮಾದಯ್ಯ ಮತ್ತು ಗಂಗಮ್ಮರಿಂದ ಬೀಳ್ಕೊಂಡು ತಮ್ಮೂರಿಗೆ ಹೊರಟ ನಾಗಯ್ಯ ಹೊರಡುವಾಗ ಅಕ್ಕನಿಗ "ರಾಮನಗರದಲ್ಲಿ ಈದಿನ ಇದ್ದು ಹಾಗೆಯೇ ಊರಿಗೆ ಹೋಗುತ್ತೇನೆ " ಎಂದು ಹೇಳಿದ. ಗಂಗಮ್ಮ ಬೀದಿಯ ತನಕ ಬಂದು ತಮ್ಮನನ್ನು " ಒಳ್ಳೆಯದಾಗಲಿ ಹೋಗಿ ಬಾ " ಎಂದು ಹರಸಿ ಕಳುಹಿಸಿ ಕೊಟ್ಟಳು ಹೆಂಡತಿಯ ಮನೆಗೆ ಹೋಗುತ್ತಿರುವ ತಮ್ಮನನ್ನು ಸ್ವಲ್ಪ ಹೊತ್ತು ನಿಂತು ನೋಡಿದಳು. ಜನರು ಚಂದವಾಗಿ ಬಾಳಿ ಬದುಕಿದರೆ ನೋಡುವುದಕ್ಕೆ ಒಂದು ಚಂದವೆಂದು ಆವಳ ಮನಸ್ಸು ಉಲ್ಲಾಸಗೊಂಡಿತು ಹಾದಿಯುದ್ದಕ್ಕೂ ನಾಗಯ್ಯ ಬಸವಯ್ಯನ ಹಿಂದೆ ಹೋಗುತ್ತಾ ತನ್ನ ಹೆಂಡತಿಯ ನಡೆನುಡಿಯ ವಿಚಾರವಾಗಿ ಕಹಿ ಉದ್ಭವಿಸಿದ್ದ ಮನಸ್ಸನ್ನು ಒತ್ತಟ್ಟು ತಳ್ಳಿ, ಆಕೆ ತನ್ನ ವಿಚಾರವಾಗಿ ಏನೊಂದೂ ಮಾತನಾಡಲಿಲ್ಲ ತನ್ನ ಅವ್ವ ಆಕೆಯನ್ನು ಅಷ್ಟು ಅಕ್ಕರೆಯಿಂದ ಕಾಣುತ್ತಿರಲಿಲ್ಲವಾದರೂ ಆಕೆಗೆ ಪ್ರತಿಭಟಿಸಿ ಮಾತನಾಡದೆ ತಲೆಮೇಲೆ ಸರಗು ಹಾಕಿಕೊಂಡು ತನ್ನ ಕೆಲಸದಲ್ಲಿ ತೊಡಗುತ್ತಿದ್ದಳು, ಏನೋ ಗ್ರಹಚಾರದಿಂದ ತನ್ನ ಸಂಗಡ ಇರಬೇಕಾದ ಸರಸ ಸಲ್ಲಾಪದಿಂದ ಆಕೆ ನಡೆಯಲಿಲ್ಲ, ಇನ್ನು ಮುಂದಾದರೂ ಎಲ್ಲ ಸರಿಹೋದೀತು–ಎಂದು ಮನಸ್ಸಿನಲ್ಲಿ ಹೆಂಡತಿಯ ಒಳ್ಳೆಯ ನಡತೆಗಳನ್ನೇ ಚಿತ್ರಿಸಿಕೊಂಡು ತಾನು ಮಾಡಿದ ಕೆಲಸಕ್ಕೆ ತಾನೇ ಹೇಸಿಕೊಂಡ ಇದಕ್ಕೆಲ್ಲಾ ಬಸವಯ್ಯನವರ ರಾಯಭಾರವೇ ಕಾರಣವೆಂದು ಬಸವಯ್ಯನವರನ್ನು ಮನಸ್ಸಿನಲ್ಲೇ ಹೊಗಳಿದ. ಬಾಯಿ ಬಿಟ್ಟು ಅದನ್ನು ಬಸವಯ್ಯನವರಿಗೆ ಹೇಳಿಯೇ ಬಿಡಬೇಕೆಂದು " ಬಸವಪ್ಪನವರೇ, ನೀವು ಬರದಿದ್ದರೆ ನನ್ನ ಹುಚ್ಚುತನ ಆಳಿತಾ ಇರಲಿಲ್ಲ. ದೇವರಾಗಿ ಬಂದಿರಿ. ನನ್ನಿಂದ ನಿಮಗೂ ತೊಂದರೆಯಾಯ್ತು. ಆವಳುಎಷ್ಟುದಿನವಾದರೂ ಅಪ್ಪನ ಮನೆಯಲ್ಲಿ ಇದ್ದು ಸುದಾರಿಸಿಕೊಂಡು ಬರಲಿ. ಅಲ್ಲಿ ಹೋಗಿ ಮುಖ ತೋರೋಕೆ ನನಗೆ ನಾಚಿಕೆಯಾಗ್ತದೆ "

ಎಂದು ತನ್ನ ಕೃತಜ್ಞತೆಯನ್ನು ಬಸವಯ್ಯನವರಿಗೆ ತಿಳಿಸಿದ ಬಸವಯ್ಯ ಹುಡಗ ಈಗ ದಾರಿಗೆ ಬರುತ್ತಿದ್ದಾನೆಂದು ತಿಳಿದು "ಅಷ್ಟೆಲ್ಲಾ ದೊಡ್ಡ ಮಾತು ಬೇಡಪ್ಪ ನೀವು ಗಂಡಹೆಂಡರು ಚೆನ್ನಾಗಿದ್ದರೆ ನೋಡುವವರಿಗೂ ಒಂದು ಸಂತೋಷ, ಕಟ್ಟರೆ ಯಾರಪ್ಪ ಕಣ್ಣಿಂದ ನೋಡುವರು?" ಎಂದು ಲೋಕ ರೂಢಿಯಂತ ಮಾತನಾಡುತ್ತಾ ಆಡುತ್ತಾ ದಾರಿಯು ಇವರಿಗೆ ಗೋಚರವಿಲ್ಲದಂತೆ ಸಾಗಿತು ಇಬ್ಬರೂ ಹೊನ್ನಯ್ಯನ ಮನೆಯ ಮುಂದೆ ಬಂದರು. ಬಸವಯ್ಯನೇ ಮನೆಯೊಳಕ್ಕ ನುಗ್ಗಿದ. ನಾಗಯ್ಯ ಹೊರಜಗಲಿಯಮೇಲೆ ಕುಳಿತ ಜಗುಲಿಯ ಮೇಲೆ ಕುಳಿತ ಗಂಡನನ್ನು ಲಿಂಗಮ್ಮ ಒಳಗಿಂದಲೇ ನೋಡಿದಳು ಅವಳ ಮನಸ್ಸಿನಲ್ಲಿ ಏರಿಳಿತಗಳೇನೂ ಉಂಟಾಗಲಿಲ್ಲ ಬಸವಣ್ಣನವರ ಬೋಧನೆಯಿಂದ ಈಕಡೆ ಮುಖ ತಿರುಗಿಸಿರಬಹುದೆಂದು ತಿಳಿದು, ತೆಪ್ಪನೆ ಮಲಗಿದ್ದಳು ತಿಮ್ಮಕ್ಕನಿಗೆ ಅಳಿಯನು ಬಂದ ಸಮಾಚಾರವನ್ನು ಬಸವಯ್ಯನು ಹೇಳಿದಾಗ ವಿಸ್ಮಯ ಮತ್ತು ಕುತೂಹಲಗಳಿಂದ ಬೆರತ ದೃಷ್ಟಿಯನ್ನು ಬಸವಯ್ಯನ ಕಡೆ ಬಿಟ್ಟು ನೋಡಿದಳು ಅವಳ ದೃಷ್ಟಿಯಿಂದಲೇ ಅವಳ ಮನಸ್ಸನ್ನು ಅರಿತ ಬಸವಯ್ಯ ಹೇಳಿದ —

"ನಾನೂ, ಅವರ ಅಕ್ಕನೂ ಬೇಕಾದಂತೆ ಹೇಳಿದ್ದೇವೆ ನಾನೇ ಜೊತೆಯಲ್ಲಿ ಕರೆದು ಕೊಂಡು ಬಂದೆ ಬಾಯಿ ತಪ್ಪಿ ಮಾತನಾಡಬೇಡಿ" ಎಂದು ಹೇಳಿದ ಹೊರಜಗುಲಿಯಮೇಲೆ ಕುಳಿತದ್ದ ನಾಗಯ್ಯನನ್ನು ಒಳಗಡ ಹೋಗಿದ ತಿಮ್ಮಕ್ಕ ಕರಿ ಮಗಳಿಗೆ "ಗಿರಿಜಾ ಒಳ್ಳೆಯದೊಂದು ಚಾಪೆ ಹಾಸಿಕೊಡು ನಿಮ್ಮ ಮಾವನವರಿಗೆ" ಎಂದಳು. ತಾನು ಹಾಗೆ ಉಪಚಾರದ ಮಾತುಗಳನ್ನಾಡದಿದ್ದರೆ ಬಂದಿರುವ ಅಳಿಯನ ಮನಸ್ಸು ಕೆಟ್ಟೀತಂದು ಮನಸ್ಸಿನ ಕಹಿ ಭಾವನೆಯನ್ನು ಬಿಟ್ಟು ಹಾಗ ಆಕ ಹೇಳಿದಳು. ಗಿರಿಜೆ ಚಾಪೆಯನ್ನು ಹಾಸಿ 'ಕೂಡಿರಿ ಮಾವಯ್ಯ' ಎಂದಳು ಹಿಂದೆ ತನ್ನ ಅತ್ತೆ ಇಷ್ಟೊಂದು ಉಪಚಾರವಾಗಿ ಮಾತನಾಡಿರಲಿಲ್ಲ ಈಗ ಅವರಲ್ಲೂ ಪ್ರೀತಿ ಮೊಳೆತಿರುವಾಗ ತಾನೇಕೆ ಶತ್ರುವಿನಂತೆ, ವರ್ತಿಸಬೇಕೆಂದು ನಾಗಯ್ಯ ನೆನಸಿದ. ಕುಳಿತಿದ್ದ ಸ್ಥಳಕ್ಕೆ ಗಿರಿಜೆ ಒಂದಷ್ಟು ಮಜ್ಜಿಗೆಯನ್ನು ತಂದು ಇರಿಸಿದಳು. ಮಜ್ಜಿಗೆಯನ್ನು ಕುಡಿದು ನಾಗಯ್ಯ ಸ್ವಲ್ಪ ದಣಿವಾರಿ

ಸಿಕೊಂಡಮೇಲೆ "ಅಮ್ಮ ಎಲ್ಲಿ ಹೋದರಮ್ಮ?" ಎಂದು ಗಿರಿಜೆಯನ್ನು ಕೇಳಿದ ಎಂದೂ ಇಲ್ಲದ ಮಾತನ್ನು ಇಂದು ಬಾಯಿತುಂಬಾ ಆಡಿದ್ದಕ್ಕೆ ಗಿರಿಜೆಗೂ ಆಶ್ಚರ್ಯ ಸಂತೋಷಗಳಾದುದು ನಿಜ 'ಅಜ್ಜಿಗೂ ಮೈಗೆ ಚನ್ನಾಗಿಲ್ಲ, ತೋಟದಲ್ಲಿ ಮಲಗವಳೆ' ಎಂದು ಹುಡುಗಿ ಉತ್ತರಿಸಿದಳು ತಾನು ತೋಟದ ಕಡೆ ಹೋಗಿ ಬರುವುದಾಗಿ ಹೇಳಿ ನಾಗಯ್ಯ ಅಲ್ಲಿಂದ ಎದ್ದು ಹೋದ ಬಸವಯ್ಯ ತಮ್ಮವರ ರಾಯಭಾರಿಯಾಗಿ ಹೋಗಿ ವಿಷವಾಗಿ ಪರಿಣಮಿಸಿದ್ದ ನೆಂಟನ್ನು ಅಮೃತವನ್ನಾಗಿ ಮಾಡಿದಕ್ಕೆ ಆವನ ವಿಚಾರದಲ್ಲಿ ಮತ್ತಷ್ಟು ಅಭಿಮಾನ ಮೂಡಿತು, ಮನಸಿಗೂ ಆಶೆ ನೆಮ್ಮದಿಯಾದರೂ ಸಿಕ್ಕಿತು. ಆದರೆ ಲಿಂಗಮ್ಮನಿಗೆ ಅಮೃತ ವಿಷವಾದದ್ದೂ ವಿಷ ಅಮೃತವಾದದ್ದು ಆದೊಂದೂ ತಿಳಿಯದು ಎಂದಿನಂತೆ ಅವಳ ಮನಸ್ಸು ಮ್ಲಾನವಾಗಿತ್ತು ತಿಮ್ಮಕ್ಕ ಬಸವಯ್ಯನನ್ನು "ಏನಪ್ಪಾ, ಹಿಂದಿನ ಜನ್ಮದಲ್ಲಿ ನಮ್ಮ ಲಿಂಗಮ್ಮನ ಒಡಹುಟ್ಟಿದ್ದಿರೀಂತ ಕಾಣ್ತಾದೆ, ಜನ್ಮಾಪಿ ಈ ಉಪಕಾರ ಮರೆತೇನೆ? ಎಂದು ತನ್ನ ಅಂತರಂಗವನ್ನ ಬಿಚ್ಚಿ ಹೇಳಿದ್ದಕ್ಕ "ನನಗೂ ಬಹಳ ಚಿಂತೆಯಾಗಿತ್ತು ತಿಮ್ಮಕ್ಕ, ಎಲ್ಲಿ ಈ ಒರಟು ಜನ ಮದುವೆ ಮಾಡಿಬಿಟ್ಟಾರೋ ಅಂತ ನನ್ನ ಮಾತು ಕೇಳದಿದ್ದರೆ ಕೊನೆಗೆ ರಂಗಯ್ಯನವರನ್ನೆ ಕರೆಸುತ್ತಾ ಇದ್ದೆ" ಎಂದು ತನ್ನ ಮನ ಬಿಚ್ಚಿ ಮಾತನಾಡಿದ ತಿಮ್ಮಕ್ಕ "ಅವರ ವಿಷಯಾನೆ ತಿಳೀಲಿಲ್ಲವಲ್ಲಾ ಬಸವಯ್ಯ" ಎಂದಳು. ಈ ದಿನಾನೇ ಎಲ್ಲಾ ವಿಚಾರವನ್ನು ಬರೆದು ಹಾಕುತ್ತೇನೆ. ಯೋಚನೆ ಮಾಡಬೇಡಿ, ಅಳಿಯನಿಗೆ ಹೋಳಿಗೆ ಒಬ್ಬಟ್ಟು ಮಾಡಿ ಸರಸರನೆ, ನಾನೂ ಊಟಕ್ಕೆ ಬರುತ್ತೇನೆ" ಎಂದು ಹಾಸ್ಯವಾಗಿ ಮಾತನಾಡಿ ತಿಮ್ಮಕ್ಕನನ್ನು ನಗಿಸಿದ ತಿಮ್ಮಕ್ಕ "ಒಂದು ಕಾಗದ ಬರೀಯಪ್ಪಾ ರಂಗಪ್ಪನವರಿಗೆ" ಎಂದಳು. ತಾನು ಬರೆಯುವುದಾಗಿ ಹೇಳಿ ಬಸವಯ್ಯ ಮನೆಗೆಹೋಗಿ ರಂಗಯ್ಯನಿಗೆ ಒಂದು ಪತ್ರವನ್ನು ಬರೆದ "ಸ್ವಲ್ಪ ದಿನದಲ್ಲಿ ಹೊನ್ನಯ್ಯ ಖಾಯಿಲೆಯಿಂದ ತೀರಿಹೋದ. ಸಾಯುವ ಮುನ್ನ ನಿಮ್ಮ ಮತ್ತು ಲಿಂಗಮ್ಮನ ಮದುವೆಯನ್ನು ಮುರಿದುದಕ್ಕೆ ಇದೇ ಪ್ರಾಯಶ್ಚಿತ್ತವೆಂದು ಪಶ್ಚಾತಾಪ ಪಡುತ್ತಾ ಜೀವಬಿಟ್ಟ. ಲಿಂಗಮ್ಮನ ಗಂಡ ನಾಗಯ್ಯನು ತಾಯಿಯಿಂದ ಪ್ರೇರಿತನಾಗಿ ಬೇರೆ ಮದುವೆ ಮಾಡಿಕೊಳ್ಳಲು ಹವಣಿಸಿ

ಷ್ಟಾದನ್ನು ಶ್ರಮಪಟ್ಟು ತಪ್ಪಿಸಿದೆ ಲಿಂಗಮ್ಮ ಖಾಯಿಲೆಯಿಂದ ಗುಣವು ಖಳಾಗುತ್ತಿದ್ದಾಳೆ. ನಿಮ್ಮ ಹೆಸರೇ ಅವಳಿಗೆ ಔಷಧ. ಈ ಕಡೆ ಒಂದು ಸಾರಿ ಬನ್ನಿ. ನಿಮ್ಮ ವಿಚಾರ ತಿಳಿಯಲು ತಿಮ್ಮಕ್ಕ, ಲಿಂಗಮ್ಮ ಕುತೂಹಲ ರಾಗಿದ್ದಾರೆ''

ನಾಗಯ್ಯ ತೋಟಕ್ಕೆ ಹೋದ ಮಾವಿನ ಮರದ ನೆರಳಿನಲ್ಲಿ ಮಲ ಗಿದ್ದ ಕರಿಹೊನ್ನಮ್ಮನನ್ನು ಪ್ರೀತಿಯಿಂದ ಮಾತನಾಡಿಸಿ [illegible] ಇವನ ಕ್ಷೇಮ ಸಮಾಚಾರವನ್ನು ವಿಚಾರಿಸಿ "ಇಬ್ಬರೂ ಹೆಂಡಿರನ್ನು [illegible] ಹೋದುದು ಕಷ್ಟ ಮಗು ಇನ್ನೂ ಪ್ರಪಂಚ [illegible] ಎಂದರೆ ಏನು ತಿಳಿದಿದ್ದೀ, ಗಂಡಸಿಗಿಂತ ಹದಿನಾರು [illegible] ಸುಖಪಡುವುದರಾಗೆ ಈಗೇನೊ ಎಳೆ ರಕ್ತ [illegible] ಆಗ್ತಾ ಹೆಂಗಸನ್ನು ಬಾಳಿಸೋದು ಕಷ್ಟ [illegible] ವಳಾದರೆ ಸರಿ, ಇಲ್ಲದಿದ್ದರೆ ಮೂರಕ್ಕಾಸಿನ ಮಾನ [illegible] ಹೋದ ಮಾನ ಮನೇಲಿ ಬಂದೀತೆ?" ಎಂದು [illegible] ಜ್ಞಾನವನ್ನು ಅವನಿಗೆ ಬೋಧಿಸಿದಳು. ನಾಗಯ್ಯ [illegible] ನನಗೂ ಗ್ರಹಚಾರ ಹಿಡಿದಿತ್ತು'' ಎಂದು ಹೇಳಿ [illegible] ದಾಳಿಂಬೆ ಗಿಡಗಳಿಗೆ ಬಾವಿಯಿಂದ ಹರುಗೆಯಲ್ಲಿ [illegible] ತೊಡಗಿದ "ನಿಮ್ಮ ಮಾನ ಇವಾಗ [illegible] ಳಪ್ಪ'' ಎಂದು ಹೇಳುತ್ತಾ ಮಗನನ್ನು [illegible] ದಳು, ಹೊನ್ನಮ್ಮ

ನಾಗಯ್ಯನಿಗೆ ಬುದ್ಧಿ ಹೇಳಿ ಬಸವಯ್ಯ [illegible] ನಗರಕ್ಕೆ ಅವನನ್ನು ಕರೆದುಕೊಂಡು ಹೋದ ಸಮಾಚಾರವನ್ನು ಮಾದಯ್ಯ ನವಿಲೂರಿಗೆ ಹೋಗಿ ಮುಟ್ಟಿಸಿ ಬಂದಿದ್ದ. ತಾನು ಸಾಧಿಸಲು [illegible] ವಿಫಲವಾ ಯಿತೆಂದು ಬಸವಯ್ಯನ [illegible] ಎರಡನೆ ಮದುವೆ ಮಾಡಿ ಕೊಂಡಿರುವ ಕೆಲವು ಸಂಸಾರಗಳಲ್ಲಿ [illegible] ಕಟ್ಟಿರುವುದರ ನೆನ ವಾಗಿ, ತನ್ನ [illegible] ಸಾರಾ ದುದಕ್ಕೆ [illegible] ಸ್ವಲ್ಪ ಸಮ್ಮತಿ ಸಿಕ್ಕಿದಂತಾಯಿತು. ಆದ್ದರಿಂದ ಹಿಂದಿನಂತೆ ಕೆಲಸ ಕಾರ್ಯಗಳನ್ನು ಆಸಕ್ತಿಯಿಂದ ನಂಜಮ್ಮನ ಸಹಾಯ

ದಿಂದ ನಿರ್ವಹಿಸುತ್ತಿದ್ದಾಳೆ ಅಣ್ಣನಿಂದ ಈ ಸುದ್ದಿ ತಿಳಿದಮೇಲೆ ತಾನು ಯಾವುದೋ ಗಂಡಾಂತರದಿಂದ ಪಾರಾದಂತೆ ನಂಜಮ್ಮನಿಗೂ ಅನ್ನಿಸಿತು ಅವಳು ಮೊದಲಿನಂತೆ ಸ್ವೇಚ್ಛೆಯಾಗಿ ನೀರುತರುವುದು, ದನ ಮೇಯಿಸುವುದು, ಅಡುಗೆ ಮಾಡುವುದು—ಈ ಕೆಲಸಗಳಲ್ಲಿ ತೊಡಗುತ್ತಿದ್ದಳು ಮುತ್ತಣ್ಣ ನೆರೆಹೊರೆಯವರು ಸಿಕ್ಕಿದಾಗಲೆಲ್ಲಾ ತಾನೇ ಮಾತು ತಗೆದು ನಾಗಯ್ಯ ರಾಮನಗರಕ್ಕೆ ಹೋಗಿದ್ದಾರೆಂದು ಹೇಳಿ, ಎರಡನೆಯ ಮದುವೆ ಸಮಾಚಾರ ಸುಳ್ಳೆಂದು ಅವರೇ ತಿಳಿದುಕೊಳ್ಳುವಂತೆ ಮಾತನಾಡಿ ತನ್ನ ಮಾನ ಉಳಿಯಿತೆಂದು ಹಿಗ್ಗಿದ ನಾಗಯ್ಯ ರಾಮನಗರದಲ್ಲಿ ನಾಲ್ಕೈದು ದಿನಗಳಿದ್ದ ಲಿಂಗಮ್ಮ ಗಂಡನನ್ನು ತಾನಾಗಿ ಮಾತನಾಡಿಸಲೇ ಇಲ್ಲ ಒಂದು ದಿನ ಹೆಂಡತಿಯ ಬಳಿ ನಾಗಯ್ಯ ಹೋಗಿ "ನಾನು ಊರಿಗೆ ಹೋಗ್ತೇನೆ ಏನಾದರೂ ಔಷಧ ಬೇಕಾದರೆ ತಂದು ಕೊಟ್ಟೇನು" ಎಂದು ಮೆಲ್ಲನೆ ಹೇಳಿದ ಲಿಂಗಮ್ಮ ಮಾತನಾಡಲಿಲ್ಲ ಪುನಃ ಒತ್ತಿ ಕೇಳಿದ ಅವಳಿಗ ಗಂಡನ ಸಂಗಡ ಮುಖ ಕೊಟ್ಟು ಮಾತನಾಡಲು ಮನಸ್ಸು ಒಲ್ಲದು. ಬೇರೆ ಕಡೆ ಮುಖತಿರುಹಿಕೊಂಡಳು ಕಗ್ಗತ್ತಲಲ್ಲಿ ಮಿಂಚಿನ ಮಿಂಚುಹುಳುವಿನಂತೆ ಲಿಂಗಮ್ಮನ ಹೃದಯದಲ್ಲಿ ಆಶಾಕಿರಣವು ಮಿಂಚಿದಂತಾಯಿತು, ಗಂಡನ ಸವಿಮಾತು ಕೇಳಿ ಆದರದು ಮಿಂಚುಹುಳುವಿನಷ್ಟೆ ಬೆಳಕನ್ನುಂಟುಮಾಡಿತು ಕತ್ತಲಕಮರಿಯಂತಹದು ತನ್ನ ಬಾಳ ಹಾದಿಎಂದು ಅರಿತಳು ಆಕೆ ಬಾಳ ಬೆಳಕು ಕಾಣದೆ ಕಾಳಸರ್ಪನಂತೆ ಹೆಡೆಯೆತ್ತಿ, ಚಿಮ್ಮಿ ಬರುತ್ತಿದ್ದ ಬಿಸಿಉಸಿರ ಮಾತುಗಳನ್ನು ಆಡಲೇ ಎನ್ನಿಸಿತು "ಆಡಿ ತಾನೆ ಏನು?" ಎಂದು ಉದ್ವೇಗದ ಉಸಿರನ್ನು ಅದುಮಿ ಸಣ್ಣಧ್ವನಿಯಲ್ಲಿ ಆಕೆ ಹೇಳಿದಳು—"ಯಾವ ಔಷಧವೂ ಬೇಕಿಲ್ಲ" ಹೃದಯ ತುಂಬಿ ಹೇಳಲಿಲ್ಲ ಗಂಡನಿಗೆ, ತನ್ನ ಭವಿಷ್ಯದ ಭೀಕರತೆಯನ್ನು ಕಂಡಂತಾಗಿ ಹಾಗಂದವಳು ಗಂಡನ ಮುಖವನ್ನೇ ತಲೆ ಎತ್ತಿ ನೋಡಲಾಗದ ಆ ಹೆಣ್ಣುಜೀವದಲ್ಲಿ ರುದ್ರಶ್ಮಶಾನದ ಮೌನವೇ ತುಂಬಿತ್ತು. ತನ್ನ ಮೇಲೆ ಸಂಪೂರ್ಣವಾಗಿ ಮನಸ್ಸು ಕೆಡಿಸಿಕೊಂಡಿರುವ ಹೆಂಡತಿಯ ಬಾಯಿಂದ ಒಂದು ಮಾತಾದರೂ ಬಂದಿತಲ್ಲ ಎಂಬ ಸಮಾಧಾನ ನಾಗಯ್ಯನಿಗೆ ಇನ್ನೂ ಹೆಂಡತಿಯ ಮನಸ್ಸು ಸಮಾಧಾನ ಹೊಂದಲಿಲ್ಲವಲ್ಲಾ

ಎಂಬ ಚಿಂತೆ ಒಂದು ಕಡೆ, ತನ್ನ ತಪ್ಪನ್ನು ಹೇಗೆ ಹೆಂಡತಿಗೆ ಹೇಳಲಿ? ಎಂಬ ಚಿಂತೆಯಿಂದಲೇ ಶಿವಣ್ಣನನ್ನು ಕರೆದು "ನಾನು ಊರಿಗೆ ಹೋಗ್ತೇನೆ ಶಿವು" ಎಂದ ಶಿವಣ್ಣನಿಗೂ ಮಾವನಲ್ಲಿ ಉದಾಸೀನ ಭಾವ ಬೆಳದಿದ ಮನೆಗೆ ಬಂದ ಮಾವನ ಸಂಗಡ ಮಾತನಾಡದಿರ ಪ್ರಸಂಗವನ ಎಳೆ ಮನಸ್ಸಿಗೆ ಒಪ್ಪದ "ನಾಳೆ ಹೋದರೆ ಆಗದ "ಎಂದ ನಾಗಯ್ಯ ಬಹಳ ದಿನವಾಯಿತೆಂದು ಹೇಳಿ ಹೊರಟನು ಊರನ್ನು ... ... ಎಂದಿನಂತೆ ತನ್ನ ಕಲಸ ಕಾರ್ಯಗಳಲ್ಲಿ ಪ್ರವೃತ್ತನಾದನು ... ಮಾರ್ಗವಾಗಿ ಬಂದ ಮಗನನ್ನು ಏನು, ಎತ್ತ ... ... ಮುತ್ತಣ್ಣ ತೆಪ್ಪನಾಗಿಬಿಟ್ಟ

ಪತ್ರವನ್ನು ಬರದಮೇಲೆ ಬಸವಯ್ಯ ರಂಗಯ್ಯನಿಂದ ಉತ್ತರ ದಿನೇ ದಿನೇ ನಿರೀಕ್ಷಿಸಿ ಉತ್ತರ ಬಾರದ ಆಶಾಭಂಗನಾದನು ... ಅವರು ಸರಕಾರಿ ನೌಕರಿಗೇನಾದರೂ ಸೇರಿಕೊಂಡು ಯಾವ ಊರಿಗಾದರೂ ಹೊರಟುಹೋದರೇನೋ ತಿಳಿಯುದಲ್ಲಾ ಎಂದು ಯೋಚಿಸಿ, ಸಮಾಧಾನ ವನ್ನು ತಂದುಕೊಂಡ

ರಾಮನಗರದಿಂದ ರಂಗಯ್ಯನಿಗೆ ಬಂದ ಕಾಗದವನ್ನು ಹಳ್ಳಿಯ ಅಂಚೆಯವನು ತಾನು ಖುದ್ದಾಗಿ ರಂಗಯ್ಯನ ಊರಿಗೆ ಹೋಗಿ ತಲುಪಿಸು ವುದರ ಬದಲು ಆ ಹಳ್ಳಿಯ ಕಡೆಯಿಂದ ಬಂದಿದ್ದ ಯಾರ ಕೈಯಲ್ಲೋ 'ಈ ಕಾಗದವನ್ನು ರಂಗಯ್ಯನವರಿಗೆ ತಲುಪಿಸಿಬಿಡಿ ಹೇಗೂ ನೀವು ಆ ಊರಿನ ಮುಖಾಂತರವೇ ಹೋಗುತ್ತೀರಿ' ಎಂದು ಹೇಳಿ ಕೊಟ್ಟಿದ್ದ. ಆ ದಾರಿಹೋಕನ ಜೇಬಿನಲ್ಲೇ ಸೇರಿಹೋದ ಆ ಪತ್ರ ರಂಗಯ್ಯನನ್ನು ಮುಟ್ಟಲೇ ಇಲ್ಲ ತಾನು ಕಾಲೇಜು ಮೆಟ್ಟಿಲನ್ನು ಹತ್ತಿ ಇರುವ ಮನುಷ್ಯ. ಯಾವುದಾದರೊಂದು ಸರಕಾರಿ ನೌಕರಿಯನ್ನು ಹಿಡಿದು ಎಲ್ಲ ರಂತೆ ಸುಖವಾಗಿ ಜೀವನವನ್ನೇಕೆ ಸಾಗಿಸಬಾರದೆಂದು ರಂಗಯ್ಯ ಯೋಚಿಸಿ ಕೆಲವು ಕಲಸಗಳಿಗೆ ಅರ್ಜಿಯನ್ನು ಹಾಕಿಕೊಂಡಿದ್ದ. ಕೆಲಸ ಸಿಕ್ಕೀತೆಂಬ ಆಶೆಯು ಹೊಳೆಯಲ್ಲಿ ತೇಲುತ್ತಿದ್ದಂತೆ ಯಾವ ಕೆಲಸವೂ ದೊರಕದೆ ವ್ಯವಸಾಯದ ಕಡೆ ಗಮನ ಕೊಟ್ಟ ಸಕಾಲದಲ್ಲಿ ಗದ್ದೆ ಯನ್ನು ಉಳುಮೆ ಮಾಡಿಸುವುದು, ಬತ್ತದ ಸಸಿಗಳನ್ನು ಒಟ್ಟಿಹಾಕಿಸಿ

ಗದ್ದೆಯನ್ನು ಉತ್ತು ಹದ ಮಾಡಿಸುವುದು, ನಂತರ ಬತ್ತದ ಸಸಿಗಳನ್ನು ನಾಟಿ ಹಾಕಿಸುವುದು—ಈ ಕೆಲಸಗಳಲ್ಲಿ ತೊಡಗಿದ. ಒಂದು ದಿನ ತನಗಿದ್ದ ಒಂದು ಎಕರೆ ಗದ್ದೆಗೆ ಆಳುಗಳಿಂದ ನಾಟಿ ನಡಿಸಿ ಮನೆಗೆ ಬಂದ ಇದ್ದಕ್ಕಿದಂತೆ ಒಂದು ಲಕೋಟೆ ಬಂದಿತ್ತು. ಗಂಡನು ಮನೆಗೆ ಬರಬರುತ್ತಿದ್ದಾಗಲೇ ಲಕ್ಷ್ಮಿ ಅದನ್ನು ಕೈಗೆ ಕೊಟ್ಟಳು ಆಕೆ ಕೊಡುತ್ತಿದ್ದಾಗಲೇ ಇದು ರಾಮನಗರದಿಂದ ಬಂದಿರಬೇಕೆಂದು ತಟ್ಟನೆ ಅವನ ಮನಸ್ಸಿಗೆ ಹೊಳೆದಂತಾಗಿ, ಎಲ್ಲಿಲ್ಲದ ಅವಸರಆತುರದಿಂದ, ಅರಳಿದಕಣ್ಣುಗಳಿಂದ ನೋಡಿದ ಸಿರಾಶೆಯಾಯಿತು ಅದನ್ನು ಒಡೆದು ನೋಡಿದರೆ ಶಿವಮೊಗ್ಗೆಯಲ್ಲಿ ತಿಂಗಳಿಗೆ ೨೫ ರೂಪಾಯಿನ ಸಂಬಳದ ನೌಕರಿ ಅದನ್ನು ಹಾಗೆಯೇ ಜೇಬಿಗೆ ಹಾಕಿಕೊಂಡು ಕೈಕಾಲು, ಮುಖ ತೊಳೆದು, ಊಟ ಮಾಡಿ ಹೊರ ಜಗುಲಿಗೆ ಬಂದು ಕುಳಿತ ಲಕ್ಷ್ಮಿಗೆ ಅದೇನೆಂದು ತಿಳಿಯಲು ಆಸೆ, ಕುತೂಹಲ ಒಂದೇ ಬಾರಿಗೆ ಅದೇನೆಂದು ಕೇಳಲು ಅಳುಕಿ ಗಂಡನ ಬಳಿ ಮೆಲ್ಲನೆ ಒಂದೆರಡು ಸಾರಿ ಅತ್ತ ಇತ್ತ ಅಡ್ಡಾಡಿ ಕಂಬವನ್ನು ಒರಗಿ ನಿಂತಳು ಅವಳ ಇಂಗಿತವನ್ನು ಅರಿತು ರಂಗಯ್ಯನೇ ಹೇಳಿದ

'ಶಿವಮೊಗ್ಗೆಗೆ ಹೋಗಬೇಕಾಗಿದೆ ಸುಮಾರು ಮನ್ನೂರು ಮೈಲಿ ದೂರ ಒಂದು ೨೦ ರೂಪಾಯಿನ ಉಪಾಧ್ಯಾಯನ ಕೆಲಸ ಸಿಕ್ಕಿದೆ' ಎಂದ "ಅಷ್ಟು ದೂರ!" ಎಂದು ಹೇಳುತ್ತಾ ಬೆದರಿಹೋದವಳಂತೆ ಮುಖ ಮಾಡಿಕೊಂಡ ಲಕ್ಷ್ಮಿಗೆ "ನೀನು ಮೊದಲ ಊಟ ಮಾಡಿ ಬಾ, ಮಧ್ಯಾಹ್ನ ತಿರುಗಿದೆ" ಎಂದ ರಂಗಯ್ಯ. ಲಕ್ಷ್ಮಿಗೆ ಎಲ್ಲಿಲ್ಲದ ಚಿಂತೆ ಹಿಡಿಯಿತು, ಕಾಣದ ಊರಿಗೆ ೨೫ ರೂಪಾಯಿಗೋಸ್ಕರ ಹೋಗಿ ಅಲ್ಲಿ ಅಲೆಯಬೇಕು ಎಂದು ತಿಂಗಳಿಗೆ ೨೫ ರೂಪಾಯಿಗೆ ಗಂಡ ಹೆಂಡಿರ ಹೊಟ್ಟೆ ತುಂಬುತ್ತದೆಯೆ?—ಹೋಗುವುದೆ? ಬಿಡುವುದೆ? ಎಂದು ಅವನ ಮನಸ್ಸು ತೂಗುಯ್ಯಾಲೆಗೆ ಸಿಕ್ಕಿತ ಊಟ ಮುಗಿಸಿ ಬಂದ ಲಕ್ಷ್ಮಿ ತನ್ನ ಅಭಿಪ್ರಾಯವನ್ನು ಹೇಳಿಯೇ ಬಿಟ್ಟಳು 'ಹುಟ್ಟಿದ ಊರು ತೊರೆದು ಹೊಟ್ಟೆ ಹೊರೆಯಲು ಅಷ್ಟು ದೂರ ಏಕೆ ಹೋಗಬೇಕು? ಇಲ್ಲಿ ಮನೆಯಲ್ಲಿ ಅಮ್ಮನವರಿಗೂ ಯಾರೂ ಇಲ್ಲ.' ಎಂದು.

“ಇಷ್ಟು ಓದಿ ಮಕ್ಕಳಿಗೆ ವಿದ್ಯಾದಾನ ಮಾಡಿದರೆ ಮನಸ್ಸಿಗಾದರೂ ಒಂದು ನೆಮ್ಮದಿಯಲ್ಲವೆ? ಹೇಗೂ ಆಳುಗಳಿಂದ ಅವ್ವ ಕೆಲಸ ನಡೆಸಿ ಕೊಂಡು ಹೋಗುತ್ತಾಳೆ”

“ಸಂಬಳ ತಕ್ಕೊಂಡು ವಿದ್ಯೆ ಹೇಳಿದರೆ ಏನು ಫಲ ಬಂತು? ನಮ್ಮೂರಿನ ಮಕ್ಕಳಿಗೇ ಒಂದಷ್ಟು ವಿದ್ಯೆ ಕಲಿಸಿ, ನಮಗಿರುವ ಹೊಲ ಗದ್ದೆಯನ್ನೇ ಚೆನ್ನಾಗಿ ಉತ್ತು ಗೊಬ್ಬರ ಗೋಡು ಹಾಕಿ ಬಿತ್ತಿದರ ಭೂಮಿ ತಾಯಿ ನಮ್ಮ ಹೊಟ್ಟೆಗೂ ಬಟ್ಟೆಗೂ ಕಡಿಮೆ ಮಾಡೊಲ್ಲ, ಮನಸ್ಸಿಗೆ ಸಮಾಧಾನವೂ ಇರುತ್ತದ”

ಹೆಂಡತಿಯ ಜಾಣ್ಮೆಯನ್ನೂ ವಿವೇಕವನ್ನೂ ಮೆಚ್ಚಿ ರಂಗಯ್ಯ ಹುಸಿ ನಗೆಯನ್ನು ಬೀರುತ್ತಾ ಹೇಳಿದ “ನೀನ ಹುಚ್ಚುತನ ಸರಿಯಾಗಿ ಕಾಣುತ್ತದೆ ಹುಟ್ಟಿದ ಊರನ್ನು ತೊರೆದು ಹೋಗಲು ನನಗೆ ಮನಸ್ಸಿಲ್ಲ”

ಮೇಯಿಸಲು ಅಟ್ಟಿಕೊಂಡು ಹೋಗಿದ್ದ ದನಗಳನ್ನು ಹಿಡಿದು ಸಿದ್ದವ್ವ ಮನೆಗೆ ಬಂದಳು ನಡೆದ ಸಮಾಚಾರವನ್ನು ಸೊಸೆಯಿಂದ ತಿಳಿದಳು ಸೊಸೆ ಹೇಳಿದ ಮಾತನ್ನೇ ತಾನೂ ಮಗನಿಗೆ ಹೇಳಿದಳು

“ಮಗೂ, ಕಾಣದ ದೇಶಕ್ಕೆ ಏಕೆ ಹೊಟ್ಟೆಗಾಗಿ ಹೋಗ್ಬೇಕ? ಹೊಲದಾರದಂತಹ ಹೊಲಮನೆಯಲ್ಲಿ ಸಿಕ್ಕಿದ್ದುಂಡರ ಏನೊ ಒಂದು ವೇಳೆ ಹೋದರೂ ಚಿಂತಿಲ್ಲ ನನಗೂ ವಯಸ್ಸಾಗ್ತಾ ಬಂತು ಕಣ್ಣೆದುರು ಮಗ ಸೊಸ ಇದ್ದರ ಅದೇ ಒಂದು ಸಂತೋಷ ಕಣಪ್ಪಾ ಹುಟ್ಟಿದ ಊರಾಗೆ ಮಕ್ಕಳಿಗೆ ವಿದ್ಯೆ ಕಲಿಸಿದರೆ ಅವರು ದೊಡ್ಡೋರಾದಾಗ ನಿನ್ನನ್ನ ನೆನಕೋತಾರೆ” ಎಂದು ಬೋಧಿಸಿದಳು.

ಹತ್ತು ಹಟ್ಟಿಯಿಂದ ಬರುತ್ತಿದ್ದ ಆ ಪ್ರೀತಿ ತುಂಬಿದ ಮಾತುಗಳಿಂದ ರಂಗಯ್ಯ ಸರಕಾರಿ ನೌಕರಿಗೆ ಸೇರಬೇಕೆಂಬ ಹಂಬಲವನ್ನೇ ಬಿಟ್ಟ ಸರಿ, ಮೂರು ದಿನಗಳೊಳಗೆ ಊರಿನ ಕೆಲವು ಮಕ್ಕಳನ್ನು ತನ್ನ ಮನೆಗೆ ಸೇರಿಸಿಕೊಂಡು ಬಿಡುವಾದಾಗ ದಿನವೂ ಅಕ್ಷರಾಭ್ಯಾಸ ಮಾಡಿಸುತ್ತಿದ್ದ ಮಕ್ಕಳ ಮುಗ್ಧ ನಡೆ ನುಡಿ ಗಳಲ್ಲಿ ಆನಂದವನ್ನು ಕಂಡು ಅನುಭವಿಸುತ್ತಿದ್ದಾನೆ ಮನೆಗೆ ಬರುತ್ತಿದ್ದ ಮಕ್ಕಳಿಗೆ ತಲೆಯನ್ನು ಬಾಚುವುದು, ಅವರಿಗೆ ಬಾಯಾರಿಕೆಯಾದಾಗ ನೀರು ಕುಡಿಸುವುದು-ಹೀಗೆ ಲಕ್ಷ್ಮಿ ಮಕ್ಕಳನ್ನು ಮಾತೃಪ್ರೇಮದಿಂದ ಕಾಣು

ತ್ತಿದ್ದಳು ಮಕ್ಕಳು ಆಡುವಾಗ, ಮಾತಾಡುವಾಗ ಲಕ್ಷ್ಮಿ ಬಿಟ್ಟ ಕಣ್ಣು ಗಳಿಂದ ಅವರನ್ನೇ ನೋಡುತ್ತಿದ್ದಳು ಅವರ ಆನಂದದಲ್ಲಿ ಅವಳ ಮನಸ್ಸು ತಲ್ಲೀನವಾಗುತ್ತಿತ್ತು. ತಾನು ಯಾವಾಗ ತಾಯಿಯಾದೇನು ಎಂಬ ಆಶಯ ಅಲೆಯಲ್ಲಿ ತೇಲುತ್ತಿದ್ದಳು. ಇದರಿಂದ ಮಕ್ಕಳ ತಾಯಿ ತಂದೆ ಯರ ಪ್ರೀತಿಗಲ್ಲದೆ ಊರಿನ ಜನರ ಪ್ರೀತಿಗೂ ಗಂಡ ಹೆಂಡಿರಿಬ್ಬರೂ ಪಾತ್ರರಾದರು ರಂಗಯ್ಯನನ್ನು ಹೆಸರು ಹಿಡಿದು ಕೂಗುತ್ತಿದ್ದ ಊರಿನ ಜನರು ಇನ್ನು ಮುಂದ "ಮೇಸ್ತ್ರಿ" ಎಂದು ಬಾಯಿ ತುಂಬಾ ಕರೆಯು ತ್ತಿದ್ದಾರೆ ಅವನ ಹೊಲಗದ್ದೆಗಳಿಗೆ ಉಳುಮೆ ಮಾಡಬೇಕಾದಾಗ ಊರಿನ ಜನರು ತಾವಾಗಿಯೇ ಅವನಲ್ಲಿಗೆ ಬಂದು "ಮೇಸ್ತ್ರಿ, ನಮ್ಮ ಹೇರು ಈ ದಿನ ಬರುತ್ತದ ಉಳುಮೆಗೆ ನಮ್ಮ ಹುಡುಗ ಗದ್ದೆ ನಾಟಿ ಹಾಕೋಕೆ ಬರ್‍ತಾನೆ''—ಎಂದು ತಾವಾಗಿಯೇ ತುಂಬಿದ ಮನದಿಂದ ಮುಂದೆ ಬಂದು ಅವನ ಕೆಲಸದಲ್ಲಿ ನೆರವಾಗುತ್ತಿದ್ದರು

ಮಗ ಹೋಗಿ ಮೂರು ತಿಂಗಳು ಕಳೆಯುವಷ್ಟರಲ್ಲಿ ಹೊನ್ನಮ್ಮನೂ ಖಾಯಿಲೆಯಿಂದ ನರಳಿ ಮೃತಪಟ್ಟಳು ಸಂಸಾರದ ಹೊರೆಯೆಲ್ಲ ತಿಮ್ಮ ಕ್ಕನ ಮೇಲೆ ಬಿತ್ತು ತನ್ನ ಗಂಡನು ಊರಿನ ಜನರಿಗೆ ಮಾಡುತ್ತಿದ್ದ ಅನ್ಯಾಯದ ದೆಸೆಯಿಂದ ಜನರಾರೂ ತನ್ನ ಕೆಲಸಕಾರ್ಯದಲ್ಲಿ ನೆರವಾಗು ತ್ತಿಲ್ಲವೆಂಬುದನ್ನು ಆಕೆ ಅರಿತಳು ತಾಯಿಯೂ ಮಗಳೂ ಸುಗುಣ ಗಳಿಂದ ಜನರ ವಿಶ್ವಾಸವನ್ನು ಸಂಪಾದಿಸತೊಡಗಿದರು ಬಸವಯ್ಯ ಇವರ ಕಷ್ಟ ಸುಖಕ್ಕೆ ಭಾಗಿಯಾಗುತ್ತಿದ್ದ. ಶಿವಣ್ಣನಿಗೆ ಸ್ವತಃ ಆಳುಗಳ ಮೇಲೆ ನಿಂತು ಕೆಲಸ ಮಾಡಿಸಲು ಇನ್ನೂ ಬುದ್ಧಿ ಸಾಲದು. ಉಳಿದಿ ರುವ ಒಬ್ಬ ಹೆಣ್ಣು ಮಗಳು ಗಿರಿಜೆ ಮದುವೆಗೆ ಬಂದಿದ್ದಾಳೆ. ಇಷ್ಟು ಸಂಸಾರವನ್ನು ನೀಸಿಕೊಂಡು ಹೋಗಬೇಕಲ್ಲ ಎಂದು ತಿಮ್ಮಕ್ಕನಿಗೆ ಚಿಂತೆ. ಲಿಂಗಮ್ಮ ದಿನೇ ದಿನೇ ರೋಗದಿಂದ ಗುಣಮುಖ ಹೊಂದುತ್ತಿದ್ದಳು

ರಂಗಯ್ಯನ ಮೇಲಿದ್ದ ಪ್ರೇಮ ತಿಮ್ಮಕ್ಕನನ್ನೂ ಲಿಂಗಿಯನ್ನೂ ಬಾಧಿಸತೊಡಗಿತು ಆತನನ್ನು ನೋಡಬೇಕೆಂಬ ಹಂಬಲವು ವಯಸ್ಸಾ ದಂತೆಲ್ಲಾ ಲಿಂಗಮ್ಮನಿಗೆ ಹೆಚ್ಚಾಯಿತು. ತನ್ನ ಮನದಾಸೆಯನ್ನು ಮನ ಬಿಚ್ಚಿ ಯಾರ ಸಂಗಡಲೂ ಹೇಳುತ್ತಿರಲಿಲ್ಲ ತಾನು ಮದುವೆಯಾದವಳು.

ಗಂಡ, ಅತ್ತೆಮಾವಂದಿರು ತಿಳಿದರೆ ಎಲ್ಲಿ ತನಗೆ ಅಪಕೀರ್ತಿ ಬಂದೀತೋ ಎಂಬ ಅಂಜಿಕೆಯಿಂದ ತನ್ನ ಬಾಳ ಗೆಳೆಯನಾಗಲಾರದಹೋದ ರಂಗಯ್ಯನ ವಿಚಾರವನ್ನು ಗೋಪ್ಯವಾಗಿಯೇ ಮನದಲ್ಲಿ ಚಿಂತಿಸುತಿದ್ದಳು. ತಾಯಿಗೆ ಈ ಕುತೂಹಲವಿದ್ದರೂ ಆತನನ್ನು ನೋಡಿದರೆ ತನ್ನ ಹೃದಯಾಂತರಾಳದಲ್ಲಿ ಬೂದಿಮುಚ್ಚಿದ ಕೆಂಡದಂತೆ ಅಡಗಿರುವ ದುಃಖವು ಇಮ್ಮಡಿಯಾಗುವುದೆಂದು ಅರಿತಿದ್ದಳು. ಆದರೂ ಒಮ್ಮೆ ಯಾದರೂ ನೋಡಬೇಕೆಂಬ ಆಸೆ ಸ್ವಲ್ಪವೂ ಮಾಸಿರಲಿಲ್ಲ.

ಎಲ್ಲಿ ನೋಡಬೇಕು? ಕರೆಸುವರಾರು? ಅವರು ಬರುವುದು ಬಿಟವೆ? ಎಂಬೀ ಪ್ರಶ್ನೆಗಳು ಮನಸ್ಸಿನಲ್ಲಿ ಹೆಡೆ ಎತ್ತಿ ನಿಲ್ಲುತ್ತಿದ್ದುವು. 'ಅವರನ್ನು ಈಗ ನೋಡಿದರೆ ಏನು ಬಂತು? ಕತೆಯೆಲ್ಲಾ ಮುಗಿದು ಹೋಯಿತು' ಎಂದು ತುಸು ಸಮಾಧಾನ ಹೊಂದುತ್ತಿದ್ದಳು. ಮಾರನೆಯ ವರ್ಷ ರಥಸಪ್ತಮಿಯ ದಿನ ರಂಗಯ್ಯ ತನ್ನ ಸ್ನೇಹಿತರ ಪ್ರೇರಣೆಯಿಂದ ರಾಮನಗರಕ್ಕೆ ಹತ್ತು ಮೈಲಿ ದೂರವಿದ್ದ ಒಂದು ಯಾತ್ರಾಸ್ಥಳಕ್ಕೆ ದೇವರ ದರ್ಶನಕ್ಕೆಂದು ಅವರ ಜೊತೆಯಲ್ಲಿ ಹೊರಟ. ರಂಗಯ್ಯ ಬರುತ್ತಾ ಹಾದಿಯಲ್ಲ ಯೋಚಿಸುತ್ತಲೇ ಇದ್ದ. ಲಿಂಗಮ್ಮ ತನ್ನ ಗಂಡನ ಜೊತೆಯಲ್ಲಿ ಆ ಯಾತ್ರಾಸ್ಥಳಕ್ಕೆ ಬಂದರೂ ಬರಬಹುದು. ಅವಳನ್ನು ನೋಡುವುದರಿಂದ ತನ್ನ ಅಂತರಂಗದ ಕುದಿ ಇನ್ನೂ ಉಕ್ಕುತ್ತದೆಂದು ತಿಳಿದು ಮನಸ್ಸು ಅಲ್ಲಿಗೆಹೋಗಲು ಹಿಂಜರಿಯುತ್ತಿತ್ತು. ಸ್ನೇಹಿತರ ಸಂಗಡ ಹೊರಟಿದ್ದಾನೆ, ಹಿಂದಿರುಗುವಂತಿಲ್ಲ.

ಆ ದಿನ ದೇವಸ್ಥಾನಕ್ಕೆ ದೂರದ ಊರುಗಳಿಂದಲೂ ಪಕ್ಕದ ಹಳ್ಳಿಗಳಿಂದಲೂ ಜನರು ಗುಂಪು ಗುಂಪಾಗಿ ಬರುತ್ತಿದ್ದರು. ಅದೇ ದಿನ ತಿಮ್ಮಕ್ಕ ಮಗಳನ್ನು ಕರೆದು "ಲಿಂಗಮ್ಮ, ಈ ದಿನ ದೇವಸ್ಥಾನಕ್ಕ ಬಹಳ ದೂರದಿಂದಲೂ ಜನರು ಹೋಗ್ತಾರೆ. ರಾಮದೇವರ ಉತ್ಸವ, ಹೂವಿನ ತೇರು ನೋಡೋಕೆ ಎರಡು ಕಣ್ಣೂ ಸಾಲದು. ನಿಮ್ಮ ಅಪ್ಪ ನಮ್ಮನ್ನು ಎಲ್ಲಿಗೂ ಕಳಿಸುತ್ತಿರಲಿಲ್ಲ. ನಿಮ್ಮಪ್ಪನಿಗಂತೂ ದೇವರು ದಿಂಡರು ಯಾರೂ ಬೇಕಾಗಿರಲಿಲ್ಲ. ಈ ದಿನವಾದರೂ ನಾವು ದೇವಸ್ಥಾನಕ್ಕೆ ಹೋಗಿ ಒಂದು ಕಾಸಿನ ಧೂಪ ಹಾಕಿ ಸಂಜೆ ಹೊತ್ತಿಗೆ ಊರಿಗೆ ಬಂದು ಬಿಡುವ. ಇನ್ನು ಮುಂದಾದರೂ ದೇವರು ನಿನಗೆ ಒಳ್ಳೇದು ಮಾಡಲಿ. ಸ್ನಾನ ಮಾಡಿಕೊ,

ಹೋಗುವ '' ಎಂದಳು

"ದೇವರು ಇದ್ದಾನೇನವ್ವ? ಇದ್ದರೇಕೆ ನಮಗೆ ಈ ಕಷ್ಟ ಬರು ತ್ತಿತ್ತು? ನೀನೆ ಹೋಗವ್ವ" ಎಂದಳು ಲಿಂಗಮ್ಮ

" ದೇವರ ವಿಚಾರದಲ್ಲಿ ಆ ರೀತಿ ಮಾತಾಡಿದವರುಂಟೆ? ಏಳು ಹೊತ್ತಾಗ್ತದ''

"ದೇವರಿದ್ದರೆ ಏನು? ಬೇಕಾದರೆ ನನಗೆ ತೊಂದರೆ ಕೊಡಲೇಳು" ಈಗಿನ ಕಷ್ಟಕ್ಕಿಂತ ಇನ್ನೇನು ಬೇಕು ?

ಹ್ಯಾಗೂ ಮೈಯಿಗೆ ಗುಣವಾಗಿದೆ ಎರಡು ದಿನ ದೇವರು ಕಷ್ಟಕೊ ಡ್ತಾನೆ ಮನುಷ್ಯನಿಗೆ ಕಷ್ಟಬರದೆ ಮರಕ್ಕೆ ಬರುತ್ತದೆಯೆ ? ಏಳು"

"ಆಗಲವ್ವ, ನನಗೇನೂ ಇಷ್ಟವಿಲ್ಲ. ನಿನ್ನ ಬಲಾತ್ಕಾರಕ್ಕಾಗಿ ಹೊರ ಡುತ್ತೀನ'' ಎಂದು ಲಿಂಗಮ್ಮ ಶೀಘ್ರತೆಯಾಗಿ ಸ್ನಾನ ಮುಗಿಸಿಕೊಂಡು, ಸಾಧಾರಣವಾದ ಉಡುಗೊರೆಯನ್ನುಟ್ಟು ಹೊರಟಳು ಇವರಿಬ್ಬರೂ ಬರುವ ಹೊತ್ತಿಗೆ ಜನಸಂದಣಿ ಅಪಾರವಾಗಿ, ದೇವಸ್ಥಾನದ ಕೈನಾಲೆಯಲ್ಲಿ ಜನ ನಿಲ್ಲುವುದಕ್ಕೂ ಸ್ಥಳವಿರಲಿಲ್ಲ ಜನರ ನೂಕುನುಗ್ಗಲು. ದೇವಸ್ಥಾನದ ಒಳಗಡೆ ಹೋಗುವವರು ಹೋಗುತ್ತಿದ್ದರು, ಬರುವವರು ಬರುತ್ತಲೇ ಇದ್ದರು –ಎಲ್ಲಿನೋಡಿದರೂ ಜನರ ಗುಜುಗಪ್ಪು. ನೂರಾರು ಸ್ತ್ರೀಯರು ರಥೋತ್ಸವವನ್ನು ಎವೆ ಇಕ್ಕದೆ ನೋಡಿ, ತಣಿದು ರಾಮದೇವರಿಗೆ ಕೈಜೋಡಿಸಿ ಮುಗಿಯುತ್ತಿದ್ದಾರೆ. ಲಿಂಗಮ್ಮ ಒಂದು ತಟ್ಟೆಯಲ್ಲಿ ಗಂಧ, ಚಂದನ ಫಲಪುಷ್ಪಗಳನ್ನು ಸಿದ್ಧಮಾಡಿಕೊಂಡಳು. ಜನರ ಗುಂಪಿನ ಮಧ್ಯೆ ಮೆಲ್ಲಗೆ ದಾರಿ ಬಿಡಿಸಿಕೊಂಡು ತಾಯಿಯೂ ಮಗಳೂ ಪೂಜೆಮಾ ಡಿಸಲು ಗರ್ಭಾಂಕಣದ ಎದುರು ಬಂದು ನಿಂತರು ಲಿಂಗಮ್ಮ ತಟ್ಟೆ ಯನ್ನು ಹಿಡಿದುಕೊಂಡು ತಾಯಿಯ ಪಕ್ಕದಲ್ಲಿ ನಿಂತು, ಜನರ ಗುಂಪಿನ ಮುಖಾಂತರ ಸ್ವಲ್ಪ ಕಾಣುತ್ತಿದ್ದ ದೇವರ ವಿಗ್ರಹವನ್ನು ಮೆಟ್ಟುಗಾಲುಗ ಳಿಂದ ನಿಮಿರಿ ನಿಮಿರಿ ನೋಡುತ್ತಾ ಮೈಮರೆತಿದ್ದಳು ಅದೇ ಸಮಯಕ್ಕೆ ರಂಗಯ್ಯನೂ ಅವನ ಸ್ನೇಹಿತರೂ ಬಂದರು ಪೂಜೆಗೆ ಬೇಕಾದ ಫಲಪುಷ್ಪ ಗಳನ್ನು ತೆಗೆದುಕೊಂಡು, ಕಿಕ್ಕಿರಿದ ಜನರ ಮಧ್ಯೆ ದಾರಿ ಮಾಡಿಕೊಂಡು ಗರ್ಭಾಂಕಣದ ಕಡೆಗೆ ನುಗ್ಗಿದರು. ಅವರ ದೃಷ್ಟಿಯು ದೇವರ ವಿಗ್ರಹ

ವನ್ನು ನೋಡುವುದರಲ್ಲಿತ್ತು. ಹೀಗೆ ನುಗ್ಗಿ ಹೋಗುತ್ತಿದ್ದಾಗ ರಂಗಯ್ಯನ ಮೈ ಲಿಂಗಿಯು ಹಿಡಿದಿದ್ದ ತಟ್ಟೆಗೆ ತಗುಲಿ ಹಣ್ಣುಗಳು ಬಿದ್ದು ಹೋದುವು. ಲಿಂಗಮ್ಮ ಸಿಟ್ಟಿನಿಂದ 'ಯಾರವನು?' ಎಂದು ಮುಖ ನೋಡಿದಳು. ಆಕೆಯ ಅಂತರಾತ್ಮ ಹೊಡೆದುಕೊಳ್ಳಲಾರಂಭಿಸಿತು. ಮೈ ಮುಖದ ಮೇಲೆಲ್ಲಾ ಬೆವರು ಚಿಮ್ಮಿತು. ರಂಗಯ್ಯನ ಮುಖವನ್ನೇ ದೃಷ್ಟಿಸಿ ನೋಡಿದಳು. ನಾನು ಯಾರು, ಇರುವುದೆಲ್ಲಿ? ದೇವಸ್ಥಾನ, ಜನರ ಗಜುಗುಂಪು ಎಲ್ಲಾ ಸಂಪೂರ್ಣವಾಗಿ ಮರೆತು ಹೋಯಿತು. ತಟ್ಟೆಯನ್ನು ತಗಲಿಸಿದುದಕ್ಕಾಗಿ ಹುಡುಗಿಯು ಕೋಪಗೊಂಡಿರಬೇಕೆಂಬ ಭಾವನೆಯಿಂದ 'ನನಗೆ ಅರಿವಿಲ್ಲದೆ ತಗುಲಿಸಿದ. ಏನೂ ತಿಳಿದುಕೊಳ್ಳಬೇಡಿ" ಎಂದು ಹೇಳುತ್ತಾ ರಂಗಯ್ಯನು ಆ ಸ್ತ್ರೀ ವ್ಯಕ್ತಿಯ ಮುಖವನ್ನು ನೋಡಿದ. ಹದಿನಾರು ವರ್ಷದ ಅಪ್ಸರ ಆಕೆ! ನವ ಯೌವನದಿಂದ ಕೂಡಿದ ಸುಂದರ ಮುಖ, ಆದರೆ ಕಾಂತಿಹೀನವಾದ ಕಣ್ಣುಗಳು. ಅವನ್ನು ತಪ್ಪಿಸಿಕೊಳ್ಳಲು ಅವನ ತರ್ಕಗಳು ಬಿಗಿಯಾಗಿ ಸಜ್ಜಿಟ್ಟವು. ಜ್ಞಾನಸಾಗರದಲ್ಲಿ ಮನಸ್ಸು ಮತ್ತೆ ಉಲ್ಲೋಲಕಲ್ಲೋಲವಾಯಿತು. ಮುಖದಮೇಲೆ ಬೆವರಿನ ಹನಿಗಳು ಕಾಣಿಸಿಕೊಂಡವು. 'ಯಾರಿರಬಹುದೊ' ಎಂದು ಜನಗಳ ಮಧ್ಯೆ ತೂರಿಹೋಗಿ, ಗರ್ಭಾಂಗಣದಲ್ಲಿ ದೇವರ ವಿಗ್ರಹದ ಮುಂದೆ ಪೂಜೆ ಮಾಡಿಸಲು ನಿಂತ. ವಿಗ್ರಹವೇ ಆತನ ಕಣ್ಣಿಗೆ ಕಾಣದು. ಲಿಂಗಿಯ ಚಿಕ್ಕ ವಯಸ್ಸಿನ ರೂಪು ತಾನು ನೋಡಿದ ಸ್ತ್ರೀಸ್ವರೂಪಿಯ ಮುಖದಲ್ಲಿ ಮಸುಕು ಮಸುಕಾಗಿ ಕಡೆಗೆ ಸ್ಪಷ್ಟವಾಗಿ ಕಂಡಿತು. ಆಕೆಯ ಕರಳದ, ತನ್ನನ್ನು ದುರದುರನೆ ನೋಡುತ್ತಿದ್ದ ದೃಷ್ಟ ದೃಷ್ಟಿಯಿಂದ 'ಸಂಶಯವಿಲ್ಲದೆ ಆಕೆಯೇ ನನ್ನ ಲಿಂಗಿ' ಎಂದು ನಿರ್ಧರಿಸಿದ. 'ಯಾರಾದರೂ ಮಾತನಾಡಿಸಬಹುದಾಗಿತ್ತಲ್ಲಾ! ಮಾತನಾಡಿಸಿದ್ದರೆ ಮನಸ್ಸಿಗೆ ಸಮಾಧಾನವಾಗುತ್ತಿತ್ತು. ಇನ್ನು ಯಾವಾಗಲೋ ಆಕೆಯನ್ನು ನೋಡುವ ಸಂಯೋಗ ಒದಗುವುದು' ಎಂದು ತನ್ನಲ್ಲೇ ಚಿಂತಿಸಿದ. ಮನಸ್ಸಿಗಿದ್ದ ಶಾಂತಿ ಮಾಯವಾಯಿತು. ಆಕೆಯ ಸಂಗಡ ಗಂಡನೂ, ಮಾತಾಪಿತೃಗಳೂ ಬಂದಿರಬಹುದೆಂದೂ, ತಾನು ಬಂದಿರುವ ಸಂಗತಿಯನ್ನು ಆಕೆ ಅವರಿಗೆ ತಿಳಿಸುವಳೆಂದೂ, ತಾನು ಜಾಗ್ರತೆ ಇಲ್ಲಿಂದ ಹೊರಟು ಹೋಗುವುದು ಉತ್ತಮವೆಂದೂ ಯೋಚಿ

ಸಿದ ಮೊದಲು ಪೂಜೆ ಮಾಡಿಸಿಕೊಂಡ ಚಿಂತೆಯ ಅಲೆಯಲ್ಲಿ ಮನಸ್ಸು ಕೊಚ್ಚಿಹೋಗುತ್ತಿದೆ.

ತನ್ನ ಗೆಳೆಯರನ್ನು "ಇನ್ನು ಹೆಚ್ಚು ಹೊತ್ತು ಏಕೆ ಇಲ್ಲಿ ನಿಲ್ಲಬೇಕು? ಜನರು ತಂಡೋಪತಂಡವಾಗಿ ಬರುತ್ತಿದ್ದಾರೆ, ಊರಕಡೆ ಹೋಗೋಣ" ಎಂದ. "ಇಷ್ಟು ಅವಸರ ಏತಕ್ಕೆ? ನಾವು ದೂರದಿಂದ ಬಂದಿದ್ದೇವೆ, ಒಂದು ಸುತ್ತು ದೇವಸ್ಥಾನವನ್ನು ಸುತ್ತಿ ಸ್ವಲ್ಪ ಹೊತ್ತು ಉತ್ಸವವನ್ನು ನೋಡಿಕೊಂಡು ಸಿಧಾನವಾಗಿ ಹೋಗೋಣ'' ಎಂದು ಗೆಳೆಯರು ಹೇಳಿದರೂ ತನಗೆ ಯಾವುದೊ ಬಹಳ ತ್ವರಿತವಾದ ಕೆಲಸ ವಿರುವುದಾಗಿ ನೆಪ ಹೇಳಿ ಅವರನ್ನು ಕರೆದುಕೊಂಡು ಮೊಟಾರು ನಿಲ್ದಾಣಕ್ಕೆ ಧಾವಿಸಿ ಬಂದ ತಕ್ಷಣವೇ ಮೋಟಾರು ಹತ್ತಿ ಎಲ್ಲರೂ ಹೊರಟು ಹೋದರು ತಟ್ಟೆಯನ್ನು ತಗುಲಿಸಿದ್ದ ವ್ಯಕ್ತಿಯನ್ನು ತಿಮ್ಮಕ್ಕನೂ ನೋಡಿದ್ದಳು ಆದರೆ ಉಕ್ಕಿಬಂದ ದುಃಖದಲ್ಲಿ ಆಕೆಗೆ ಮಾತೇ ಹೊರಡಲಿಲ್ಲ

"ಮಾವಯ್ಯ ಬಂದಿದ್ದಾನೆ ನೋಡಿದೇನವ್ವಾ!" ಎಂದಳು ಲಿಂಗಮ್ಮ, ತಾಯಿಯನ್ನು ತಾಯಿಯು ಕಣ್ಣೀರನ್ನು ಮಿಡಿಯುತ್ತಾ "ನೋಡಿದೆ ಆದರೆ ಮಾತಾಡಿಸಲು ಬಾಯೇ ಬರಲಿಲ್ಲ ಜನರ ನೂಕಾಟ ಬೇರೆ ಹೆಚ್ಚಾಗಿತ್ತು ಈಗ ಮೊದಲು ಪೂಜೆ ಮಾಡಿಸು, ಗುಡಿಯ ಹೊರಗೆ ಕಾದಿದ್ದರೆ ಸಿಕ್ಕುತ್ತಾರೆ, ಮಾತಾಡಿಸುವ" ಎಂದಳು. ತಾಯಿಯೂ ಮಗಳೂ ಅವಸರವಸರವಾಗಿ ಪೂಜೆಮಾಡಿಕೊಡಬೇಕೆಂದು ಪೂಜಾರಿಗಳನ್ನು ಕೇಳಿಕೊಂಡರು ಪೂಜೆಯು ಮುಗಿಯಿತು. ದೇವರ ದರ್ಶನವೂ ಆಯಿತು ರಂಗಯ್ಯ ಕೈಸಾಲೆಯ ಗುಂಪಿನಲ್ಲೇ ನಿಂತಿರಬೇಕೆಂದು ನೆನೆದು ಇಬ್ಬರೂ ಆತನಿಗಾಗಿ ದೇವಸ್ಥಾನದ ಹೆಬ್ಬಾಗಿಲಿನಲ್ಲಿ ಆಸೆಗರಿಗೆದರಿದ ಮನಸ್ಸಿನಿಂದ ಕಾದರು ಪೂಜೆ ಮುಗಿಸಿಕೊಂಡು ಹೊರಗೆ ಬರುತ್ತಿದ್ದವರನ್ನೆಲ್ಲಾ ಗೂಢಚಾರರು ಕಳ್ಳನನ್ನು ಹುಡುಕುವಂತೆ ತಮ್ಮ ದೃಷ್ಟಿಯಿಂದಲೇ ಹುಡುಕಿ ಹೊರಗೆ ಬಿಡುತ್ತಿದ್ದರು. ಸ್ವಲ್ಪ ಹೊತ್ತು ಕಳೆದ ನಂತರ ಜನಸಂದಣಿಯು ಕಡಮೆಯಾಯಿತು ರಂಗಯ್ಯನ ಸುಳಿವೇ ಇಲ್ಲ ಲಿಂಗಮ್ಮ ಎಂಥಾ ಮೋಸವಾಯಿತೆಂದು ನಿಟ್ಟುಸಿರು ಬಿಟ್ಟಳು ಹೃದಯದ ಮಿಡಿತ ಗಳಿಗೆ ಗಳಿಗೆಗೂ ಹೆಚ್ಚಾಯಿತು. ನೋಡಿ

ದಾಗಲೇ ಮಾತನಾಡಿಸದೇ ಬಿಟ್ಟನಲ್ಲಾ ಎಂದು ತನ್ನ ಹೀನ ಅದೃಷ್ಟ ವನ್ನು ಶಪಿಸಿದಳು. ಆಶಾಭಂಗವಾಗಿ ಪುನಃ ದೇವಸ್ಥಾನದ ಒಳಗಡೆ ಹೋಗಿ ಹುಡಿಕಿದರು ತಮ್ಮನ್ನು ನೋಡಲಾರದ ವ್ಯಥೆಯಿಂದಲೇ ಇಷ್ಟು ಜಾಗ್ರತೆ ಹೊರಟುಹೋಗಿರ್ಬಾರೆಂದು ಅವರು ಊಹಿಸಿದರು ತಾಯಿಯು ಮಗಳಿಗೆ "ತಾಯಿ, ಇನ್ನು ಹುಡುಕಿ ಏನು ಫಲ? ಅವರನ್ನು ಮಾತಾಡಿಸದಿದ್ದರೂ ಚಿಂತೆಯಿಲ್ಲ ದೇವರ ದರ್ಶನವಾದಂತೆ ಬಹಳ ವರ್ಷಗಳ ಮೇಲಾದರೂ ನಮ್ಮ ರಂಗಪ್ಪನವರ ದರ್ಶನವಾಯ್ತು ನಾವು ಇಲ್ಲಿಗೆ ಬರದಿದ್ದರೆ ಅವರನ್ನು ನೋಡುವ ಭಾಗ್ಯವೂ ದೊರೀತಿರಲಿಲ್ಲ ನಮ್ಮ ಊರಿನ ಕಡೆ ಜನರೆಲ್ಲಾ ಹೋಗುತ್ತಾ ಇದ್ದಾರೆ ನಾವೂ ಅವರ ಸಂಗಡ ಹೋಗುವ" ಎಂದು ಮಗಳನ್ನು ಕರೆದುಕೊಂಡು ರಾಮನಗರದ ಹಾದಿ ಹಿಡಿದು ಹೊರಟಳು ಲಿಂಗವ್ವ ಮೌನವಾಗಿ ತಾಯಿಯನ್ನು ಹಿಂಬಾಲಿಸಿದಳು ಕಾಲುಗಳು ದಾರಿಯುದ್ದಕ್ಕೂ ಸಾಗುತ್ತಿವೆ, ಮನಸ್ಸು ಮಾತ್ರ ರಂಗಯ್ಯನ ರೂಪನ್ನು ಚಿತ್ರಿಸಿಕೊಂಡು ನನದು ನೆನೆದು ತಳಮಳ ಗೊಳ್ಳುತ್ತಿದೆ—ಈ ತೂಗುಯ್ಯಾಲೆಯ ಮನಸ್ಸಿನಲ್ಲಿಯೇ ತೌರೂರನ್ನು ಸೇರಿ ದಳು

ಇತ್ತ ರಂಗಯ್ಯ ಊರು ತಲುಪಿದ ಮೇಲೆ ಬಾಲ್ಯದ ಚೆಲುವಿನ ಲಿಂಗಿಯನ್ನೂ, ದೇವಸ್ಥಾನದಲ್ಲಿ ಕಂಡ ಯೌವನದ ಲಿಂಗವ್ವನನ್ನೂ ಮನದಲ್ಲೇ ಹೋಲಿಸಿ ನೋಡಿ ಕೊರಗುತ್ತಿದ್ದ ಹೀಗೆ ಈ ಎರಡು ವ್ಯಕ್ತಿ ಗಳ ಜೀವನನೌಕೆಯು ಪ್ರಪಂಚದಲ್ಲಿ ಉದ್ಭವಿಸುವ ದುರದೃಷ್ಟದ ಅಲೆ ಗಳಹೊಡೆತಕ್ಕೆ ಸಿಕ್ಕಿ ದಡವನ್ನು ಸೇರಲಾರದ ಕುಂಟುತ್ತಾ ಸಾಗುತ್ತಿತ್ತು.

೭

ವೈಶಾಖ ಮಾಸದ ಒಂದು ಮಟಮಟ ಮಧ್ಯಾಹ್ನ ಜನರು ಬಿಸಿಲಿನ ತಾಪವನ್ನು ತಾಳಲಾರದೆ ತಮ್ಮ ತಮ್ಮ ಮನೆಗಳಲ್ಲೋ ಮರ ಗಳಲ್ಲೋ, ಮರಗಳಡಿಯಲ್ಲೋ ಸೇರಿದ್ದರು ಮೃಗಪಕ್ಷಿಗಳ ಸುಳಿವೇ ಇರಲಿಲ್ಲ ಬೀದಿಯು ನಿರ್ಜನವಾಗಿ ಬಹು ಭೀಷಣವಾಗಿ ಕಾಣುತ್ತಿತ್ತು. ರಂಗಯ್ಯ ಬಿಸಿಲಿನ ಬೇಗೆಯನ್ನು ತಾಳಲಾರದೆ ಮನೆಯ ಕೊಠಡಿಯಲ್ಲಿ

ಹಾಸಿಗೆಯ ಮೇಲೆ ಹೊರಳಾಡುತ್ತಾ ಗಾಳಿ ಬೀಸಿಕೊಳ್ಳುತ್ತಿದ್ದ ಪಕ್ಕದಲ್ಲಿದ್ದ ಪುಸ್ತಕಗಳ ಗುಂಪಿನಿಂದ ಕವಿ ರಾಘವಾಂಕನು ಬರೆದಿರುವ 'ಹರಿಶ್ಚಂದ್ರ ಕಾವ್ಯ' ಪುಸ್ತಕವನ್ನು ಎಳೆದುಕೊಂಡು ಸುಮ್ಮನೆ ಹಾಳೆಗಳನ್ನು ತಿರುವಿಹಾಕುತ್ತಾ ಹರಿಶ್ಚಂದ್ರ ಚಕ್ರವರ್ತಿಯು ಸತ್ಯಕ್ಕೋಸ್ಕರ, ತನ್ನ ಜೀವನದಲ್ಲಿ ಹಜ್ಜೆ ಹೆಜ್ಜೆಗೂ ಪಟ್ಟ ಕಷ್ಟ ಪರಂಪರೆಗಳನ್ನು ಹಾಗೆಯೇ ಓದುತ್ತಾ, ಹರಿಶ್ಚಂದ್ರನು ಋಣತೀರಿಸಲು ಬೇರೆ ಮಾರ್ಗವಿಲ್ಲದೆ, ಸತೀ ಶಿರೋಮಣಿ ಚಂದ್ರಮತಿಯನ್ನೂ ಏಕ ಮಾತ್ರ ಪುತ್ರನಾದ ರೋಹಿತಾಶ್ವನನ್ನೂ ಕಾಶೀ ಪಟ್ಟಣದ ಬೀದಿ ಬೀದಿಗಳಲ್ಲಿ ಅವರ ತಲೆಯಮೇಲೆ ಹುಲ್ಲುಕಡ್ಡಿ ಇಟ್ಟು, ಇಬ್ಬರ ಕೈ ಹಿಡಿದು ಜನರಿಗೆ ತೋರಿಸುತ್ತಾ "ಇವರಂ ಮಾರುಗೊಂಬೆನೆಂದು" ಸಾರುತ್ತಿರಲು, ವಿಪ್ರನೊಬ್ಬನು ಈಶ್ವರಪ್ರೇರಣೆಯಿಂದ ಅವರನ್ನು ಕೊಂಡುಕೊಂಡನು 'ಹೋಗುತ್ತೇನೆ ತಂದೆ' ಎಂದು ಹರಿಶ್ಚಂದ್ರನನ್ನು ತಬ್ಬಿಕೊಂಡು ಗೋಳಾಡುತ್ತಿದ್ದ ಮಗನನ್ನೂ ಪತಿಯ ಪಾದಗಳಮೇಲೆ ತಲೆಯಿಟ್ಟು 'ಹೋಗುತ್ತೇನೆಂದು ಹೇಳಲು ಉಸಿರಿಲ್ಲದೆ ಬಿದ್ದಿದ್ದ ಸತಿಯನ್ನೂ, "ಬೇಹೊದೆಯ ನಾನಿರಲು ಮಾರಿದವನಂ ಕೇಳ್ವ ಸಾಹಸವ ನೋಡೆಂದು ಕೆಡೆಹೊಯ್ದು ನೂಕಿ ನಿಜಗೇಹಕ್ಕೆ ಜರೆವುತ್ತ ಕೊಂಡೊಯ್ದು" ವಿಪ್ರನ ಕಠಿಣ ವರ್ತನೆಯನ್ನೂ ಯೋಚಿಸುತ್ತಾ ಹನಿಗೂಡಿದ್ದ ಕಣ್ಣುಗಳನ್ನು ಒರಸಿಕೊಂಡು ಮುಂದೆ ಹಾಳೆ ತಿರುಗಿಸಿದ ಹರಿಶ್ಚಂದ್ರನು ತನ್ನನ್ನೇ ಚಂಡಾಲನಿಗೆ ಮಾರಿಕೊಂಡನು ಒಡೆಯನ ಅಪ್ಪಣೆಯಂತೆ ಸುಡುಗಾಡು ಕಾಯುತ್ತಿರಲು, ಸರ್ಪದಿಂದ ಕಚ್ಚಲ್ಪಟ್ಟು ಸತ್ತ ಕುಮಾರ ರೋಹಿತಾಶ್ವನನ್ನು ಹೊತ್ತುಕೊಂಡು ನಡುರಾತ್ರಿಯಲ್ಲಿ ಏಕಾಂಗಿಯಾದ ಚಂದ್ರಮತಿಯು ರೋದಿಸುತ್ತಾ, ಚಿತೆಯನ್ನು ಮಾಡಿ, ಅದರ ಮೇಲೆ ಮಗನನ್ನು ಮಲಗಿಸಿದ ಒಂದು ದೃಶ್ಯವನ್ನು ಓದಿದ. ಎದೆ ಇಬ್ಭಾಗವಾಯಿತು ಹೀಗೆ ಕದ್ದು ಸಮರಾತ್ರಿಯಲ್ಲಿ ಹೆಣವನ್ನು ಸುಡಲು ಬಂದ ವೀರನಾರಿಯನ್ನು ಹರಿಶ್ಚಂದ್ರನು ತನ್ನ ಒಡೆಯ ವೀರಬಾಹುವಿನ ಮೇಲೆ ಆಣೆ ಇಟ್ಟು "ನಿನ್ನ ನಿಟ್ಟೆಲುವ ಮುರಿವೆನೆಂದುರವಣಿಸಿ, ಜರೆವುತ್ತ ದಟ್ಟಿಸುತ ಬಂದು ಹಿಡಿದಿದ್ದ ಕಿಚ್ಚಂ ಕೆದರಿ, ಮುಟ್ಟಿಗೆಯ ಮೇಲಿದ ಸುತನ ಹಿಂಗಾಲ್ವಿಡಿದು ಸೆಳೆದು ಬಿಸುಟಂ ಭೂಪನು" ಎಂಬ ದೃಶ್ಯ

ವನ್ನು ಓದಿದ. ದುಃಖವು ತಡೆಯಲಾರದಷ್ಟಾಯಿತು. ಚಂದ್ರಮತಿಯು "ಬಿಸುಡದಿರು ಬಿಸುಡದಿರು ಹಸುಳೆ ನೊಂದಪನು. ಇವನು ನನ್ನ ಮಗನಲ್ಲ. ನಿನ್ನ ಶಿಶುವಂತೆ ಭಾವಿಸಿ ಸುಡಲು ಅಪ್ಪಣೆಕೊಡು" ಎಂದು ಬೇಡಿಕೊಂಡ ಸ್ನವೇಶವು ದೇವರ ಅತ್ಯಂತ ಲೀಲಾ ವಿಚಿತ್ರವನ್ನು ರಂಗಯ್ಯನ ಮನಸ್ಸಿಗೆ ಮುದ್ರೆಯೊತ್ತಿತು. ತನಗೆ ಉಂಟಾಗಿರುವ ಕಷ್ಟವೇನೂ ಇಷ್ಟು ಕಠಿನವಾಗಿಲ್ಲ. ಹರಿಶ್ಚಂದ್ರ ಚಕ್ರವರ್ತಿ ಅನುಭವಿಸುತ್ತಿರುವ ಕಷ್ಟಗಳಿಗೂ ಸಾಮಾನ್ಯರಾದ ನಾವು ಅನುಭವಿಸುವ ಕಷ್ಟಗಳಿಗೂ ಆನೆಗೂ ಸೊಳ್ಳೆಗೂ ಹೋಲಿಸಿದಂತೆಂದುಕೊಳ್ಳುತ್ತಾ ಹಾಗೇ ನಿದ್ರೆ ಹೋದ. ಯಾರೋ ಕೂಗಿದಂತಾಯಿತು. ಕಣ್ಣೊರಸಿಕೊಂಡು ಎದ್ದು ನೋಡಿದ.

"ಯಾರು ಎಂದ."

ಬಂದಿದ್ದವನು—"ನಾನು ರಾಮನಗರದವನು" ಎಂದು ಹೇಳಿದ.

ರಾಮನಗರ ಎಂದು ಕಿವಿಯ ಮೇಲೆ ಬಿದ್ದ ಒಡನೆ ದಡಾರನೆ ಎದ್ದು ಬಾಗಿಲ ಬಳಿಗೆ ಹೋಗಿ ನೋಡಿದ. ಒಬ್ಬ ಹಾತ್ರಯದ ಹುಡುಗ ಬಾಗಿಲಿನ ಹೊರಗೆ ನಿಂತಿದ್ದಾನೆ. ರಂಗಯ್ಯನಿಗೆ ಏನು ಸಮಾಚಾರವಿರಬಹುದೋ ಎಂಬ ಕುತೂಹಲ ಕೆರಳಿ ಕೆರಳಿ ಬರುತ್ತಿದೆ.

"ಬಾ ಒಳಗೆ, ಈ ಬಿಸಿಲಿನಲ್ಲೇ ಬಂದಿದ್ದೀಯಲ್ಲಾ! ಎಲ್ಲಿಗೆ ಹೋಗಿದ್ದೆ? ಎಂದು ಒಂದೇ ಉಸಿರಿಗೆ ಅವನನ್ನು ಪ್ರಶ್ನಿಸಿದ.

"ನಿಮ್ಮತ್ತ್ರನೇ ಬಂದಿವಿನಿ" ಎಂದು ಬಂದಿದ್ದವನು ಉತ್ತರಿಸಿದ. ಶಾಂತವಾಗಿದ್ದ ರಂಗಯ್ಯನ ಮನಸ್ಸು ಪುನಃ ಕಲಕಿತು.

"ಏನಪ್ಪ ಸಮಾಚಾರ?"

"ತಿಮ್ಮಕ್ಕನವರು ತಮಗೆ ಲಗ್ನ ಪತ್ರಿಕೆಯನ್ನು ಕೊಟ್ಟು ಜೊತೆಯಲ್ಲೇ ಕರ್ಕೊಂಡು ಬಾ ಅಂತ ಕಳ್ಸವರೆ"

"ಯಾರಿಗೆ ಮದುವೆ?"

"ತಿಮ್ಮಕ್ಕನ ಕಿರಿಮಗಳಿಗೆ ಸ್ವಾಮಿ"

"ಲಗ್ನಪತ್ರಿಕೆಯನ್ನು ಕೊಡು ನೋಡೋಣ" ಎಂದು ಈಸಿಕೊಂಡ.

"ಲಗ್ನಪತ್ರಿಕೆಯ ಜೊತೆಯಲ್ಲಿ ಇನ್ನೊಂದು ಕಾಗದವಿದೆ ಕೊಳ್ಳಿ" ಎಂದು ಕೊಟ್ಟ.

"ನಾನು ನಿಮ್ಮ ಊರಿಗೆ ಬರುತ್ತಿದ್ದಾಗ ನೀನು ಚಿಕ್ಕವನು ಈಗ ಬೆಳೆದಿದ್ದೀಯೆ. ಗುರುತು ಹಿಡಿಯುವುದಕ್ಕೇ ಆಗಲಿಲ್ಲ. ದಣಿವಾರಿಸಿಕೊ" ಎಂದು ಹೇಳಿ ರಂಗಯ್ಯ ಲಗ್ನ ಪತ್ರಿಕೆಯನ್ನು ಓದಿದ ಬಂಧು ಮಿತ್ರರು ತಿಮ್ಮವ್ವನ ಹೆಸರಿನಲ್ಲಿ ಆಹ್ವಾನಿಸಲ್ಪಟ್ಟಿದ್ದರು. ಆಶ್ಚರ್ಯದಿಂದ ರಂಗಯ್ಯ "ನಿಮ್ಮ ಯಜಮಾನರ ಹೆಸರೇ ಇಲ್ಲ?" ಎಂದ

ಆಳು—"ಅವರು ಸತ್ತು ಬಹಳ ದಿವಸಗಳಾದ್ವು ಈಗ್ಗೆ ಕಲವು ತಿಂಗಳುಗಳ ಹಿಂದೆ ಮುದುಕಮ್ಮನವರೂ ಖಾಯಿಲೆಯಿಂದ ಸತ್ತು ಹೋದರು. ಯಜಮಾನರು ಸತ್ತಾಗ ಬಸವಯ್ಯನವರಿಂದ ನಿಮಗೆ ಒಂದು ಕಾಗದವನ್ನು ಬರೆಸಿದ್ದರು" ಎಂದ

"ಸಮಾಚಾರವೇ ಗೊತ್ತಿಲ್ಲವಲ್ಲ! ಏನಾಗಿತ್ತು ?"

ಯಜಮಾನರು ಇದ್ದಕ್ಕಿದ್ದಹಾಗೆ ಅನ್ನ ನೀರು ತೊರ್ದು ಸತ್ತರು ಸಾಯುವಾಗ ನಿಮ್ಮನ್ನು ಕರೆಸಿಕೊಡುವಂತೆ ತಿಮ್ಮಕ್ಕನವರಿಗೆ ಹೇಳಿದರು. ನಿಮ್ಮ ಹೆಸರನ್ನೇ ಹೇಳುತ್ತಾ ಪ್ರಾಣಬಿಟ್ಟರು." ರಂಗಯ್ಯ ವ್ಯಸನದಿಂದ ತಾಯಿಯನ್ನು ಕರೆದು "ನೋಡಮ್ಮ ಇವನು ನಿಮ್ಮಣ್ಣನ ಮನೆಯ ಆಳು ನಿಮ್ಮ ಅಣ್ಣ ಮತ್ತು ಅಮ್ಮನು ಬಹಳ ದಿವಸಗಳ ಹಿಂದೆಯೇ ಕಾಲವಾದರಂತೆ. ನಮಗೆ ತಿಳಿಸಲೇ ಇಲ್ಲವಲ್ಲ" ಎಂದ. ಸಿದ್ದಮ್ಮ ನಿಗೆ ಸಿಡಿಲುಬಡಿದಂತಾಯಿತು. ಎಷ್ಟಾದರೂ ತಾಯಿ ಮತ್ತು ಸಹೋದರರ ಸಾವು.

ಕಂಬನಿಗರೆದು ದುಃಖದ ಧ್ವನಿಯಿಂದ "ಏನು ಖಾಯಿಲೆಯಾಗಿತ್ತಪ್ಪ ?" ಎಂದಳು:

"ಯಜಮಾನರು ಅನ್ನ ನೀರು ತೊರೆದು ಸತ್ತರು ಅಮ್ಮನವರು ಸ್ವಲ್ಪ ಖಾಯಿಲೆಯಿಂದ ಸತ್ತರು"

"ಸತ್ತಮೇಲೆ ಹೇಳಿದರೆ ಏನು? ನಮ್ಮ ತಾಯಿ ಸಾಯುವಾಗಲಾದರೂ ಹೇಳಬಾರದಾಗಿತ್ತೆ? ಕೊನೆಯ ಸಾರಿ ಮುಖ ನೋಡಿಕೊಂಡಿದ್ದರೆ ಸಾಕಾಗಿತ್ತು. ಅಣ್ಣನೇನೋ ವೈರಿಯಾಗಿದ್ದ" ಎಂದು ಹೇಳುತ್ತಾ

ಕಣ್ಣೀರುಕರೆದಳು.

ರಂಗಯ್ಯ—"ಹುಟ್ಟಿದವಮೇಲೆ ಎಲ್ಲರೂ ಸಾಯಲೇಬೇಕು ಸತ್ತ ಮೇಲೆ ಅತ್ತು ಪ್ರಯೋಜನವೇನಮ್ಮ? ಈತ ಬಿಸಿಲಿನಲ್ಲಿ ಬಂದ್ದಿದಾನೆ ಮಜ್ಜಿಗೆ ಕೊಡಮ್ಮ" ಎಂದು ಮರುಗುತ್ತ ಹೇಳಿದ.

ಸಿದ್ದಮ್ಮ ಮಾತೃವಿಯೋಗದ ದುಃಖಭಾರದಿಂದ ಕಾಲು ಎಳೆದು ಕೊಂಡು ಕೋಣೆಗೆ ಹೋದಳು

ರಂಗಯ್ಯ—"ನಾನು ಬಂದಿದ್ದಾಗ ಸಣ್ಣ ಹುಡುಗಿ ಗಿರಿಜೆ ಈಗ ಚೆನ್ನಾಗಿ ಬೆಳೆದಿದ್ದಾಳೆಯೆ? ವರ ಯಾರು? ಯಾವ ಊರಿನವರು?" ಎಂದು ಕೇಳಿದ

ಆಳು—"ಲಕ್ಷಣವಾಗಿ ಅವಳ ಅಕ್ಕ ಲಿಂಗಮ್ಮನಂತೇನೇ ಇದ್ದಾಳೆ ಸ್ವಾಮಿ ಶಿವನ ಹಳ್ಳಿಯಲ್ಲಿ ಯಾರೋ ಇದ್ದಾರಂತ" ಎಂದ ಲಿಂಗಮ್ಮನ ಹೆಸರು ಕೇಳಿದ ಕೂಡಲೇ, ಆಕೆಯ ರೂಪು ಲಾವಣ್ಯಗಳು ರಂಗಯ್ಯನ ಕಣ್ಣಿನಲ್ಲಿ ಕಟ್ಟಿದವು

ತಾಯಿಯೂ ಮಗಳೂ ಬಸವಯ್ಯನವರೂ, ಕಳೆದು ಹೋದುದನ್ನು ಮರೆತು ಖಂಡಿತ ಲಗ್ನಕ್ಕೆ ಬರಬೇಕೆಂದು ರಂಗಯ್ಯನನ್ನೂ ಸಿದ್ದಮ್ಮನನ್ನೂ ಕಾಗದದಲ್ಲಿ ಬೇಡಿಕೊಂಡಿದ್ದರು. ಓದುತ್ತಾ ಓದುತ್ತಾ ರಂಗಯ್ಯನಿಗೆ ಈ ಮೂರು ಜನರೂ ಬಂದು ತನ್ನ ಕೈಹಿಡಿದು ಬೇಡಿ ಕೊಳ್ಳುತ್ತಿರುವಂತೆ ಭಾಸವಾಯಿತು ಹೃದಯವು ಕನಿಕರದಿಂದ ತುಂಬಿತು ಹೊನ್ನಯ್ಯ ಜೀವಂತನಾಗಿದ್ದಾಗ ಆವನ ಹೆಸರು ಕೇಳಿದರೆ ಮೈಉರಿಯಾಗುತ್ತಿದ್ದ ಕೋಪ ಈಗ ರಂಗಯ್ಯನ ಹೃದಯದಿಂದ ಅಳಿಸಿ ಹೋಗಬೇಕೆಂಬ ಬಯಕೆ ಅಂಕುರಿಸಿ, ಕ್ಷಣಕ್ಷಣಕ್ಕೂ ಬೆಳೆದು ದೊಡ್ಡದಾಯಿತು. ಆಳನ್ನು ಕರೆದು "ಲಿಂಗಮ್ಮ ಈಚೆಗೆ ಹೇಗಿದ್ದಾಳೆ? ಗಂಡನ ಮನೆಯಲ್ಲಿ ಸುಖವಾಗಿದ್ದಾಳೆಯೇ?" ಎಂದ ರಂಗಯ್ಯ

"ಆಕೆ ಗಂಡನ ಮನೆ ಅಂದರೆ ಸೆರೆಮನೆ ಕಂಡಂಗೆ ಹೆದರ್ತಾಳೆ" ಎಂದ ಆಳು.

"ಹಾಗೆಂದರೆ ಹೇಗೆ? ಆಕೆಯ ಗಂಡ, ಅತ್ತೆ ಮಾವಂದಿರು ಸಹಿಸಿ ಕೊಂಡಿದ್ದಾರೆಯೆ?"

"ಹೇಗೆ ಅಂದ್ರೆ ಏನು ಸ್ವಾಮಿ ? ಕಟ್ಟುಬಡಿದ ಕಾಯನ್ನ ಹಣ್ಣು ಮಾಡಿದ ಹಾಗೆ ಆಕೆ ಮದುವೆಯಾದ್ದು ಅದನ್ನೆಲ್ಲಾ ತಿಳ್ದೀ ಅವರು ತೆಪ್ಪನಾಗವರೆ"

ಅಷ್ಟರಲ್ಲಿ ಸಿದ್ದಮ್ಮ ಮಜ್ಜಿಗೆಯನ್ನು ತಂದು ಆಳಿಗೆ ಕೊಟ್ಟಳು. ರಂಗಯ್ಯ ಕಾಗದವನ್ನು ತಾಯಿಗೆ ಓದಿ ಹೇಳಿದ ಸಿದ್ದಮ್ಮ "ನೀನು ಖಂಡಿತ ಹೋಗಿ ಎಲ್ಲರನ್ನೂ ನೋಡಿಕೊಂಡು ಬಾರಪ್ಪ ನಾನು ಮನೆ ಬಿಟ್ಟು ಬರಲಾರೆ ನಮ್ಮಣ್ಣಗೆ ಸಿರಿ ಬಂತು ಅಂತ ಮೆರೆದ ಈ ಲೋಕ ಯಾರಿಗೆ ಸ್ಥಿರ?'

"ಹೋಗಬೇಕಂತ ಮನಸ್ಸು ಮಾಡಿದ್ದೇನಮ್ಮ"

'ಮೊದಲು ಹೋಗಿ ಬಾ ನಾನು ಕೇಳಿದೆ ಅಂತ ಎಲ್ಲರಿಗೂ ಹೇಳು ನಮ್ಮ ಅತ್ತಿಗೇನ ಒಂದು ಸಾರಿ ಖಂಡಿತ ಬಾ ಎಂದು ಹೇಳು' ಎಂದು ಮನೆಯ ಒಳಕ್ಕೆ ಹೋದಳು

'ಸ್ವಾಮಿ, ಲಿಂಗಮ್ಮ ಒಂದು ಸಮಾಚಾರಾನ ಗುಟ್ಟಾಗಿ ತಮಗೆ ತಿಳಿಸುವಂಗೆ ಹೇಳಿದ್ದಾಳೆ" ಎಂದ 'ಇದನ್ನು ಕೇಳಿ ರಂಗಯ್ಯನಿಗೆ ಕುತೂಹಲಕ್ಕೆ ಕಚಗುಳಿ ಇಟ್ಟಂತಾಯಿತು ಕಿವಿಗಳು ನೆಟ್ಟಗಾದುವು "ಏನು ಸಮಾಚಾರ" ಹೇಳು" ಎಂದು ಆತುರನಾಗಿಯೇ ಕೇಳಿದ

"ತಾವು ಏನೂ ತಿಳ್ಕೋಬಾರದೂಂತಾ ಹೇಳಿದ್ದಾಳೆ' ರಂಗಯ್ಯನ ಕುತೂಹಲ ಇಮ್ಮಡಿಯಾಯಿತು ಲಿಂಗಮ್ಮನ ಮಾತು ಕೇಳಲು ಮನಸ್ಸು ತವಕಪಡುತ್ತಿತ್ತು, ಕಿವಿಗಳು ನಿಮಿರಿದ್ದು ನಿಂತಿದ್ದವು.

"ನೀನು ಹೇಳಬಾರದವ?"

"ತಮ್ಮ ಸಂಗಡ ದಯವಿಟ್ಟು ಅಕ್ಕನನ್ನು ಕರಕೊಂಡು ಬರಬೇಕೂಂತ ಹೇಳಿದಳು, ಅಷ್ಟೆ"

ನಗುತ್ತಾ, "ಇದನ್ಯಾಕೆ ಇಷ್ಟೊಂದು ಗೋಪ್ಯವಾಗಿ ಹೇಳಿದಳು ?"

"ತಾವು ಕೋಪ ಮಾಡ್ಕೋತಾರೇಂತ ಊಹಿಸಿ ಹಾಗೆ ಹೇಳಿದಳು"

ಈ ಮಾತುಗಳನ್ನು ಕೇಳಿ ರಂಗಯ್ಯನಿಗೆ ಲಿಂಗಿಯ ಮೇಲಿದ್ದ ಪ್ರೇಮವು ಕಾಮರಹಿತವಾದ ನಿಷ್ಕಳಂಕರೂಪವನ್ನು ತಾಳಿತು ಲಿಂಗಿಯ ಮನಸ್ಸನ್ನು ಜ್ಞಾನದೃಷ್ಟಿಯೆಂಬ ಒರೆಗಲ್ಲಿನ ಮೇಲೆ ಉಜ್ಜಿ, ಆಕೆಯ ಸರಳ ಸ್ವಭಾವ

ವನ್ನೂ ವಿಶಾಲ ದೃಷ್ಟಿಯನ್ನೂ ನೋಡಿ, ಮನಸ್ಸಿನಲ್ಲಿ 'ಒಳ್ಳೆಯ ಹುಡುಗಿ' ಎಂದುಕೊಂಡು "ಅಕೆ ತೌರೂರಿಗೆ ಹೋಗಿದ್ದಾಳೆ ಸಮಯ ಬಂದಾಗ ಇನ್ನೊಂದು ಸಾರಿ ಕರೆದುಕೊಂಡು ಬರುತ್ತೇನೆ" ಎಂದು ಊಟ ಮುಗಿಸಿಕೊಂಡು ಇಬ್ಬರೂ ಮೋಟಾರಿನಲ್ಲಿ ಹೊರಟರು

ರಾಮನಗರದಲ್ಲಿ ತಾಯಿಯೂ ಮಗಳೂ ರಂಗಯ್ಯನವರು ಬರುವರೆ ಎಂದು ಪರಸ್ಪರ ಯೋಚಿಸಿ, ಕೊನೆಗೆ ಬರಬಹುದೆಂದುಕೊಂಡು, ಒಬ್ಬ ಆಳನ್ನು ಕರೆದು, ಎತ್ತಿನಗಾಡಿ ಕಟ್ಟಿಕೊಂಡು ರಂಗಪ್ಪನವರನ್ನು ಕರೆದುಕೊಂಡು ಬರಬೇಕೆಂದು ಅಜ್ಞಾಪಿಸಿದರು. ಲಿಂಗಮ್ಮ ಸಡಗರದಿಂದ ಗಾಡಿಗೆ ತಾನೇ ಹುಲ್ಲುಹಾಕಿ, ಅದರ ಮೇಲೆ ಒಂದು ಚಾಪೆಯನ್ನು ಹಾಕಿ, ಮತ್ತದರಮೇಲೆ ಒಂದು ಜಮಖಾನವನ್ನು ಹಾಸಿ ಗಾಡಿಯನ್ನು ಹೊರಡಿಸಿದಳು ಬಂಡಿಯನ್ನು ಜಾಗ್ರತೆ ಓಡಿಸಿಕೊಂಡು ಬರಬೇಕೆಂದೂ, ಬರುವಾಗ ಮಾವಯ್ಯನಿಗೆ ಸೊಗಸಾದ ಹಣ್ಣು ಹಂಪಲುಗಳನ್ನು ತರಬೇಕೆಂದೂ ಆಳಿನ ಕೈಯಲ್ಲಿ ದುಡ್ಡು ಕೊಟ್ಟು ಕಳುಹಿಸಿದಳು ಗಾಡಿಯು ಮೋಟಾರು ಬರುವುದಕ್ಕೆ ಮುನ್ನವೇ ಬಂದಿತು ರಂಗಯ್ಯ ಮೋಟಾರಿನಿಂದ ಇಳಿಯುತ್ತಲೇ ಗಾಡಿಯವನು ರಂಗಯ್ಯನಿಗೆ ಕೈಮುಗಿದು 'ತಿಮ್ಮಕ್ಕನವರು ಗಾಡಿಯನ್ನು ಕಳುಹಿಸಿದ್ದಾರೆ ಅದರ ಮೇಲೆ ಕುಳಿತುಕೊಳ್ಳಿ ನಾನು ಪೇಟೆಗೆ ಹೋಗಿ ಸಾಮಾನು ತರ್ತೇನೆ' ಎಂದ ರಂಗಯ್ಯ 'ಗಾಡಿಯನ್ನೇಕೆ ಕಳುಹಿಸಿದರು? ನಡೆದುಕೊಂಡೇ ಬಂದುಬಿಡುತ್ತಿದ್ದಪ್ಪ. ಹೋಗು ಬೇಗ ಬಾ' ಎಂದು ಗಾಡಿಯೇರಿ ಕುಳಿತ. ಆಳು ಪೇಟೆಯಿಂದ ಸೊಗಸಾದ ಹಣ್ಣುಗಳನ್ನು ತಂದ ಗಾಡಿ ಊರು ಕಡೆ ಹೊರಟಿತು

"ಏನಯ್ಯ, ಇಷ್ಟೊಂದು ಹಣ್ಣುಗಳು ಯಾರಿಗೆ?" ಎಂದ

"ಮದುವೆ ಮನೆಗೆ ಬೇಕಲ್ಲ ಸ್ವಾಮಿ."

'ಅದು ಸರಿ. ಇಷ್ಟೊಂದು ರಸಬಾಳೆ ಹಣ್ಣು ಕಿತ್ತಲೆ ಹಣ್ಣುಗಳು! ಇನ್ನೂ ಏನೇನೊ ತೆಗೆದುಕೊಂಡಿದ್ದೀ? ಯಾರು ತರಹೇಳಿದವರು?''

'ಇನ್ನಾರು ಸ್ವಾಮಿ? ನಮ್ಮ ಲಿಂಗಮ್ಮ ನನ್ನ ಕೈಯಲ್ಲಿ ಐದು

ರೂಪಾಯಿ ಕೊಟ್ಟು ಅದಕ್ಕೆಲ್ಲಾ ಹಣ್ಣು ಹಂಪಲು ತರಬೇಕೆಂದಳು; ತಕ್ಕೊಂಡೆ ”

ರಂಗಯ್ಯ ನಸುನಗುತ್ತಾ—“ ಸರಿಹೋಯಿತು ಗಾಡಿ ಓಡಿಸಪ್ಪ. ಬಹಳ ಬಿಸಿಲಾಗುತ್ತದೆ” ಎಂದನು. ಲಿಂಗಮ್ಮ ತನ್ನ ಉಪಚಾರಕ್ಕಾಗಿಯೇ ಇಷ್ಟೊಂದು ಶ್ರದ್ಧೆವಹಿಸುತ್ತಿದ್ದಾಳೆಂದು ಅರಿತು, ಅವಳ ಸರಳ ಹೃದಯವನ್ನೂ ಆಕೆ ತನ್ನಲ್ಲಿಟ್ಟಿರುವ ಪ್ರೀತಿಯನ್ನೂ ನೆನೆದು ಮನಸ್ಸಿನಲ್ಲೆ ಹೊಗಳಿದ

“ ಒಂದು ಘಳಿಗೇಲಿ ತಕ್ಕೊಂಡು ಹೋಗ್ತೀನಿ, ಬನ್ನಿ ಸ್ವಾಮಿ ”

“ ಅದಿರಲಿ, ಮದುವೆ ಸಂಭ್ರಮ ಬಹಳ ಜೋರಾಗಿದೆ ಅನ್ನಪ್ಪ.”

“ ಆಡಂಬರವೆಲ್ಲಾ ನಿಮ್ಮ ಮಾವನವರ ಕಾಲಕ್ಕೇ ಹೋಯ್ತು ಸ್ವಾಮಿ ”

“ ಅವನೊಬ್ಬನಿಂದಲೇ ಬೆಳಕಾಗುತ್ತಿತ್ತೆ ?”

“ ಹಾಗಲ್ಲ ಸ್ವಾಮಿ, ಅವರಿದ್ದಾಗ ಜನರೆಲ್ಲಾ ಹೆದರಿಕೊಂಡು ಕೆಲಸಕಾರ್ಯಕ್ಕೆ ಓಡಿಬರ್ತಾ ಇದ್ರು ಅವರು ಸತ್ತಮೇಲೆ ಎಲ್ಲರೂ ಶಾಪ ಹಾಕ್ತಾರೆ ಮದುವೆ ಚಪ್ಪರ ಹಾಕೋಕೆ ತಿಮ್ಮಕ್ಕನವರು ದಮ್ಮಯ್ಯ ಗುಡ್ಡೆ ಹಾಕಿದ್ದಾಯ್ತು ಬಸವಯ್ಯನವರು ಇಲ್ಲದಿದ್ದರೆ ತಿಮ್ಮಕ್ಕನವರ ಪಾಡು ಕೇಳಬೇಕಿತ್ತೆ ಸ್ವಾಮಿ?”

“ ಪ್ರಪಂಚವೇ ಹಾಗೆ ಈಗ ಅವನ ವಿಚಾರ ಬೇಡ ಗಾಡಿ ಓಡಿಸು ” ಆಳು ಎತ್ತುಗಳ ಮೇಲೆ ಛಾವಣಿಯನ್ನು ಬೀಸಿದ ಎತ್ತುಗಳು ನಾಗಾಲೋಟದಿಂದ ಓಡಿದವು

ಆ ದಿನ ಬೆಳಗ್ಗೆ ರಾಮನಗರದಲ್ಲಿ ಮದುವೆ ಪ್ರಾರಂಭ ತಿಮ್ಮಕ್ಕನೂ ಲಿಂಗಮ್ಮನೂ ಮದುವೆಯ ಗಲಿಬಿಲಿಯನ್ನು ಒಂದು ಕಡೆ ಇರಿಸಿ “ರಂಗಯ್ಯನವರು ಬಂದಿರುವರ” ಗಾಡಿ ಊರ ಸಮೀಪಕ್ಕೆ ಬಂದಿದೆಯೆ?” ಎಂದು ಯೋಚಿಸುವರು. ಒಂದು ಸಾರಿ ಇದ್ದಕ್ಕಿದ್ದಂತೆ ಮನಸ್ಸಿನಲ್ಲಿ ಬೆದರಿಕೆಯು ಹೆಚ್ಚಿ ‘ಬಂದಿರಲಾರರು, ವೃಥಾ ನಾವು ಇಷ್ಟು ಶ್ರಮಪಟ್ಟೆವಲ್ಲಾ !’ ಎಂದು ಆಶಾಭಂಗವಾದಂತಾಗುವುದು. ಲಿಂಗಮ್ಮನಿಗೆ ಒಂದು ಯೋಚನೆ ಹೊಳೆಯಿತು ತಕ್ಷಣ

ಬಸವಯ್ಯನವರನ್ನು ಕರೆದುಕೊಂಡು ಬಂದು "ಬಂಡಿ ಬರುವ ಹೊತ್ತಾಯಿತು. ನೀವು ಇಲ್ಲೇ ಇರಿ ಒಂದುವೇಳೆ ನಮ್ಮ ಮಾವಯ್ಯನವರು ಬಂದರೆ ಬಂದ ಕೂಡಲೆ ಮಾತನಾಡಿಸಲು ನಮ್ಮಲ್ಲಿ ಯಾರಿಗೂ ಧೈರ್ಯವಿಲ್ಲ" ಎಂದಳು ಬಸವಯ್ಯ "ನೀನು ತಾನೆ ರಂಗಯ್ಯನವರ ಜೀವನದ ಕಣ್ಣಾಗಿದ್ದವಳು ನೀನು ಮೊದಲು ಸ್ವಾಗತಿಸಿದರೆ ಎಲ್ಲರೂ ಸ್ವಾಗತಿಸಿದಂತೆ' ಎಂದು ತಮಾಷೆಮಾಡಿದ ಲಿಂಗಮ್ಮನ ಮುಖದಮೇಲೂ ನಗೆಯು ಸುಳಿದಾಡಿತು ಈ ಮಾತುಗಳು ಲಿಂಗಮ್ಮನಿಗೆ ಮರೆತಿದ್ದ ಮುರಿದ ಮದುವೆಯ ಕಥೆಯನ್ನು ಕಣ್ಣಿಗೆ ಕಟ್ಟಿದವು. ಕಣ್ಣೀರಿನಿಂದ ಕಥೆಯು ಕಾಣದಾಯಿತು ಈ ಮೂರು ವ್ಯಕ್ತಿಗಳೂ ಗಾಡಿಯನ್ನು ತಮ್ಮ ತಮ್ಮ ದೃಷ್ಟಿ ಎಲ್ಲಿಯವರೆಗೆ ಮಸುಕಾಗಿ ಮಬ್ಬಾಗಿ ಕಾಣುತ್ತದೆಯೋ ಅಲ್ಲಿಯವರೆಗೂ ಕಣ್ಣುಗಳನ್ನು ಅರಳಿಸಿ ನೋಡುತ್ತಾ, ಬಹಳ ಹೊತ್ತಿಗೊಮ್ಮೆ ರೆಪ್ಪೆಯನ್ನು ಹೊಡೆಯುತ್ತಾ ಸಮಾಧಿಸ್ಥರಾದ ತಪಸ್ವಿಗಳಂತೆ ನಿಂತುಬಿಟ್ಟರು ಬರುವ ಬಂಡಿಯ ಚಕ್ರವು ಬಹು ದೂರದ ದಿಗಂತದಲ್ಲಿ ಮಬ್ಬಾಗಿ ಗೋಚರಿಸಿತು ಲಿಂಗಮ್ಮನ ದೃಷ್ಟಿಯು ಕಣ್ಣ ಶಕ್ತಿಮೀರಿ ಬಂಡಿಯೊಳಗೆ ಕೂತಿದ್ದವರನ್ನು ದೂರದಿಂದಲೇ ಹುಡುಕಲಾರಂಭಿಸಿತ ಬಂಡಿಯು ರಸ್ತೆಯಿಂದದ್ದ ಧೂಳಿನಲ್ಲಿ ಒಂದೊಂದು ಸಾರಿ [illegible]ಹೋಗಿ ಇವರಿಗೆ 'ಗಾಡಿಯೇ [illegible]' ಎಂಬ [illegible] ಮರುಕ್ಷಣದಲ್ಲಿಯೇ ಬಂಡಿಯ ಚಕ್ರವು [illegible] ಮೇಲೆ ದೂರದಲ್ಲಿ ಕಾಣುವ [illegible] ಸಮೀಪಿಸಿದಂತೆಲ್ಲಾ ತಾಯಿಯ ಮತ್ತು [illegible] ರಂಭಿಸಿತು ಈ [illegible] ಹಲವು ಕ್ಷಣಕ್ಷಣಕ್ಕೂ [illegible] ಬಂಡಿಯು ಸಮೀಪಕ್ಕೆ ಬಂದಿತು ತಿಮ್ಮಕ್ಕನ ಸಣ್ಣಮಕ್ಕಳೂ, ಮದುವೆಗೆ ಬಂದಿದ್ದ ಬಂಧು ಬಳಗದವರೂ ಕೂಡಿಕೊಂಡು, ಬಂಡಿಯನ್ನು ಎದುರು ನೋಡುವವರದು ಒಂದು ದೊಡ್ಡ ಗುಂಪಾಗಿಯೇ ಪರಿಣಮಿಸಿತ್ತು ಇತ್ತ ರಂಗಯ್ಯ ಬಹಳ ವರ್ಷಗಳ ಹಿಂದೆ ತಾನು ನೋಡಿದ್ದ ಬೆಟ್ಟಗುಡ್ಡಗಳ ಸಾಲನ್ನೂ, ಒಂದನ್ನೊಂದು ಸ್ಪರ್ಧಿಸಿ ಹೆಣೆದಿದ್ದ ಹೆಮ್ಮರಗಳ ರಾಶಿಯನ್ನೂ ಎವೆಯಿಕ್ಕದೆ

ನೋಡುತ್ತಾ, ಪ್ರಪಾತದಲ್ಲಿ ಹಾವಿನಂತೆ ಹರಿಯುತ್ತಿದ್ದ ನದಿಯ ಚಿತ್ರವನ್ನು ನೋಡುವ ಆನಂದದಲ್ಲಿ ಮುಳುಗಿದ್ದ. ಬಂಡಿಯು ರಾಮನಗರದ ಹೆಬ್ಬಾಗಿಲಿಗೆ ಬಂದೇಬಿಟ್ಟಿತು. ರಂಗಯ್ಯ ಬಂಡಿಯ ಮೇಲಿಂದಲೇ ಗುಂಪಿನ ಮುಂಭಾಗದಲ್ಲಿ ನಿಂತಿದ್ದ ಬಸವಯ್ಯನಿಗೆ ಕೈಮುಗಿದ. ಗೆಳೆಯರ ಪರಸ್ಪರ ಆನಂದಕ್ಕೆ ಮಿತಿಯೇ ಇರಲಿಲ್ಲ ಗೆಳೆತನವು ಸಿರಿತನದಂತೆ, ಅಷ್ಟ ಮದಗಳಲ್ಲೊಂದು ಬಸವಯ್ಯ ರಂಗಯ್ಯನ ಕೈಹಿಡಿದು ಬಂಡಿಯಿಂದ ಕೆಳಕ್ಕಿಳಿಸಿ "ಏನು, ಇಷ್ಟ ಅಪರೂಪವಾದಿರಿ! ಎಲ್ಲಾ ಒಳ್ಳೆಯದು ತಾನೆ" ಎಂದ ರಂಗಯ್ಯ ನಗು ಮೊಗದಿಂದ "ಎಲ್ಲರೂ ಕ್ಷೇಮ. ನೀವು ಸುಖವಾಗಿದ್ದೀರಾ?" ಎಂದು ಕ್ಷೇಮ ಸಮಾಚಾರವನ್ನು ವಿಚಾರಿಸಿದ ಗುಂಪಿನ ಮರೆಯಲ್ಲಿ ಅಡಗಿಕೊಂಡಿದ್ದ ಲಿಂಗಮ್ಮ ಕಣ್ಣು ರೆಪ್ಪೆ ಹೊಡೆಯದೆ ನೋಡುತ್ತಾ ಮನಸ್ಸಿನಲ್ಲಿ "ನಾನು ಬರೆದುದಕ್ಕೆ ಬಂದೇಬಿಟ್ಟರು" ಎಂದುಕೊಳ್ಳುತ್ತಿದ್ದಳು ಅವಳ ಆನಂದ ಎಲ್ಲೆ ಮೀರಿತ್ತು; ಕಣ್ಣುಗಳು ಆನಂದದ ಹನಿಯಿಂದ ಕೂಡಿದ್ದವು ತಿಮ್ಮಕ್ಕ ತಲೆಬಗ್ಗಿಸಿಕೊಂಡು ಬಲಗಾಲು ಹೆಬ್ಬೆರಳಿನಿಂದ ನೆಲವನ್ನು ಉಜ್ಜುತ್ತಾ ಕೆನ್ನೆಯ ಮೇಲೆ ಹರಿಯುತ್ತಿದ್ದ ಆನಂದಬಾಷ್ಪಗಳನ್ನು ಸೆರಗಿನಿಂದ ಒರೆಸಿಕೊಳ್ಳುತ್ತಾ ನಿಂತಿದ್ದಳು. ರಂಗಯ್ಯ ತಿಮ್ಮಕ್ಕನನ್ನು ನೋಡಿ "ಏನಕ್ಕ, ಚನ್ನಾಗಿದ್ದೀರಾ?" ಎಂದ. ತಿಮ್ಮಕ್ಕನು ತಡವರಿಸುತ್ತಾ "ಏನು ಚಂದವೋ ನಾನು ಕಾಣೆ ಮನೆಗೆ ಹೋಗುವ, ಬನ್ನಿ" ಎಂದು ಕರೆದುಕೊಂಡು ಹೊರಟಳು

ಗೆಳೆಯರಿಬ್ಬರೂ ಕ್ಷೇಮಸಮಾಚಾರದ ಮಾತುಗಳನ್ನಾಡುತ್ತಾ ಮನೆಯ ಹಜಾರದಲ್ಲಿ ಕುಳಿತರು. ಮದುವೆಯು ಬೇರೊಂದು ಮನೆಯಲ್ಲಿ ವಿಜೃಂಭಣೆಯಿಂದ ನಡೆಯುತ್ತಿತ್ತು ಲಿಂಗಮ್ಮನ ಸುಳಿವೇ ಕಾಣಲಿಲ್ಲವಾದ್ದರಿಂದ ರಂಗಯ್ಯನ ಕಣ್ಣುಗಳು ಆ ಕಡೆ ಈ ಕಡೆ ಹರಿದಾಡಿದವು ಆಕೆಯನ್ನು ಕರೆಸುವಂತೆ ಬಸವಯ್ಯನವರಿಗೆ ಹೇಳಬೇಕೆಂದು, ಮಾತನ್ನು ಬಾಯಿಯಲ್ಲೇ ತುಂಬಿಕೊಂಡಿದ್ದಾನೆ. ತಾನು ಬಂದದ್ದನ್ನು ತಿಳಿದು ಆಕೆಯೇ ಬಂದಾಳೆಂದು ಮನಸ್ಸನ್ನು ಬಿಗಿ ಹಿಡಿದುಕೊಂಡ. ಲಿಂಗಮ್ಮ ಮೊದಲೇ ಮನೆಗೆ ಬಂದು ಕೋಣೆಯಲ್ಲಿ ಉಪಹಾರವನ್ನು

ಸಿದ್ಧಗೊಳಿಸುತ್ತಿದ್ದಳು. ತಿಮ್ಮಕ್ಕ ಕೋಣೆಗೆ ಹೋಗಿ ಮಗಳಿಗೆ "ನಿಮ್ಮ ಮಾವಯ್ಯನವರಿಗೂ ಬಸವಯ್ಯನವರಿಗೂ ಬಡಿಸು ಜೋಕೆ, ಮರ್ಯಾದೆಯಿಂದ ಬಡಿಸಬೇಕು ನಾನು ಮದುವೆಮನೆಗೆ ಹೋಗಿ ಎಲೆ ಅಡಿಕೆ ತರ್ತೀನಿ" ಎಂದು ಹೇಳಿ ಹೊರಟಳು ಗೆಳೆಯರು ಬಹಳ ವರ್ಷಗಳ ನಂತರ ಸಂಧಿಸಿದ್ದರಿಂದ ಪ್ರಪಂಚದ ಆಗು ಹೋಗುಗಳ ವಿಚಾರವನ್ನು ಮಾತನಾಡುತ್ತಿದ್ದರು ಲಿಂಗಮ್ಮ ಸೆರಗನ್ನು ನೈತುಂಬಾ ಹೊದೆದು ಕೊಂಡು ನೀರು ತುಂಬಿದ ಚೆಂಬನ್ನು ಹಿಡಿದು, ಬಸವಯ್ಯನಿಗೆ ಮಾತ್ರ ಕಾಣುವಂತೆ ಕೋಣೆಯ ಹೊಸಲನ್ನು ಮೆಟ್ಟಿ ನಿಂತಳು ಬಹಳ ಹೊತ್ತಿನ ವರೆಗೆ ಒಬ್ಬರ ದೃಷ್ಟಿಯೂ ಕೋಣೆಯ ಬಾಗಿಲನ್ನು ಒರಗಿ ನಿಂತಿದ್ದ ವ್ಯಕ್ತಿಯ ಕಡೆ ಬೀಳಲಿಲ್ಲ. ಬಸವಯ್ಯ ಆಕಸ್ಮಾತ್ತಾಗಿ ನೋಡಲು, ಲಿಂಗಮ್ಮ ತನ್ನ ಮಾವಯ್ಯನನ್ನು ಉಪಹಾರಕ್ಕೆ ಕರೆತರುವಂತೆ ಕೈಸನ್ನೆ ಮಾಡಿದಳು ಬಸವಯ್ಯ "ಹೊತ್ತಾಯಿತು ಏಳಿ, ಊರಿನಲ್ಲಿ ಊಟ ಮಾಡಿದ್ದು, ಏನಾದರೂ " ಎಂದ

"ಇಲ್ಲಿ ಯಾರಿದ್ದಾರೆ ಬಸವಯ್ಯನವರೇ, ಮದುವೆ ಸಂಭ್ರಮ ಬಿಟ್ಟು? ಈಗ ತೆಗೆದುಕೊಳ್ಳುವುದಕ್ಕೆ ಏನಿದೆ? ಕೊಡುವವರು ತಾನೆ ಯಾರು? ಎಂದು ತಮಾಷೆಯಾಗಿ ಮಾತನಾಡಿದ ಈ ಮಾತುಗಳನ್ನು ಕೇಳಿ ಲಿಂಗಮ್ಮ ಉಕ್ಕಿ ಬಂದ ನಗುವನ್ನು ತುಟಿಯಿಂದ ಹೊರಗೆ ಬಿಡದೆ ನುಂಗಿದಳು ಅವಳ ಜೀವನದಲ್ಲಿ ಎಂದೂ ಅನುಭವಿಸದ ಸಂತೋಷ ವನ್ನು ಇಂದು ಅನುಭವಿಸುತ್ತಿದ್ದಾಳೆ

"ಕೋಣೆಯೊಳಗೆ ಅಡಿಗೆಯವರು ಒಬ್ಬರಿದ್ದಾರೆ ನಮಗೋಸ್ಕರ ಕಾದಿದ್ದಾರೆ ಏಳಿ, ನೀರು ತೆಗೆದುಕೊಳ್ಳಿ" ಎಂದ ಬಸವಯ್ಯ

"ಅದ್ಯಾರಪ್ಪ, ಅಷ್ಟು ಶ್ರದ್ಧೆಯಿಂದ ಮದುವೆ ಬಿಟ್ಟು ಕಾದಿರುವವರು?" ಎಂದು ನಕ್ಕ ರಂಗಯ್ಯ

"ಬೇಕಾದರೆ ನೋಡಿ ಕೋಣೆಯಲ್ಲಿ ನಿಮಗೋಸ್ಕರ ಎಲ್ಲವನ್ನೂ ಸಿದ್ಧಮಾಡಿಕೊಂಡು ಕಾದಿದ್ದಾರ ತಮಾಷೆ ಗಿಮಾಷೆ ಒಂದೂ ಇಲ್ಲ. ಯಾರೋ ತಿಂಡಿ ಹಿಡಿದುಕೊಂಡು ಬಹಳ ಹೊತ್ತಿನಿಂದ ನಿಂತಿದ್ದಾರೆ. ಏಳಿ" ಎಂದು ಮೇಲಕ್ಕೆಬ್ಬಿಸಿದನು ಒಳಗಿನಿಂದ ನೀರು ತುಂಬಿದ

ಚೆಂಬನ್ನು ಹಿಡಿದು ಗಂಭೀರವಾಗಿ ಬಂದ ಸ್ತ್ರೀವ್ಯಕ್ತಿಯನ್ನು ನೋಡಿ ರಂಗಯ್ಯನಿಗೆ ಆಶ್ಚರ್ಯವಾಯಿತು. ನೀರನ್ನು ಈಸಿಕೊಂಡು ಇಬ್ಬರೂ ಕುಳಿತರು ಉಪಹಾರವನ್ನು ಲಿಂಗವ್ವ ಬಡಿಸಿದಳು. ಪುನಃ ಬಡಿಸಲು ಹೋದಾಗ ಬೇಡವೆಂದು ಹೇಳುವ ಬದಲು ರಂಗಯ್ಯ ತನ್ನ ಎಡಗೈಯನ್ನು ಎಲೆಯಮೇಲೆ ಅಡ್ಡವಾಗಿ ಅತ್ತಇತ್ತ ಅಲ್ಲಾಡಿಸಿದ ''ಏಕೆ, ಸ್ವಲ್ಪ ಈಸಿಕೊಳ್ಳಿ, ಬಹಳ ದೂರದ ಪ್ರಯಾಣ ಮಾಡಿದ್ದೀರಿ' ಎಂದ ಬಸವಯ್ಯ ರಂಗಯ್ಯ "ಸಾಕು ಬಸವಯ್ಯನವರೆ, ಎಷ್ಟು ದೂರ ಪ್ರಯಾಣ ಮಾಡಿದರೂ ಹೊಟ್ಟೆ ಹಿಡಿಸುವಷ್ಟೇ ತಾನೆ ಊಟ ಮಾಡುವುದು?"

ಬಸವಯ್ಯ ಉಪಹಾರವನ್ನು ಮುಗಿಸಿ ಹಜಾರಕ್ಕೆ ಹೋಗಿ ಕುಳಿತ ಅಷ್ಟರಲ್ಲ ತಿಮ್ಮಕ್ಕನು ಎಲೆ ಅಡಿಕೆಯನ್ನು ತಟ್ಟೆಯಲ್ಲಿ ತಂದಿಟ್ಟು, ಬಸವಯ್ಯನ ಸಂಗಡ ಮಾತನಾಡುತ್ತಿದ್ದಳು ರಂಗಯ್ಯ ಹಾಲು ಬಿಸಿ [illegible] ಕುಳಿತಿದ್ದನು ಬೇರೆ ಲೋಟವನ್ನು ಲಿಂಗವ್ವ [illegible] 'ಹಾಲು ಬಹಳ ಬಿಸಿ' ಎಂದ [illegible] ವೃತ್ತವನ್ನು [illegible] ಹಿಂದೆ ನಡೆದುದನ್ನು ನೆನಸಿ [illegible] ರಂಗಯ್ಯನ ಮಾತು ಬಡಿ [illegible] ಬೇರೆ ಲೋಟವನ್ನು ತಂದು [illegible] (ಕೃತ್ಯ ತಂದುಕೊಂಡು) ಮೃದುವಾಗಿ 'ನಾನು [illegible] ಕುಡಿ' ಎಂದಳು ರಂಗಯ್ಯ ಹಾಲಿನ ಲೋಟವನ್ನು ಲಿಂಗವ್ವನ ಕೈಗಿತ್ತನು ಆಕೆಯು ಹಾಲನ್ನು ಒಂದು ಲೋಟದಿಂದ ಇನ್ನೊಂದು ಲೋಟಕ್ಕೆ ಹೊಯ್ಯುತ್ತಾ, "ನಾನು ಏನ ತಪ್ಪು ಮಾಡಿದ್ದೇನೆ? ಮಾತನಾಡಿಸಿದರೂ ಮಾತನಾಡೋದಿಲ್ಲವಲ್ಲ" ಎಂದಳು.

"ನೀನು ತಪ್ಪು ಮಾಡಿದ್ದಿ ಎಂದು ನಾನು ಹೇಳಿದೆನೆ? ನೀನು ಪರಸ್ತ್ರೀ ಆದ್ದರಿಂದ ಮಾತನಾಡಿಸುವುದು ನ್ಯಾಯವಲ್ಲ." ಎಂದ ರಂಗಯ್ಯ

ಪರಸ್ತ್ರೀ ಎಂದರೆ! ನಿಮ್ಮ ಮಾತಿನ ಒಗಟು ಅರ್ಥವಾಗು

ವುದಿಲ್ಲವಲ್ಲ !

"ಅರ್ಥವಾಗದೆ ಏನು? ಮದುವೆಯಾದನಂತರ ಹೆಂಗಸು ಸ್ತ್ರೀ ಕುಲಕ್ಕೆ ಕೀರ್ತಿ ತರಬೇಕು ನಿನಗೆ ನಾನು ಪರಪುರುಷ ಅದೂ ಅಲ್ಲದೆ ನೀನು ಪ್ರಾಯದವಳು ಬಾಲ್ಯದ ಆಟಪಾಟಗಳನ್ನು ಮರೆಯಬೇಕು ಪ್ರಾಯ ಬಂದಮೇಲೆ ಶೀಲವಾಗಿ ಬಾಳಬೇಕಾದ ಹೊರೆ ತಲೆಯಮೇಲೆ ಬಂದು ಹೇರುತ್ತದೆ"

"ನಮ್ಮ ತಾಯಿಯನ್ನೂ ನನ್ನನ್ನೂ ನೀವು ದೂರ ಮಾಡಿರುವಂತೆ ಕಾಣುತ್ತದೆ"

"ಹಾಗೇನು ಇಲ್ಲವಲ್ಲ" ಎಂದು ಹೇಳುತ್ತಾ, ರಂಗಯ್ಯ ಫಲಹಾರ ಮುಗಿಸಿ ಬಸವಯ್ಯನೂ ತಿಮ್ಮಕ್ಕನೂ ಮಾತನಾಡುತ್ತಿದ್ದಲ್ಲಿಗೆ ಬಂದು ಕುಳಿತನು ಹಿಂದೆಯೇ ಲಿಂಗಮ್ಮನು ಬಂದು ಹಜಾರದ ಕಂಭವನ್ನು ಒರಗಿ ನಿಂತುಕೊಂಡಳು

ತಿಮ್ಮಕ್ಕನು ರಂಗಯ್ಯನ ಕಡೆ ತಿರುಗಿ ದುಃಖದ ಧ್ವನಿಯಿಂದ "ನೀವು ಬಂದಿರೋದು ನಮ್ಮ ಪುಣ್ಯ ನಿಮ್ಮ ಮಾವನವರು ಜೀವ ಬಿಟ್ಟಾಗ ನಿಮ್ಮ ಹೆಸರನ್ನೇ ಹೇಳುತ್ತಾ ಪ್ರಾಣ ಬಿಟ್ಟರು ವಿಧಿ ನನ್ನನ್ನೇ ಕೈವಾಡ ಮಾಡಿ ಮದುವೆಯನ್ನ ಮುರಿಯಿತು. ಅದನ್ನೆಲ್ಲ ಮನಸ್ಸಿನಲ್ಲಿಟ್ಟುಕೋಬೇಡಿ ನೋಡಿ, ಇವಳು ಮದುವೆಯಾಗಂದಿನಿಂದ ಗಂಡನ ಮನೆಯಲ್ಲಿ ನಿಲ್ಲುವುದೇ ಇಲ್ಲ ಅವಳ ಮನಸ್ಸಿನಲ್ಲಿ ಏನಿದೆಯೋ ಯಾರು ಬಲ್ಲ. ನೀವು ಇವಳಿಗೆ ಬುದ್ಧಿ ಹೇಳಿ ಅವಳ ಬಾಯಿಂದ "ಇನ್ನುಮೇಲೆ ಗಂಡನ ಮನೆಯಲ್ಲಿ ಬಾಳ್ತೀನಿ" ಅನ್ನಿಸಿಕೊಂಡು ನಿಮ್ಮ ಊರಿಗೆ ಹೋಗಿ ನನಗೆ ಇವಳದೇ ಒಂದು ದೊಡ್ಡ ಕೊರತೆ" ಎನ್ನುತ್ತಾ, ಸುರಿಯುತ್ತಿದ್ದ ಕಣ್ಣೀರನ್ನು ಒರಸಿಕೊಂಡಳು

"ನಾನು ಯಾವ ಬುದ್ಧಿವಂತ, ಲಿಂಗಮ್ಮನಿಗೆ ತಿಳಿವಳಿಕೆ ಹೇಳುವುದಕ್ಕೆ? ನಿಮ್ಮ ಜೀವಮಾನದಲ್ಲಿ ಎಷ್ಟೋ ಕಷ್ಟಸುಖಗಳನ್ನು ಅನುಭವಿಸಿದ್ದೀರಿ ನೀವೇ ಹೇಳಿ, ಕೇಳುತ್ತಾಳೆ ಅವಳಿಗೂ ವಯಸ್ಸಾಗಿದೆ" ಎಂದ ರಂಗಯ್ಯ

"ನಾನೂ ಬೇಕಾದಹಾಗೆ ಹೇಳಿದೆ"

ಬಸವಯ್ಯನ ಕಡೆ ತಿರುಗಿ "ಏನು ಬಸವಯ್ಯನವರೇ! ಲಿಂಗಮ್ಮ ನಿಗೆ ನಾನು ಬುದ್ಧಿಹೇಳುವ ಸನ್ನಿವೇಶವನ್ನು ತಂದೊಡ್ಡಿದ್ದೀರಿ" ಎಂದು ಹೇಳಿದ ರಂಗಯ್ಯ

"ನೀವು ತಿಳಿವಳಿಕೆ ಹೇಳದೆ ಇನ್ನಾರು ಹೇಳುತ್ತಾರೆ ಆಕೆಗೆ?" ಎಂದ ಬಸವಯ್ಯ

ರಂಗಯ್ಯ ನಗುತ್ತಾ! "ನಾನಾರು ಆಕೆಗೆ ತಿಳುವಳಿಕೆ ಹೇಳುವುದಕ್ಕೆ?" ಎಂದ ಲಿಂಗಮ್ಮ ಮಧ್ಯೆ ಬಾಯಿಹಾಕಿ 'ನೀವು ಯಾರೆ ಆಗಿರಿ. ನಮ್ಮ ತಾಯಿಗೆ ಕಣ್ಣುಕಟ್ಟಿ ಕಾಡಿಗೆ ಬಿಟ್ಟಂತಿದೆ, ಈ ಸಂಸಾರ ಸಾಗಿ ಸೋದು ಆಗಾಗ್ಗೆ ನೀವು ಊರಿಗೆ ಬಂದು ಧೈರ್ಯಹೇಳಬೇಕು ನನ್ನನ್ನು ನೀವು ಮರೆತೇ ಬಿಟ್ಟಿರಿ" ಎಂದಳು

ಲಿಂಗಮ್ಮನ ಮನಸ್ಸು ತಳಮಳಗೊಂಡಿತು ಬಾಯಿತಪ್ಪಿ ಏನೋ ಹೇಳಿಬಿಟ್ಟೆನಲ್ಲ ನನ್ನ ಮನಸ್ಸು, ಆಕಾಂಕ್ಷೆ ಅವರಿಗೆ ಅರ್ಥವಾಯಿತು. ಏನೆಂದು ತಿಳಿದಾರು ನನ್ನನ್ನು? ಏನಾದರೂ ತಿಳ್ಕೊಳ್ಳಲಿ ಮನಬಿಚ್ಚಿ ಮಾತಾಡಿವೆ, ಅದರಲ್ಲಿ ತಪ್ಪೇನು? ನನ್ನ ಶರೀರದಲ್ಲಿ ಅಡಗಿದ್ದ ಆಶೆಯನ್ನು ನೇರವಾಗಿ ಹೇಳದಿದ್ದರೂ ಅದರ ಭಾವವನ್ನು ಹೊರಸೂಸುವ ಮಾತುಗಳನ್ನಾಡಿದೆ" ಎಂದುಕೊಂಡು ಬಗ್ಗಿದ ತಲೆಯನ್ನು ಮೇಲೆತ್ತದೆ ಮೆಲುಧ್ವನಿಯಲ್ಲಿ ಮತ್ತೆ ಹೇಳಿದಳು—

"ನನ್ನ ಮಾತಿಗೆ ಏನೇನೋ ತಪ್ಪು ಅರ್ಥ ಕಲ್ಪಿಸಿಕೋಬೇಡಿ. ಆಮೇಲೆ ನನಗೆ ಮನಸ್ಸಿಗೆ ಮತ್ತಷ್ಟು ನೋವಾಗುತ್ತದೆ ಹಿಂದಿನ ಸಲಿಗೆಯಿಂದ ಮಾತಾಡಿದೆ ಅಷ್ಟೆ"

ಆಕೆಯ ತೆರದ ಮನಸ್ಸನ್ನು ಅರಿತು ರಂಗಯ್ಯ ಶಾಂತವಾಗಿ ಎಲ್ಲವನ್ನೂ ಕೇಳಿದ ದೇಹವನ್ನು ಕೊರೆಯುತ್ತಿದ್ದ ಚಿಂತೆಗೆ ಕಾರಣವಾದ ತನ್ನಲ್ಲಿಟ್ಟಿದ್ದ ಆ ಆಶೆಯನ್ನು ತೋರ್ಪಡಿಸಿದ ಲಿಂಗಮ್ಮನ ಸ್ಥಿತಿಗೆ ಮನ ಮರುಗಿದ ಆ ಪ್ರೇಮ ಆತ್ಮ ತೃಪ್ತಿಗಿರಬಹುದು ದೇಹ ತಣಿಯಲು ಬಚ್ಚಿಟ್ಟ ಆಶೆಯಲ್ಲ' ಎಂದರಿತು ಅವನು ಹೇಳಿದ--

"ನೋಡು—ನಾನು ಯಾವ ಅರ್ಥವನ್ನೂ ನಿನ್ನ ಮಾತಿಗೆ ಕಟ್ಟುವುದಿಲ್ಲ ಆದರೂ ಜನರು ಏನಂದಾರು? ಹೀಗೆ ಪ್ರಾಯದ ಹೆಣ್ಣು

ಗಂಡನ ಮನೆ ಬಿಟ್ಟು ತವರಿಗೆ ಓಡಿದರೆ ಸಂಸಾರ ಸುಖವಾಗಿ ಸಾಗುತ್ತದೆಯೆ? 'ಬೇರೆ ಹೆಣ್ಣುಮಕ್ಕಳು ಇವಳ ಹೆಜ್ಜೆಯನ್ನೇ ತುಳಿದಾವು' ಎಂದು ಅಪಹಾಸ್ಯ ಮಾಡುವುದಿಲ್ಲವೆ? ಸ್ವಲ್ಪ ಯೋಚನೆಮಾಡು"

"ಜನರ ಮನಸ್ಸನ್ನು ಮೆಚ್ಚಿಸೋಕೆ ಶಿವನ ಕೈಯಲ್ಲೂ ಆಗದು! ತಮ್ಮ ತಮ್ಮ ಇಚ್ಛೆಗೆ ಬಂದಂತೆ ಮಾತಾಡುತ್ತಾರೆ. ನನ್ನ ಜೀವದ ನೋವು ನನಗೆ ಗೊತ್ತು, ಬೇರೆಯವರಿಗೇನು ತಿಳಿದೀತು?"

"ನಿನ್ನ ಅಂತರಂಗದ ದುಃಖವನ್ನು ಜನರಿಗೆ ಹಂಚುವುದು ಸಾಧ್ಯವೆ? ನೀನೆ ಅದನ್ನು ಅನುಭವಿಸಬೇಕು. ನಮ್ಮ ನಮ್ಮ ಸಂಕಟಕ್ಕೆ ಅವರಿವರನ್ನು ಹೊಣೆಮಾಡಿದರೆ ಆದೀತೆ?—ಕಷ್ಟ, ಕಷ್ಟ ಅಂತ ಚಿಂತಿಸುತ್ತಿದ್ದರೆ ಕಷ್ಟ ಹೇಗೆ ಪರಿಹಾರವಾಗಬೇಕು? ನೀನೆ ಯೋಚನೆ ಮಾಡು"

"ಕಷ್ಟ, ಸಂಕಟ ನನ್ನ ತಲೆಯಮೇಲೆ ಪರ್ವತ ಬಿದ್ದಹಾಗೆ ಇರುವಾಗ ಮತ್ತೇನು ಮಾಡಬೇಕೂಂತೀರಿ?"

"ಇದೆಲ್ಲಾ ಮನುಷ್ಯರಿಗೆ ಬರದ ಮರಕ್ಕೆ ಬರುತ್ತದೆಯೆ? ನಮ್ಮಂಥವರು ಎಷ್ಟೋ ಮಂದಿ ಇನ್ನೂ ಹೆಚ್ಚಾದ ಸಂಕಟಗಳನ್ನನುಭವಿಸುತ್ತಾರೆ ಎಂದು ತಿಳಿದು ಕಷ್ಟಗಳನ್ನು ಮರೆಯುವುದಕ್ಕೆ ಪ್ರಯತ್ನಪಡಬೇಕು. ಅದೇ ಅದಕ್ಕೆ ಔಷಧ"

"ನೀವೂ ಏನೇನೋ ಹೇಳುತ್ತೀರಿ, ಇವೆಲ್ಲ ಕಣ್ಣೊರಸುವ ಮಾತುಗಳು"

"ನಾನು ನಿನ್ನ ಹಿತಕ್ಕಾಗಿ ಹೇಳುತ್ತಿರುವುದು ಕಣ್ಣೀರು ಸುರಿಸುತ್ತಿರುವವರ ಕಣ್ಣನ್ನು ಒರಸದೆ ಇನ್ನೂ ಕಣ್ಣೀರು ಸುರಿಸಿ, ನಾನು ನೋಡುತ್ತಾ ಇರ್ತೀನೆ ಅನ್ನಲೇನು?" ಎಂದು ಹುಸಿನಗೆಯನ್ನು ರಂಗಯ್ಯ ಬೀರಿದ ಆ ನಗೆಯ ಹಿಂದೆ ಲಿಂಗಮ್ಮನಿಗಾಗಿ ನೋಯುತ್ತಿರುವ ತನ್ನ ಹೃದಯವೇದನೆ ಅಡಗಿತ್ತು

"ನನ್ನ ಮಾತು ಹಾಗಲ್ಲ ಕಣ್ಣೀರು ಬರದಂತೆ "

"ಅದೆಲ್ಲಾ ನಮ್ಮ ನಮ್ಮ ಅದೃಷ್ಟವೆಂದು ಸಮಾಧಾನ ಹೊಂದುವುದೊಂದೆ ಅದಕ್ಕೆ ಮಾರ್ಗ"

"ಏನು ಅದೃಷ್ಟ. ಎಲ್ಲಾ ಈ ಹಿರಿಯರು ಮಾಡಿ ನನ್ನ ತಲೆ ಮೇಲೆ ಹೊರಿಸಿರುವ ಕಲ್ಲುಚಪ್ಪಡಿಯನ್ನೇ ನೀವು ಅದೃಷ್ಟ ಅನ್ನುತೀರಿ ತಿಳ್ದಾತಿಳ್ದಾ" ಎಂದು ದುಃಖದಿಂದ ಭಾರವಾಗಿದ್ದ ದನಿಯಲ್ಲಿ ಲಿಂಗಮ್ಮ ಹೇಳಿ, ತನ್ನ ಸೆರಗಿನ ತುದಿಯಿಂದ ಹನಿಗೂಡಿದ್ದ ಕಣ್ಣುಗಳನ್ನು ಒರಸಿಕೊಂಡಳು

"ಅದೃಷ್ಟ ಅವರ ಕೈಯಲ್ಲಿದೆಯೇನು? ಎಲ್ಲಾದರೂ ಉಂಟೆ! ನಮ್ಮ ನಮ್ಮ ಜೀವನದ ದಾರಿ ಹೇಗಿದೆಯೊ ಅದು ಅವರ ಮುಖೇನ ರೂಪುಗೊಳ್ಳುತ್ತದ"

"ಆದರೂ ಹೆಣ್ಣು ಮಕ್ಕಳಿಗೆ ತಿಳುವಳಿಕೆ ಇಲ್ಲದಾಗ ಅವರು ಏನು ಮಾಡಿದರೂ ಸರಿಯೆ, ಅವರ ಕೈಯಲ್ಲಿದ ಅವರು ಮಾಡಿದ್ದೆ ನಮ್ಮ ಅದೃಷ್ಟವಾಗ್ತದ"

"ಅದೃಷ್ಟನೇನು ಮಾಡುತ್ತದೆ? ಮನುಷ್ಯರಲ್ಲಿ ಒಂದು ಕಟ್ಟು ನಿಟ್ಟು ಇ [illegible] ತಂದ [illegible]ಯುಂದಿರನ್ನು ಬಿಟ್ಟು ಸ್ವೇಚ್ಛೆ [illegible] ನಡೆಯುವುದರಲ್ಲಿ ತಾನೆ ಒಳ್ಳೆಯ [illegible]

"ಈ [illegible] ಹಿರಿಯರ ಹೆಣ್ಣು ಮಕ್ಕಳ [illegible] ಮೇಲೆ [illegible] ಮಕ್ಕಳಿಗೆ ಬುದ್ಧಿ ಚೆನ್ನಾಗಿ ಬ [illegible] ಹಿರಿಯರ ಮದುವೆ ಮಾಡಿ, ಆದರ [illegible] ಆಗ 'ಅದೃಷ್ಟನೇ ಹೀಗೆ' ಎಂದಾವದೂ [illegible]

ತಿಳಿಸಿಸುವ [illegible] ಲಿಂಗಮ್ಮನ ಪ್ರಶ್ನೆಗಳಿಗೆ ರಂಗಯ್ಯ ಸಮಾಧಾನದ ಉತ್ತರವನ್ನು ಹೇಳಲು ತವರಿಸಬೇಕಾಯಿತು.

"ನೀನು ಹೇಳುವುದಲ್ಲಾ ನ್ಯಾಯ ಅದದ್ದು ಆಯಿತು. ಹೇಗೋ ಅನುಸರಿಸಿಕೊಂಡು ಹೋಗುವವರಲ್ಲ ಸುಖವಿದ ಹಗಲೆಲ್ಲಾ ಅದನ್ನೇ ಮೆಲಕು ಹಾಕಿದರೆ ಏನು ಪ್ರಯೋಜನ ಬಂದಹಾಗಾಯಿತು?"

"ಏನು ಸುಖವಿದಯೋ ನಾನುಬೇರೆ ಕಾಣೆ ಒಂದು ಸಾರಿ ಎಳೆದ ಬರೆ ಈ ಜೀವವಿರುವತನಕ ನೋಯುತ್ತಲೇಇರ್ತದೆ ಅದನ್ನ ಮರೆಯುವ

ಅಂದರೆ ಸಾಧ್ಯವೇ ಇಲ್ಲ. ಹೇಗೊ ನುಸಿದುಬಂದು ತನ್ನ ತಲೆಯೊಳಗೆ ತುಂಬಿಕೊಳ್ಳುತ್ತದೆ. ಏನು ಮಾಡಲಿ, ನೀವೇ ಹೇಳಿ''

"ಅದನ್ನೆಲ್ಲಾ ಮರೆಯುವುದರಲ್ಲೇ ಸುಖವಿರುವುದು"

''ಅದ್ಹೇಗೆ ಮರೆಯಬೇಕೊ ದೇವರೇ ಬಲ್ಲ! ಅಂತು ಹೇಗೆ ಬಾಳಬೇಕೂ ನಾನರಿಯೆ? ನನ್ನ ಕಣ್ಣಿನೆದುರು ಅದೊಂದು ದೊಡ್ಡ ಭೂತ ಕಂಡಹಾಗೆ ಕಾಣ್ತಾದೆ''

"ಹಾಗೆಲ್ಲಾ ಜೀವನದಲ್ಲಿ ಬೇಸರ ಹೊಂದಬಾರದಂದೇ ನಾನು ಹೇಳುತ್ತಿರುವುದು"

"ಅಂತೂ ನೀವೂ ನನ್ನ ಕಣ್ಣಿಗೆ ಮಣ್ಣೆರಚಲು ಬಂದಿದ್ದೀರಿ'' ಎಂದು ಲಿಂಗಮ್ಮ ಹೇಳುತ್ತಾ ತನ್ನ ದೈನ್ಯ ದೃಷ್ಟಿಯನ್ನು ಚಲ್ಲುತ್ತಿದ್ದ ಕಣ್ಣುಗಳನ್ನು ಬಿಟ್ಟು ರಂಗಯ್ಯನ ಕಡೆ ನೋಡಿದಳು ರಂಗಯ್ಯನೂ ನೋಡಿದ ಆ ದೃಷ್ಟಿಯಲ್ಲಿ ಅಂತರಂಗದ ವೇದನೆ ತುಂಬಿ ತುಳುಕಾಡುತ್ತಿತ್ತು ನಿಮ್ಮನ್ನೇ ಆಸರೆ ಕಂಬವೆಂದು ತಬ್ಬಿದ್ದೆನೆಂಬ ಮನೋಭಿಪ್ರಾಯವನ್ನು ತಿಳಿಸುತ್ತಿತ್ತು, ಆಕೆಯ ಪ್ರೇಮಪೂರಿತ ದೈನ್ಯದೃಷ್ಟಿ ರಂಗಯ್ಯ ಆಕೆಯ ಕಡೆ ತಿರುಗಿ ''ನೀನು ಈ ರೀತಿ ಗಂಡನ ಮನಗೆ ಹೋಗದ ಇರುವುದು ಸರಿಯಲ್ಲ ಹೆಣ್ಣುಮಕ್ಕಳು ಲಗ್ನವಾದಮೇಲೆ ತೌರುಮನೆಗೂ, ಗಂಡನಮನೆಗೂ ಬಂಧು ಬಳಗದವರಿಗೂ ಕೀರ್ತಿ ತರಬೇಕು. ನೀನು ಅಪಕೀರ್ತಿಯನ್ನು ಹೊಂದಿದರ ನಿನ್ನ ಸ... ಯಾದ ನನಗೂ ಅಪಕೀರ್ತಿ ಬರುತ್ತದ ನೀನು ಗಂಡನ ಮನಯಲ್ಲಿ ಬಾಳದಿದ್ದಲ್ಲಿ ನಾನು ಇನ್ನು ಮೇಲೆ ಇಲ್ಲಿಗೆ ಕಾಲಿಡುವುದಿಲ್ಲ'' ಎಂದ ರಂಗಯ್ಯನ ಬುದ್ಧಿವಾದದಿಂದ ಲಿಂಗಿಗೆ ಮುಸುಕಿದ್ದ ಅಜ್ಞಾನ ನೀಗಿತು "ನೀವು ಹೇಳಿದಂತೆಯೇ ಆಗಲಿ ಮಾವಯ್ಯ'' ಎಂದಳು ಆಕೆ ಇವರ ವಾದವಿವಾದವನ್ನೆಲ್ಲಾ ತಿಮ್ಮಕ್ಕನೂ ಬಸವಯ್ಯನೂ ಮೂಕರಂತೆ ಕೇಳುತ್ತಾ ಕುಳಿತಿದ್ದರು ನೊಂದ ಹೆಣ್ಣು ಹೃದಯದಿಂದ ಬರುತ್ತಿದ್ದ ಲಿಂಗಮ್ಮನ ಪ್ರಶ್ನೆಗಳಿಗೆ ಲೋಕ ವ್ಯವಹಾರ ಜ್ಞಾನದಿಂದ ಕೂಡಿದ ರಂಗಯ್ಯನ ಉತ್ತರವೆಲ್ಲಾ ಬಸವಯ್ಯನಿಗೆ ವಿಸ್ಮಯವನ್ನುಂಟುಮಾಡಿತು

ಬಸವಯ್ಯ—''ರಂಗಯ್ಯನವರೇ, ನೀವು ಲಿಂಗಮ್ಮನನ್ನು ಮದುವೆ

ಯಾಗದಿದ್ದರೂ ಚಿಂತೆಇಲ್ಲ, ನಿಮ್ಮ ಬುದ್ಧಿವಾದದಿಂದ ಆಕೆಯ ಮನಸ್ಸು ಬದಲಾಯಿಸಿತು ಅಷ್ಟೇ ಬೇಕಾಗಿದ್ದುದು" ಎಂದ ತನ್ನ ಸೊಸೆಯ ಮನಸ್ಸು ಬದಲಾಯಿಸಿದ ಸಮಾಚಾರವನ್ನು ಮದುವೆಗೆ ಬಂದಿದ್ದ ಮುತ್ತಣ್ಣನಿಗೆ ಬಸವಯ್ಯ ತಿಳಿಸಿದ ರಂಗಯ್ಯನ ಬುದ್ಧಿಯನ್ನು ಮುತ್ತಣ್ಣನೂ ಹೊಗಳದೆ ಇರಲಿಲ್ಲ

ರಂಗಯ್ಯ ಎರಡು ದಿನ ಇದ್ದು, ಮದುವೆ ಮುಗಿದಮೇಲೆ ಲಿಂಗಮ್ಮನಿಗೂ ತಿಮ್ಮಕ್ಕನಿಗೂ ತಾನು ಹೋಗುವುದಾಗಿ ಹೇಳಿದ ಲಿಂಗಮ್ಮ ಇನ್ನೆರಡು ದಿನ ಇದ್ದುಹೋಗಿ ನಮ್ಮ ಗಿಡಸೀಮೆ ಬೇಜಾರಾ? ಎಂದಳು. ರಂಗಯ್ಯ "ನಾನು ಹೋಗಲೇಬೇಕು ಯಾವುದೋ ಕೆಲಸವಿದೆ" ಎಂದ. "ಇನ್ನೊಂದು ಸಾರಿ ಖಂಡಿತಾ ಬನ್ನಿ ಇಲ್ಲಿಗೆ ಬಂದಾಗ ನಮ್ಮೂರಿಗೆ ಕರಸ್ಕೋನೆ-ಅಕ್ಕಾರ್ನೂ ಕರತನ್ನಿ ಜೊತೇಲಿ" ಎಂದು ನಗು ಮುಖದ ಮೇಲೆ ಮಿನುಗುತ್ತಿರಲು ಹೇಳಿದಳು "ಹಾಗೆಯೇ ಆಗಲಿ" ಎಂದು ರಂಗಯ್ಯ ಲಿಂಗಮ್ಮನಿಗೆ ಹೇಳಿ ಮಾರನೆಯ ಬೆಳಗ್ಗೆ ರಾಮನಗರದಿಂದ ಹೊರಟ ಸ್ವಲ್ಪದೂರ ಎತ್ತಿನ ಬಂಡಿಯನ್ನು ಕಟ್ಟಿಸಿದರು ತಿಮ್ಮಕ್ಕನೂ ಬಸವಯ್ಯನೂ 'ಹೋಗಿ ಬನ್ನಿ' ಎಂದು ಬೀಳ್ಕೊಟ್ಟರು ಲಿಂಗಮ್ಮ ರಂಗಯ್ಯನನ್ನು ಸ್ವಲ್ಪದೂರ ಹಿಂಬಾಲಿಸಿ ಕಣ್ಣಿನಲ್ಲಿ ನೀರು ತುಂಬಿಕೊಂಡು "ಮಾವಯ್ಯ, ನಿಮ್ಮ ಮಾತಿನಂತೆ ನೀವು ನಡೆದುಕೊಳ್ಳಬೇಕು ನನ್ನ ಮಾತಿನಂತೆ ನಾನು ನಡೆದುಕೊಳ್ಳುತ್ತೇನೆ ನಿಮ್ಮ ಬುದ್ಧಿವಾದದಿಂದ ನನ್ನ ಮನಸ್ಸು ಬದಲಾಯಿಸಿತು ಹೋಗಿ ಬರುತ್ತೀರ"? ಎಂದಳು. ರಂಗಯ್ಯ ಅಗಲಿಕೆಯ ಸಂಕಟದಿಂದ "ಆಗಲಿ ನೀನು ಅವರ ಜೊತೆಯಲ್ಲೇ ಹೋಗು" ಎಂದು ಲಿಂಗಮ್ಮನನ್ನು ಕಳುಹಿಸಿದ ಅವನು ಮೋಟಾರನ್ನು ಹತ್ತಿ ಊರು ಸೇರಿದ, ಲಿಂಗಮ್ಮ ನಗುಮುಖದಿಂದ ಗಂಡನ ಜೊತೆಯಲ್ಲಿ ನವಲೂರಿಗೆ ಹೋದಳು

---

Printed at SREE SITARAGHAVA PRESS, MYSORE.